॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ—೧೯.

# ಶ್ರೀ ಲಿಂಗಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ)

ಪೂರ್ವಭಾಗ—ಸಂಪುಟ ೪

ಅಧ್ಯಾಯಗಳು ೮೮–೧೦೮

ಅನುವಾದಕ:

ಆಸ್ಥಾನ ಮಹಾವಿದ್ವಾನ್

**ಎಡತೊರೆ ಚಂದ್ರಶೇಖರ ಶಾಸ್ತ್ರೀ, ಎಂ.ಎ.**

**ಸಾಹಿತ್ಯ ವಿದ್ವಾನ್**

**ಮೈಸೂರು:**

**ಬೆಂಗಳೂರು ಪ್ರೆಸ್ ಬ್ರಾಂಚ್**

೧೯೪೭

# ಮುನ್ನುಡಿ

॥ ಶ್ರೀ ಗಣೇಶಶಾರದಾ ಗುರುಭ್ಯೋನಮಃ ॥

ಪುರಾಣಗಳು ಹಿಂದಿನಕಾಲದಲ್ಲಿದ್ದ ಮಹಾಪುರುಷರ ಚರಿತ್ರೆ ಕಥೆಗಳನ್ನು ತಕ್ಕಂತೆ ವಿಸ್ತರಿಸಿ ಹೇಳುತ್ತವೆ. ಆ ಮಹಾನುಭಾವರು ತಮ್ಮ ದಿನಗಟ್ಟಲೆಯ ಜೀವನ ಕ್ರಮದಲ್ಲೂ, ವಿಶೇಷ ಸನ್ನಿವೇಶಗಳಲ್ಲೂ, ಅನುಸರಿಸುತ್ತಿದ್ದ ನೀತಿಗಳನ್ನೂ, ಆಚರಿಸುತ್ತಿದ್ದ ಧರ್ಮಗಳನ್ನೂ ವರ್ಣಿಸಿ ತಿಳಿಯಿಸುತ್ತವೆ. ಎಲ್ಲಕ್ಕಿಂತ ಮೇಲಾಗಿ ತತ್ವವನ್ನು ಎಂದರೆ ಈ ಪ್ರಪಂಚ, ಜೀವರು, ಈಶ್ವರ, ಇವರ ಮೂಲಕ ತತ್ವದ ಸ್ವರೂಪವನ್ನು ವಿಶದವಾಗಿ ವಿವರಿಸಿ, ಹೃದಯಂಗಮವಾಗಿರುವಂತೆ ತಿಳಿಯ ಹೇಳುತ್ತವೆ. ಈ ಪುರಾಣಗಳ ವ್ಯಾಸಂಗದಿಂದ ಉಂಟಾಗುವ ತಿಳಿವಳಿಕೆಯು ನಮ್ಮ ಜೀವನಕ್ರಮದಲ್ಲಿ ನಮಗೂ ಬಂದೊದಗುವ ಸಮಸ್ಯೆಗಳನ್ನು ಬಿಡಿಸಿಕೊಂಡು ಸರಿಯಾದರೀತಿಯಲ್ಲಿ ನಾವೂ ಮುಂದುವರಿಯಲು ಸಹಾಯಮಾಡುತ್ತದೆ. ಆದುದರಿಂದ ಪುರಾಣಶಬ್ದಕ್ಕೆ "ಪುರಾಽಪಿ ನವಮಿವ ಪುರಾಣಂ" ಎಂದೂ, "ಪುರಾ ನೀಯತೇ ಇತಿ ಪುರಾಣಂ" ಎಂದೂ, ವ್ಯುತ್ಪತ್ತಿಯನ್ನು ವಿವರಿಸಿರುವುದು ಉಚಿತವಾಗಿ ಅನ್ವರ್ಥವಾಗಿರುವಂತೆ ಕಂಡು ಬರುತ್ತದೆ. ಇದರಿಂದ ಕಥೆಗಳೂ ವ್ಯಕ್ತಿಗಳೂ ಭಿನ್ನವಾದರೂ, ವೇದಾಂತ ತತ್ವವು ಒಂದೇ ಆಗಿರುತ್ತದೆಂಬುದೂ, ನಮಗೆ ಮನವರಿಕೆ ಯಾಗುತ್ತದೆ. ಆದುದರಿಂದಲೇ ಈ ಉತ್ತಮ ಗ್ರಂಥಗಳು ಜನಾದರಕ್ಕೆ ಪಾತ್ರವಾಗಿ ರುತ್ತಾ, ಅವರ ನಡೆ, ನುಡಿ, ಭಾವ, ಗಳೆಂಬ ಸಂಸ್ಕೃತಿಯನ್ನು ಬೆಳೆ ಯಿಸಿ ಮೇಲ್ಪಡಿಸುತ್ತಿರುತ್ತವೆ. ಇದರಿಂದ ನಮಗೆ ಸತ್ಕಾರ್ಯದಲ್ಲಿ ಪ್ರವೃತ್ತಿಯೂ, ಅಸತ್ಕಾರ್ಯದಿಂದ ನಿವೃತ್ತಿಯೂ ಫಲಿಸುತ್ತದೆ. ಹೀಗೆ

ಅರ್ಥಕಾಮಗಳಲ್ಲೇ ಆಸಕ್ತವಾಗಿರುವ ಜನಗಳ ಮನಸ್ಸು, ಧರ್ಮಮೋಕ್ಷಗಳ ಕಡೆಗೆ ಒಲಿಯುವಂತೆ ಮಾಡುವುದು ಈ ಪುರಾಣಗಳ ಉದ್ದೇಶವಾಗಿದೆ. ಈ ಕಾರಣದಿಂದ ಪುರಾಣಗಳನ್ನು ಸನ್ಮಿತ್ರನೆಂದು ಸಾಹಿತ್ಯದಲ್ಲಿ "ಯಚ್ಚಾರ್ಥಪ್ರವಣಾತ್ ಪುರಾಣವಚನಾದಿಷ್ಟಂ ಸುಹೃತ್ಸಂಮಿತಾತ್" ಎಂದು ಮನಗಾಣುವಂತೆ ಬೋಧಿಸಿರುತ್ತದೆ.

ಶ್ರೀಲಿಂಗಮಹಾಪುರಾಣದ ಈ ಭಾಗದಲ್ಲಿ ಅಂಧಕಾಸುರ ಸಂಹಾರ, ವರಾಹ, ನೃಸಿಂಹ, ಶರಭ, ಈ ಅವತಾರಗಳು, ವಿಷ್ಣುಚಕ್ರಪ್ರಾಪ್ತಿ, ದಕ್ಷಯಜ್ಞನಾಶನ, ಪಾರ್ವತೀಪರಮೇಶ್ವರರ ವಿವಾಹ, ವಿನಾಯಕೋತ್ಪತ್ತಿ, ಮಹಾಕಾಳಿಯ ಆವಿರ್ಭಾವ, ಉಪಮನ್ಯುವಿನ ಕಥೆ, ಇವುಗಳಿಂದ ಶಿವಪಾರಮ್ಯವನ್ನು ಹೇಳಿದೆ. ಆದರೂ ವಿಷ್ಣುವಿನ ಪೂಜ್ಯತೆಯನ್ನೂ ವಿವರಿಸಿ, ಶಿವವಿಷ್ಣುಗಳ ಅಭೇದವನ್ನು ಬೋಧಿಸಿ, ಭೇದಬುದ್ಧಿಯನ್ನು ಮಾಡಬಾರದೆಂದೂ, ಹಾಗೆ ಮಾಡಿದರೆ ಅದರಿಂದ ಕೆಡಕಾಗುವುದೆಂದೂ, ತಿಳಿಯಹೇಳುತ್ತಾ, ಶಿವಭಕ್ತಿಯು ಸಿದ್ಧಿಸಬೇಕಾದರೆ ವಿಷ್ಣುಭಕ್ತಿಯು ಅವಶ್ಯಕವೆಂದೂ ಉಪದೇಶಿಸಿದೆ. ಹಾಗೆಯೇ ಶಿವಶಕ್ತ್ಯಭೇದವನ್ನೂ ಹೇಳಿ, ತ್ರಿಮೂರ್ತಿಗಳ ಕಾರ್ಯನಿರ್ವಾಹಸಾಮರ್ಥ್ಯಕ್ಕೆ ಮೂಲಾಧಾರವಾದ ಶಕ್ತಿಯೇ ಪಾರ್ವತೀದೇವೀಎಂದೂ, ಅದು ಸೃಷ್ಟಿಪಾಲನರೂಪವಾದ ಬ್ರಹ್ಮ ವಿಷ್ಣು ಇವರ ಕಾರ್ಯದಲ್ಲಿ ಸಫಲವಾಗಿ ಮುಗಿಯಲು ರುದ್ರನ ಕಾರ್ಯವಾದ ಉಪಸಂಹಾರದಲ್ಲಿ ಪರಿಣಾಮವಾಗುವುದೆಂದೂ, ವಿವರಿಸಿದೆ. ಹೀಗೆ ಅಧ್ಯಾರೋಪ ಅಪವಾದ ಕ್ರಮದಿಂದ ವೇದಾಂತದ, ಅದ್ವೈತ ಬ್ರಹ್ಮತತ್ವವನ್ನು ತಿಳಿಯಹೇಳಿದೆ. "ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬ್ರಂಹಯೇತ್ ।" ಎಂದರೆ ವೇದಗಳಲ್ಲಿ ಸೂಚಿಸಿರುವ ಧರ್ಮತತ್ವಗಳನ್ನು ಇತಿಹಾಸ ಪುರಾಣಗಳಲ್ಲಿ ವಿಸ್ತರಿಸಿ ವಿವಸಿದೆ. ಅಲ್ಲದೆ "ಅವಮಾನೋಽಮೃತಂ ತತ್ರ ಸನ್ಮಾನೋ ವಿಷಮುಚ್ಯತೇ" ೮೯. ೪, "ಸತ್ಯಪೂತಂ ವದೇದ್ವಾಕ್ಯಂ ಮನಃಪೂತಂ ಸಮಾಚರೇತ್" ೮೯.೭. ಎಂದು ಮುಂತಾದ ವಿಶ್ವಧರ್ಮಗಳನ್ನು, ಎಂದರೆ ಎಲ್ಲದೇಶ ಕಾಲಗಳಲ್ಲಿ ಎಲ್ಲರಿಗೂ ಆದರ ಪಾತ್ರವಾಗಿರುವ ನೀತಿಧರ್ಮಗಳನ್ನೂ, ಉಪದೇಶಿಸಿದೆ. ಈ ಎಲ್ಲ ಕಾರಣಗಳಿಂದ ಇದು ಮಹಾಪುರಾಣವೆನಿಸಿಕೊಳ್ಳಲು ಅರ್ಹವಾಗಿದೆ.

ಆಂಧ್ರಲಿಪಿಯಲ್ಲಿರುವ ಮತ್ತು ದೇವನಾಗರೀಲಿಪಿಯಲ್ಲಿರುವ ಈ ಮಹಾಪುರಾಣದಲ್ಲಿ ಕಂಡುಬರುವ ಮುಖ್ಯವಾಗಿರುವ ಪಾಠಭೇದ

ಗಳಲ್ಲಿ ೧೦೩ ನೆಯ ಅಧ್ಯಾಯದ ಶ್ಲೋಕದ ಮುಂದೆ "ಜಗತೋ ಮಾತರಸ್ಸರ್ವಾಃ ದೇವಕನ್ಯಾಶ್ಚ ಸರ್ವಶಃ। ಗಾಯತ್ರೀಚೈವ ಸಾವಿತ್ರೀ ಜ್ಯೋತ್ಸ್ನಾ ಸಂಧ್ಯಾ ಪ್ರಭಾ ಸ್ವಯಂ। ಉದ್ವಾಹಂ(ಃ) ಶಂಕರಸ್ಯೇತಿ ತತ್ರಾಜಗ್ಮುಸ್ಸಹಸ್ರಶಃ ॥" ಈ ಶ್ಲೋಕಗಳು ಮಾತ್ರ ಆಂಧ್ರಾಕ್ಷರ ಪ್ರತಿಯಲ್ಲಿ ಹೆಚ್ಚಾಗಿವೆ. ಇವು ಪ್ರಕರಣಕ್ಕೆ ಹೊಂದಿಕೊಂಡಿವೆ. ಉಳಿದವನ್ನು ಅಲ್ಲಲ್ಲಿಯೇ ದುಂಡನೆಯ ಕಂಸಗಳಲ್ಲಿ ತೋರಿಸಲಾಗಿದೆ.

ಹೀಗೆ ಕಥೆ, ನೀತಿಧರ್ಮಗಳು, ವೇದಾಂತ ತತ್ವ, ಇವುಗಳ ತಿಳಿವಳಿಕೆಯಿಂದ ಜನರ ನಡೆವಳಿಕೆಯು ಮಾರ್ಪಟ್ಟು ಮೇಲ್ಪಡುತ್ತಾ ದೇಶದ ಶ್ರೇಯಸ್ಸಾಧನೆಗೆ ತುಂಬ ಸಹಾಯವಾಗುತ್ತದೆ. ಇಂತಹ ಧಾರ್ಮಿಕ ಸಂಸ್ಕೃತಿಯು ಜನಸಾಮಾನ್ಯದಲ್ಲೂ, ಮುಖಂಡರಲ್ಲೂ, ಪ್ರಬಲವಾಗಿ ಪ್ರಭಾವಶಾಲಿಯಾಗಿರುವುದರಿಂದಲೇ ಜಗತ್ಕಲ್ಯಾಣವೂ ಲಭಿಸಬೇಕಾಗಿದೆ. ಸ್ವಾರ್ಥದಿಂದ ಒದಗಿದ್ದ ಯುದ್ಧವು ರಾಗ, ದ್ವೇಷ, ಅಪಕಾರ, ಪ್ರತೀಕಾರಗಳಿಂದ ಎಲ್ಲರಿಗೂ ದುಃಖವೇ ಹೆಚ್ಚಿ ಕಡೆಗೆ ಧಾರ್ಮಿಕ ಮನೋಭಾವವು ಮುಂದಾಗಲು ಆ ಯುದ್ಧವು ಈಗ ನಿಂತಿದೆ. ಹಿಂದಿನ ಯುದ್ಧದ ಕೊನೆಯಲ್ಲಿಯೂ ಇದೇ ಭಾವದಿಂದ ಸ್ಥಾಪಿತವಾಗಿದ್ದ ಜನಾಂಗಗಳ ನ್ಯಾಯಸ್ಥಾನವು (League of nations) ಈಗ Security Council ಎಂದರೆ ಶಾಂತಿರಕ್ಷಕಸಭೆಯಾಗಿ ಪ್ರಾರಂಭಿಸಲ್ಪಟ್ಟಿದೆ. ಸಹಾನುಭೂತಿ, ಸಹಕಾರ, ಶಾಂತಿ, ನೆಮ್ಮದಿಗಳಿಂದ ಸುಖವು ನೆಲೆಸಬೇಕಾಗಿದೆಯೇ ಹೊರತು, ಅಪಕಾರ ಪ್ರತೀಕಾರಗಳಿಂದ ಕೂಡಿದ ಯುದ್ಧದಿಂದ ಶಾಂತಿಯನ್ನು ಎಂದಿಗೂ ನೆಲೆಗೊಳಿಸಲಾಗುವುದಿಲ್ಲವು. ಅಲ್ಲದೆ ಜನರೆಲ್ಲರಲ್ಲೂ ಧಾರ್ಮಿಕ ಸಂಸ್ಕೃತಿಯು ಪ್ರಬಲವಾಗಿದ್ದರೆ, ಪ್ರಜಾಮುಖಂಡರಲ್ಲಿ ಅದು ಪರಿಣಾಮಕಾರಿಯಾಗಿರುತ್ತದೆ. ಅದರಿಂದ ಸರ್ಕಾರದ ಅಥವಾ ಸಂಸ್ಥೆಗಳ ಆಡಳಿತವನ್ನು ನೆರವೇರಿಸುತ್ತಿರುವ ಸಚಿವರ ಅಥವಾ ಕಾರ್ಯನಿರ್ವಾಹಕ ಸಮಿತಿಯವರ ಮೂಲಕವಾಗಿ ಅದರ ಫಲವಾದ ಶಾಂತಿ ಸುಖವು ಜನಸಾಮಾನ್ಯಕ್ಕೂ ದೊರೆಯುವಂತಾಗುತ್ತದೆ. ಇನ್ನು ಮುಂದಾದರೂ ಈ ಪ್ರಯೋಜನವು ಸಿದ್ಧಿಸುವಂತಾಗಲೆಂದು ಹಾರೈಸಬೇಕಾಗಿದೆ.

ಇಂತಹ ಉತ್ತಮ ಫಲಸಾಧನೆಗೆ ಪ್ರಜೆಗಳಲ್ಲಿಧಾರ್ಮಿಕ ಗ್ರಂಥ ಪ್ರಚಾರಣವು ಅತ್ಯವಶ್ಯಕವಾದುದೆಂಬುದನ್ನು ಮನಗಂಡಿರುವ, ಧಾರ್ಮಿಕ ಪ್ರಜಾವತ್ಸಲರಾಗಿ ನಮ್ಮನ್ನಾಳುತ್ತಾ ದಯಮಾಡಿಸಿರುವ ಶ್ರೀಮನ್ಮಹಾರಾಜ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್**

G. C. B., G. C. S. I., ಮಹಾಪ್ರಭುಗಳವರ ಆಜ್ಞಾನುಸಾರವಾಗಿ ಗ್ರಂಥವನ್ನೂ ಪ್ರಕಟಿಸಲಾಗಿದೆ. ಈ ಮಹಾನುಭಾವರ ಘನವಾದ ಈ ಉದ್ದೇಶವು ಸರ್ವದಾ ನೆರವೇರುತ್ತಿರುವಂತಾಗಲೆಂದು ಭಕ್ತರಿಗೆ ಆಯುರಾರೋಗ್ಯ, ಐಶ್ವರ್ಯ, ಸತ್ಸಂತಾನ, ಮುಂತಾದ ಸಕಲ ಸೌಭಾಗ್ಯಗಳನ್ನೂ, ಕರುಣಿಸುವ ಜಗನ್ಮಾತೆಯಾದ ಶ್ರೀ ಚಾಮುಂಡೇಶ್ವರೀದೇವಿಯ ಚರಣ ಕಮಲಗಳಲ್ಲಿ ಸರ್ವದಾ ಪ್ರಾರ್ಥಿಸುತ್ತಿರುತ್ತೇನೆ.

ಮೈಸೂರು
ಶ್ರೀವ್ಯಯನಾಮ ಸಂವತ್ಸರದ
ಜ್ಯೇಷ್ಠಶುಕ್ಲನವಮೀ ಶನಿವಾರ
ತಾ॥ 8–6–1946.

ಎಡತೊರೆ ದೇವಯ್ಯ ದೀಕ್ಷಿತರ
ಮಗ
**ಚಂದ್ರಶೇಖರಶಾಸ್ತ್ರೀ**



# ವಿಷಯಗಳ ಸೂಚಿಕೆ.

**ತೊಂಬತ್ತಾರನೆಯ ಅಧ್ಯಾಯ—**

ಶರಭಾವತಾರದ ಕಥೆ; ನೃಸಿಂಹನ ಉಗ್ರತೆಯನ್ನು ಸಮಾಧಾನಕ್ಕೆ ತರಲು ಶಿವನು ವೀರಭದ್ರನನ್ನು ಕಳುಹಿಸಿದುದು; ವೀರಭದ್ರನು ಹೇಳಿದ ಮಾತನ್ನು ಕೇಳದೆ ತಿರಸ್ಕರಿಸಲು, ಶರಭಾವತಾರವನ್ನು ಧರಿಸಿ ನೃಸಿಂಹನನ್ನು ಹಿಡಿದು ಶಿವನ ಸಮೀಪಕ್ಕೆ ತೆಗೆದುಕೊಂಡು ಹೋದುದು; ನೃಸಿಂಹನು ಅಷ್ಟೋತ್ತರ ನಾಮಗಳಿಂದ ವೀರಭದ್ರನನ್ನು ಸ್ತುತಿಸಿದುದು; ಅವನ ಶಿರಸ್ಸನ್ನು ವೀರಭದ್ರನು ಮಾಲೆಯಲ್ಲಿ ಧರಿಸಿದುದು; ಈ ಉಪಾಖ್ಯಾನದ ಪಠನ, ಶ್ರವಣಗಳ ಫಲ; .. ೧೪೮—೧೭೫

**ತೊಂಬತ್ತೇಳನೆಯ ಅಧ್ಯಾಯ—**

ಜಲಂಧರನ ಕಥೆ; ಅವನು ಕಾಮ್ಯವಾದ ತಪಸ್ಸನ್ನು ಮಾಡಿ ಅಪಾರವಾದ ಶಕ್ತಿಯನ್ನುಪಡೆದು, ಲೋಕವನ್ನು ಜಯಿಸಿ, ದೇವತೆಗಳು, ಇಂದ್ರ, ವಿಷ್ಣು ಇವರೆಲ್ಲರನ್ನೂ ಸೋಲಿಸಿ, ಶಿವನನ್ನೂ ಗೆಲ್ಲಲು ಹೋದನು. ಮತ್ತನಾದ ಆ ರಾಕ್ಷಸನನ್ನು ಈಶ್ವರನು ಚಕ್ರಾಯುಧದಿಂದ ಸಂಹರಿಸಿದನು; .. ೧೭೬—೧೮೬

**ತೊಂಬತ್ತೆಂಟನೆಯ ಅಧ್ಯಾಯ—**

ವಿಷ್ಣುವು ಶಿವನಿಂದ ಸುದರ್ಶನ ಚಕ್ರವನ್ನು ಪಡೆದ ಕಥೆ; ದೇವತೆಗಳಿಗೂ ದುಂಧುವೇ ಮುಂತಾದ ರಾಕ್ಷಸರಿಗೂ ಪ್ರಬಲವಾದ ಯುದ್ಧವಾಗಿ, ದೇವತೆಗಳು ಪರಾಜಿತರಾದುದು; ಗುರುವಿನೊಡನೆ ಅವರು ವಿಷ್ಣುವನ್ನು ಮರೆಹೊಕ್ಕುದು; ವಿಷ್ಣುವೂ ಶಿವನನ್ನು ಆರಾಧಿಸಿ, ಅವನು ಜಲಂಧರಾಸುರನನ್ನು ಸಂಹರಿಸಿದ ಸುದರ್ಶನ ಚಕ್ರವನ್ನು ಪಡೆದು, ದೇವತೆಗಳ ಕಷ್ಟ ನಿವಾರಣೆಮಾಡಲು ವಾಗ್ದಾನಮಾಡಿದುದು; ವಿಷ್ಣುವು

## ತೊಂಬತ್ತೊಂಬತ್ತನೆಯ ಅಧ್ಯಾಯ—



## ನೂರನೆಯ ಅಧ್ಯಾಯ—

ನೆಯಂತೆ ಶಾಂತನಾದುದು; ಅಲ್ಲಿ ಶಿವನೂ ಆವಿರ್ಭವಿಸಿ ಎಲ್ಲರಿಗೂ ಪೂರ್ವದಂತೆ ಪ್ರಾಣದಾನಮಾಡಿದುದು; .. ೨೫೭–೨೬೮

## ನೂರೊಂದನೆಯ ಅಧ್ಯಾಯ—

ಸತಿದೇವಿಯು ಪಾರ್ವತೀದೇವಿಯಾದ ಕಥೆ; ಹಿಮವಂತನ ಹೆಂಡಿತಿಯಾದ ಮೇನಾದೇವಿಯ ತಪಸ್ಸಿನ ಫಲವಾಗಿ ದೇವಿಯು ಪಾರ್ವತಿಯಾಗಿ ಹುಟ್ಟಿದಳು. ತಪಸ್ಸಿನಿಂದ ಶಿವನನ್ನೇ ಪತಿಯಾಗಿ ಪಡೆದಳು; ತಾರನೆಂಬ ರಾಕ್ಷಸನು ಬ್ರಹ್ಮನವರದಿಂದ ಕೊಬ್ಬಿ ಇಂದ್ರ, ವಿಷ್ಣು ಮುಂತಾದವರನ್ನು ಸೋಲಿಸಿದನು; ಅನಾಥರಾದ ದೇವತೆಗಳು ಮನ್ಮಥನನ್ನು ಶಿವನ ಮನಸ್ಸನ್ನು ಪಾರ್ವತಿಯ ಕಡೆಗೆ ಆಕರ್ಷಿಸಲು ಕಳುಹಿಸಿದರು; ಈಶ್ವರ ದೃಷ್ಟಿಯಿಂದ ಅವನು ಭಸ್ಮವಾಗಲು, ರತಿಯ ಕೋರಿಕೆಯಂತೆ ಅವನು ಅಮೂರ್ತನಾಗಿಯೇ ಕಾರ್ಯದಕ್ಷನಾಗಿರುವನೆಂದೂ, ವಿಷ್ಣುವು ಭೃಗುಶಾಪದಿಂದ ವಾಸುದೇವನಾಗಿ ಅವತರಿಸಿದಾಗ, ಅವನ ಮಗನಾಗಿ ಹುಟ್ಟಿದ ಪ್ರದ್ಯುಮ್ನನು ಅವಳ ಪತಿಯಾಗುವನೆಂದೂ ಅನುಗ್ರಹಿಸಿದುದು. .. ೨೬೯–೨೭೮

## ನೂರೆರಡನೆಯ ಅಧ್ಯಾಯ—

ಪಾರ್ವತಿಯ ತಪಸ್ಸಿನಿಂದ ಸಂತುಷ್ಟನಾದ ಪರಮೇಶ್ವರನು ವರ್ಣಾಶ್ರಮ ಧರ್ಮಗಳನ್ನು ಉದಾಹರಣೆಯಿಂದ ಕಾಪಾಡುವುದಕ್ಕಾಗಿ ಪಾರ್ವತೀದೇವಿಯನ್ನು ವಿವಾಹಮಾಡಿಕೊಂಡ ಕಥೆ; ಪಾರ್ವತಿಯು ತಪಸ್ಸುಮಾಡುತ್ತಿರುವಾಗ ಬ್ರಹ್ಮನು ಬಂದು ಶಿವನುವರಿಸುವನೆಂದು ಹೇಳಿದುದು; ಶಿವನು ಬ್ರಾಹ್ಮಣ ವೇಷದಿಂದ ಪಾರ್ವತಿಯ ತಪೋವನಕ್ಕೆ ಬಂದು ಒಪ್ಪಿದುದು; ಪಾರ್ವತಿಯ ಸ್ವಯಂವರಕ್ಕಾಗಿ ದೇವತೆಗಳೂ, ಋಷಿಗಳೂ,

ಮಂಟಪದಲ್ಲಿದ್ದರು, ಶಿವನು ಶಿಶುವಾಗಿ ಪಾರ್ವತಿಯ ತೊಡೆಯಮೇಲಿದ್ದುದು; ಇಂದ್ರಾದಿಲೋಕಪಾಲಕರೂ, ರುದ್ರ, ವಿಷ್ಣು ಮುಂತಾದವರೂ ಸ್ತಂಭಿತರಾದುದು; ಬ್ರಹನು ಶಿವನ ಈ ಲೀಲೆಯನ್ನು ಮನಗಂಡು ಆ ಪರಮೇಶ್ವರನನ್ನು ಸ್ತುತಿಸಿದುದು; ದೇವಾದಿಗಳೂ ಸ್ತುತಿಸಲು, ಶಿವನು ಅವರಿಗೆ ದಿವ್ಯ ದೃಷ್ಟಿ ಯನ್ನು ಕೊಟ್ಟು ಅನುಗ್ರಹಿಸಿ ಸ್ತಂಭನವನ್ನು ತಪ್ಪಿ ಸಿದುದು; .. ೨೭೯–೨೯೧

**ನೂರುಮೂರನೆಯ ಅಧ್ಯಾಯ—**

ಸ್ವಯಂವರಪುರವನ್ನು ಬ್ರಹ್ಮನು ಕಲ್ಪಿಸಿದುದು; ಪರಮೇಶ್ವರನ ವಿವಾಹಕ್ಕೆ ದಿತಿ, ಅದಿತಿ, ಸಾವಿತ್ರೀ, ಮುಂತಾದ ಮಾತೃಗಳೂ, ದೇವತೆಗಳೂ ಲೋಕ ಪಾಲರೂ, ವೀರಭದ್ರಾದಿಗಣಗಳೂ, ಋಷಿಗಳೂ ವಿಷ್ಣು ಮುಂತಾದವರೂ ಬಂದರು; ವಿಷ್ಣುವು ಕ್ರಮ ವಾಗಿ ವರಪೂಜೆಯನ್ನುಮಾಡಿ, ಧಾರಾಪೂರ್ವಕವಾಗಿ ಪಾರ್ವತಿಯನ್ನು ಪರಮೇಶ್ವರನಿಗೆ ಪಾಣಿಗ್ರಹಣ ಮಾಡಿಸಿ, ತನ್ನನ್ನೂ ಸಮರ್ಪಿಸಿದನು; ಶ್ರೌತಸ್ಮಾರ್ತ ಹೋಮಾದಿಗಳನ್ನು ಬ್ರಹ್ಮನು ನೆರವೇರಿಸಿದನು; ಬಂದಿದ್ದವರೆಲ್ಲರಿಗೂ ಮರ್ಯಾದೆಯನ್ನೂ ವರಗಳನ್ನೂ ಶಿವನು ಕರುಣಿಸಿದನು; ಆಮೇಲೆ ಶಿವನೂ ಪಾರ್ವ ತಿಯೂ ಕಾಶೀಕ್ಷೇತ್ರಕ್ಕೆ ಬಂದು ನೆಲೆಸಿದರು; ಅಲ್ಲಿ ಗಣಪತಿಯೂ ಆವಿರ್ಭವಿಸಿದನು; .. ೨೬೨–೩೦೮

**ನೂರುನಾಲ್ಕನೆಯ ಅಧ್ಯಾಯ—**

ವಿನಾಯಕನ ಉತ್ಪತ್ತಿಯ ಕಥೆ; ರಾಕ್ಷಸರಿಗೆ ಆಗಾಗ್ಗೆ ಉಚ್ಛ್ರಾಯಸ್ಥಿತಿಯನ್ನು ಪಡೆಯುವುದು ಅವರ ಧರ್ಮಾಚರಣೆಗೆ ವಿಘ್ನವಿಲ್ಲದುದರಿಂದ ಎಂದು ದೇವತೆಗಳು ತಿಳಿದು, ಅಂತಹ ರಾಕ್ಷಸರ ಕಾಮ್ಯ

ಧರ್ಮಾಚರಣೆಗೆ ವಿಘ್ನಗಳನ್ನುಂಟುಮಾಡಲು ಈಶ್ವರ ನನ್ನು ಸ್ತುತಿಸಿದರು; ಇಂದ್ರ, ಅಗ್ನಿ ಮುಂತಾದವರು ಮಾಡಿದ ಶಿವಸ್ತೋತ್ರ ಮಹಿಮೆ. .. ೩೦೯–೩೧೬

**ನೂರೈದನೆಯ ಅಧ್ಯಾಯ—**

ದೇವತೆಗಳು ಮಾಡಿದ ಸ್ತೋತ್ರದಿಂದ ಸಂತುಷ್ಟ ನಾದ ಪರಮೇಶ್ವರನು ಅವರಿಗೆ ದಿವ್ಯ ದರ್ಶನವನ್ನು ಅನುಗ್ರಹಿಸಿ, ಅವರ ಕೋರಿಕೆಯನ್ನು ಸಲ್ಲಿಸಲು ಗಣೇಶನನ್ನು ಉಂಟುಮಾಡಿದನು; ಆ ವಿನಾಯಕ ನನ್ನು ಎಲ್ಲರೂ ತಮ್ಮ ತಮ್ಮ ಕಾರ್ಯಾರಂಭದಲ್ಲಿ ಪೂಜಿಸಬೇಕೆಂದೂ, ಹಾಗೆ ಮಾಡದೆ ಇದ್ದರೆ ಅವರ ಕಾರ್ಯಗಳಿಗೆ ವಿಘ್ನವನ್ನುಂಟುಮಾಡಬೇಕೆಂದೂ ಶಿವನು ಗೊತ್ತುಮಾಡಿದನು; ಬ್ರಹ್ಮ, ವಿಷ್ಣು, ರುದ್ರರೂ, ವಾಣೀ, ಲಕ್ಷ್ಮೀ, ಉಮಾದೇವಿಯರೂ ಹಾಗೆ ಮಾಡಬೇಕೆಂದು ಗೊತ್ತು ಮಾಡಿದನು; ದುಷ್ಟರಾಗಿ ಕಾಮ್ಯ ತಪಸ್ಸನ್ನು ಮಾಡುವ ರಾಕ್ಷಸಾದಿಗಳ ಧರ್ಮಾ ಚರಣೆಗೂ ಅಡ್ಡಿಯನ್ನು ಉಂಟುಮಾಡೆಂದು ಶಿವನು ವಿಘ್ನೇಶ್ವರನನ್ನು ಕುರಿತು ಹೇಳಲು, ಗಣಪತಿಯು ವಿಘ್ನಗಳನ್ನು ಸೃಜಿಸಿದನು. .. ೩೧೭–೩೨೩

**ನೂರಾರನೆಯ ಅಧ್ಯಾಯ—**

ತಾಂಡವೇಶ್ವರನ ಕಥೆ; ಪರಮೇಶ್ವರನ ನೃತ್ಯಕ್ಕೆ ಕಾರಣ, ಅದರ ಪ್ರಕಾರಗಳ ವಿವರಣೆ; ದಾರುಕ ನೆಂಬ ರಾಕ್ಷಸನು ಕಾಮ್ಯ ತಪಸ್ಸಿದ್ಧಿಯ ಮಹಿಮೆ ಯಿಂದ ಲೋಕ ಕಂಟಕನಾದನು; ಅವನು ಸ್ತ್ರೀಮಾತ್ರ ವಧ್ಯನೆಂದು ತಿಳಿದು ದೇವತೆಗಳು ಸ್ತ್ರೀರೂಪವನ್ನು ಧರಿಸಿ ಯುದ್ಧಮಾಡಿದರೂ ದೇವತೆ ಗಳೇ ಜಿತರಾದರು. ಅವರು ಬ್ರಹ್ಮನೊಡನೆ ಪರ ಮೇಶ್ವರನನ್ನು ಮರೆ ಹೊಕ್ಕು ಸ್ತುತಿಸಿದರು; ಅದ

ರಿಂದ ತುಷ್ಟನಾದ ಶಿವನು ಅವರ ಕೋರಿಕೆಯನ್ನು
ಸಲ್ಲಿಸಲು ಪಾರ್ವತಿಯನ್ನು ಪ್ರಾರ್ಥಿಸಿದನು;
ದೇವಿಯು ತನ್ನ ಅಂಶದಿಂದ ಶಿವನನ್ನು ಪ್ರವೇಶಿಸಿ
ಕಂಠದಲ್ಲಿದ್ದ ವಿಷದಿಂದ ಮಹಾಕಾಳಿಯನ್ನುಂಟು
ಮಾಡಿದಳು; ಆ ಭಯಂಕರ ಮೂರ್ತಿಯಿಂದ ಸಿದ್ಧರೂ
ಪಿಶಾಚಿಗಳೂ ಉಂಟಾದರು; ದಾರುಕಾಸುರನ
ಸಂಹಾರ; ಶಿವನು ಬಾಲಕನ ರೂಪದಲ್ಲಿ ಅಳುತ್ತಿ
ರಲು, ಕಾಳಿಯು ಅವನಿಗೆ ಸ್ತನ್ಯಕೊಟ್ಟುದು; ಅದ
ರಿಂದ ಕಾಳಿಯ ಕೋಪವನ್ನೂ ಹೀರಿ ಶಾಂತಿ
ಯನ್ನುಂಟುಮಾಡಿದನು; ಅದರಿಂದ ಅವನಿಗೆ ಕ್ಷೇತ್ರ
ಪಾಲನೆಂದು ಹೆಸರಾದುದು; ಮಹಾಕಾಳಿಯ
ಸಂತೋಷಕ್ಕಾಗಿ ಶಿವನ ತಾಂಡವನೃತ್ಯ; ಸಂತುಷ್ಟ
ಳಾದ ಕಾಳಿಯೂ ಲಾಸ್ಯನರ್ತನಮಾಡಿದಳು; ಋಷಿ
ಗಳ ಯೋಗಾಭ್ಯಾಸದ ಆನಂದದಿಂದ ಶಿವನರ್ತನ
ವಾಯಿತೆಂದು ಇನ್ನೊಂದು ಮತ; .. ೩೨೪–೩೩೧

## ನೂರೇಳನೆಯ ಅಧ್ಯಾಯ—

ಉಪಮನ್ಯುವಿನ ಕಥೆ; ಉಪಮನ್ಯುವು ಮಾವನ ಮನೆ
ಯಲ್ಲಿ ಕುಡಿದಂತಹ ಹಾಲನ್ನು ಕೊಡೆಂದು ತಾಯಿ
ಯನ್ನು ಕೇಳಲು, ಬಡತನದಿಂದ ಹಾಲಿಲ್ಲದಿರಲು,
ಆವಳು ಹಿಟ್ಟನ್ನು ನೀರಿನಲ್ಲಿ ಕದರಿ ಹಾಲೆಂದು
ಕೊಟ್ಟಳು; ಮಗನು ಅಳಲು ಹಾಲನ್ನು ಪಡೆಯುವ
ಪುಣ್ಯವನ್ನು ಶಿವ ಪೂಜೆಯಿಂದ ಪಡೆಯಬೇಕೆಂದು
ಹೇಳಿದಳು; ಉಪಮನ್ಯುವು ಶಿವನನ್ನು ಕುರಿತು
ತಪಸ್ಸುಮಾಡಲು, ಅವನ ತಪೋಜ್ವಾಲೆಯಿಂದ
ಮೂರು ಲೋಕವೂ ತಪಿಸಲು, ಇಂದ್ರನು ಪ್ರತ್ಯಕ್ಷ
ನಾಗಿ ತಾನೇ ವರವನ್ನು ಕೊಡುವುದಾಗಿಯೂ, ಶಿವ
ಧ್ಯಾನವನ್ನು ಬಿಡೆಂದೂ ಹೇಳಲು, ಉಪಮನ್ಯುವು
ಶಿವನನ್ನು ನಿಂದಿಸಿದ ಇಂದ್ರನನ್ನು ಮಂತ್ರಾಸ್ತ್ರದಿಂದ
ನಿಗ್ರಹಿಸಿ, ಶಿವನಿಂದಾಶ್ರವಣ ಮಾಡಿದ ತನ್ನ ದೇಹ

ವನ್ನು ಬಿಡಲು ನಿಶ್ಚಯಿಸಿರಲು, ಶಿವನು ಪ್ರತ್ಯಕ್ಷ
ನಾಗಿ ಹಾಲು, ಮೊಸರು ತುಪ್ಪ ಇವುಗಳ ಸಮುದ್ರ
ವನ್ನೇ ಅನುಗ್ರಹಿಸಿ, ಅವನನ್ನು ತನ್ನ ಪುತ್ರನನ್ನಾಗಿ
ಅಂಗೀಕರಿಸಿದನು; ಅವನ ಕೋರಿಕೆಯಂತೆ ಶಿವಭಕ್ತಿ
ಯನ್ನೂ ಕರುಣಿಸಿದನು; .. ೩೩೨–೩೪೮

**ನೂರೆಂಟನೆಯ ಅಧ್ಯಾಯ—**

ಶ್ರೀಕೃಷ್ಣನು ಉಪಮನ್ಯು ಮಹರ್ಷಿಗಳನ್ನು ಪಡೆದು
ಅವನಿಂದ ಪಾಶುಪತವ್ರತದ ಕ್ರಮವನ್ನು ತಿಳಿದ
ಬಗೆ; ಪಾಶುಪತ ಜ್ಞಾನವೆಂದರೆ ಅದ್ವೈತ ಬ್ರಹ್ಮಾತ್ಮೈ
ಕ್ಯಜ್ಞಾನವು; ಪಾಶುಪತವ್ರತಾಚರಣೆಯಿಂದ
ಕೃಷ್ಣನು ಪುತ್ರನನ್ನ ಪಡೆದುದು; ಪಾಶುಪತ ವ್ರತದ
ದೀಕ್ಷಾಗ್ರಹಣಕ್ಕೆ ಬೇಕಾದ ಉಪಸ್ಕರಗಳ ದಾನವೂ
ಮೋಕ್ಷಸಾಧನವಾದ ಮತ್ತೊಂದು ವ್ರತವೆಂದು
ಉಪದೇಶ; ಪಾಶುಪತವ್ರತನಿಷ್ಠನಾದ ಯೋಗಿಗೆ ಸರ್ವ
ಸ್ವದಾನದಿಂದ ಮಹಾಫಲವುಂಟು; ಅಧ್ರುವವಾದರೂ
ಈ ಶರೀರವೆಂಬ ಧರ್ಮಸಾಧನದಿಂದ ಧ್ರುವಫಲವಾದ
ಮೋಕ್ಷವೂ ಸಿದ್ಧಿಸುತ್ತದೆ; .. ೩೪೯–೩೫೪

# ಶ್ರೀ ಲಿಂಗಮಹಾಪುರಾಣಂ

## ಸಂಪುಟ ೪.

ಅಥ ಲಿಂಗಮಹಾಪುರಾಣೇ ಪೂರ್ವಭಾಗೇ
ಅಷ್ಟಾಶೀತಿತಮೋಽಧ್ಯಾಯಃ

**॥ ಋಷಯ ಊಚುಃ ॥**

**ಕೇನ ಯೋಗೇನ ವೈ ಸೂತ ಗುಣಪ್ರಾಪ್ತಿಃ ಸತಾಮಿಹ ।**
**ಅಣಿಮಾದಿ ಗುಣೋಪೇತಾ ಭವಂತ್ಯೇವೇಹ ಯೋಗಿನಃ ॥ ೧ ॥**

---

॥ ಓಂ ಶ್ರೀ ಗಣೇಶ ಶಾರದಾ ಗುರುಭ್ಯೋ ನಮಃ ॥

**ಗಣೇಶಂ ವಿಘ್ನನಾಶಾಯ ವಾಣೀಂ ವಾಗರ್ಥಬುದ್ಧಯೇ ।**
**ಗುರುಂ ಗೂಢಾರ್ಥಭಾನಾರ್ಥಂ ಪ್ರಣಮಾಮಿ ಮುದಾ ಸದಾ ॥**

ಒಳ್ಳೆಯ ಕಲಸಗಳಿಗೆ ವಿಘ್ನಗಳು ಬಂದೊದಗುವುದು ವಾಡಿಕೆಯಾಗಿದೆ. ಅಂತಹ ವಿಘ್ನಗಳ ನಿವಾರಣೆಗಾಗಿ ಗಣಪತಿಯನ್ನು ನಮಸ್ಕರಿಸುತ್ತೇನೆ. ಈ ಕನ್ನಡ ಅರ್ಥಾನುವಾದದ ಕಾರ್ಯನಿರ್ವಾಹಕ್ಕೆ ಆವಶ್ಯಕವಾದ ಮೂಲ ಸಂಸ್ಕೃತದ ಅರ್ಥಗಳು ಸರಿಯಾಗಿ ತೋರುವುದಕ್ಕೂ, ಅವುಗಳನ್ನು ವಿವರಿಸಲು ತಕ್ಕ ಪದವಾಕ್ಯಗಳ ಸ್ಫುರಣೆಗಾಗಿಯೂ, ವಿದ್ಯಾಭಿಮಾನಿನೀ ದೇವತೆಯಾದ ಸರಸ್ವತಿಯನ್ನು ಸಂತೋಷದಿಂದ ನಮಸ್ಕರಿಸುತ್ತೇನೆ. ಎಲ್ಲ ಮುಖ್ಯಾರ್ಥಗಳು ಮತ್ತು ರಹಸ್ಯಾರ್ಥಗಳು ನನ್ನ ಮನಸ್ಸಿನಲ್ಲಿ ಹೊಳೆಯುವುದಕ್ಕಾಗಿ ಜ್ಞಾನಪ್ರದನಾದ ಶ್ರೀ ಗುರುವನ್ನು ಆದರ ಭಕ್ತಿಗಳೊಡನೆ ಯಾವಾಗಲೂ ನಮಸ್ಕರಿಸುತ್ತೇನೆ. ಇದರಿಂದ ನನ್ನ ಉದ್ದಿಷ್ಟಕಾರ್ಯವು ಚನ್ನಾಗಿ ನೆರವೇರುವಂತೆ ಗಣೇಶನೂ, ಶಾರದೆಯೂ, ಗುರುದೇವನೂ ಅನುಗ್ರಹಿಸುತ್ತಿರಲಿ.

|| ಸೂತ ಉವಾಚ ||

ಅತ ಊರ್ಧ್ವಂ ಪ್ರವಕ್ಷ್ಯಾಮಿ ಯೋಗಂ ಪರಮ ದುರ್ಲಭಂ ।
ಪಂಚಧಾ ಸಂಸ್ಮರೇ ದಾದೌ ಸ್ಥಾಪ್ಯ ಚಿತ್ತೇ ಸನಾತನಂ || ೨ ||

ಕಲ್ಪಯೇಽಚ್ಚಾಸನಂ ಪದ್ಮಂ ಸೋಮಸೂರ್ಯಾಗ್ನಿ ಸಂಯುತಂ ।
ಷಡ್ವಿಂಶ ಚ್ಛಕ್ತಿ ಸಂಯುಕ್ತ ಮಷ್ಟಧಾ ಚ ದ್ವಿಜೋತ್ತಮಾಃ || ೩ ||

ತತಃ ಷೋಢಶಧಾ ಚೈವ ಪುನರ್ದ್ವಾದಶಧಾ ದ್ವಿಜಾಃ ।
ಸ್ಮರೇ ಚ್ಚ ತತ್ತಥಾ ಮಧ್ಯೇ ದೇವ್ಯಾ ದೇವ ಮುಮಾಪತಿಂ || ೪ ||

ಅಷ್ಟಶಕ್ತಿ ಸಮಾಯುಕ್ತ ಮಷ್ಟಮೂರ್ತಿ ಮಜಂ ಪ್ರಭುಂ ।
ತಾಭಿಶ್ಚಾಽಷ್ಟ ವಿಧಾ ರುದ್ರಾ ಶ್ಚ ತುಷ್ಷಷ್ಟಿ ವಿಧಾಃ ಪುನಃ || ೫ ||

ಶಕ್ತಯಶ್ಚ ತಥಾ ಸರ್ವಾ ಗುಣಾಽಷ್ಟಕ ಸಮನ್ವಿತಾಃ ।
ಏವಂ ಸ್ಮರೇ ತ್ಕ್ರಮೇಣೈವ ಲಬ್ಧ್ವಾ ಜ್ಞಾನ ಮನುತ್ತಮಂ || ೬ ||

---

ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತೆಂಟನೆಯ ಅಧ್ಯಾಯವು.

೧–೩. ಋಷಿಗಳು ಹೇಳಿದರು :—ಓ ಸೂತ ಮಹರ್ಷಿಗಳೇ, ಸತ್ಪುರುಷರುಗಳಿಗೆ ಯಾವ ಯೋಗಾಭ್ಯಾಸದಿಂದ, ಅಣಿಮಾ, ಮಹಿಮಾ ಮುಂತಾದ ಮಹಾ ಐಶ್ವರ್ಯಗಳ ಸಿದ್ಧಿಯು ಉಂಟಾಗುತ್ತದೆ? ಯೋಗಿಗಳು, ಅಣಿಮಾ ಮುಂತಾದ ಮಹಾ ಮಹಿಮೆಯುಳ್ಳ ಯೋಗವನ್ನು ಹೊಂದುವ ಬಗೆ ಹೇಗೆ?

ಸೂತನು ಹೇಳಿದನು— ಬಹಳ ಕಷ್ಟವಾದ ಈ ಯೋಗ ಸ್ವರೂಪವನ್ನು ಇನ್ನು ಮುಂದೆ ಹೇಳುತ್ತೇನೆ. ಮೊದಲು ಬಹಳ ಪ್ರಾಚೀನನಾದ ಪರಮಾತ್ಮನನ್ನು ಐದು ವಿಧವಾಗಿ ಸ್ಮರಣೆ ಮಾಡಬೇಕು. ಸೂರ್ಯ, ಚಂದ್ರ, ಅಗ್ನಿ, ಇವರಿಂದ ಕೂಡಿದ,ಪದ್ಮಾಸನವನ್ನು ಮುಂಚೆ ಸಿದ್ಧ ಮಾಡಿಸಬೇಕು. ಎಲೈ ಬ್ರಾಹ್ಮಣಶ್ರೇಷ್ಠರೇ, ಈ ಪದ್ಮಾಸನವು ಇಪ್ಪತ್ತಾರು ಶಕ್ತಿಗಳಿಂದ ಕೂಡಿದ್ದಾಗಿಯೂ, ಎಂಟುವಿಧವಾದ ಅಷ್ಟಮೂರ್ತಿಸ್ವರೂಪವನ್ನೂ,

೪–೬. ಎಲೈ ಬ್ರಾಹ್ಮಣರೇ, ಅನಂತರದಲ್ಲಿ ಹಾಗೆಯೇ ಹದಿನಾರು ವಿಧವಾಗಿಯೂ, ತಿರುಗಿ ಹನ್ನೆರಡು ವಿಧವಾಗಿಯೂ, ಇರುವ

ಏವಂ ಪಾಶುಪತಂ ಯೋಗಂ ಮೋಕ್ಷಸಿದ್ಧಿ ಪ್ರದಾಯಕಂ ।
ತಸ್ಯಾಽಣಿಮಾ ದಯೋ ವಿಪ್ರಾ ನಾಽನ್ಯಥಾ ಕರ್ಮಕೋಟಿಭಿಃ ॥ ೭ ॥
ತತ್ರಾಽಷ್ಟಗುಣ ಮೈಶ್ವರ್ಯಂ ಯೋಗಿನಾಂ ಸಮುದಾ ಹೃತಂ ।
ತತ್ಸರ್ವಂ ಕ್ರಮ ಯೋಗೇನ ಹ್ಯುಚ್ಯಮಾನಂ ನಿಬೋಧತ ॥ ೮ ॥
ಅಣಿಮಾ ಲಘಿಮಾ ಚೈವ ಮಹಿಮಾ ಪ್ರಾಪ್ತಿರೇವ ಚ ।
ಪ್ರಾಕಾಮ್ಯಂ ಚೈವ ಸರ್ವತ್ರ ಈಶಿತ್ವಂ ಚೈವ ಸರ್ವತಃ ॥ ೯ ॥
ವಶಿತ್ವ ಮಥ ಸರ್ವತ್ರ ಯತ್ರ ಕಾಮಾಽವ ಸಾಯಿತಾ ।
ತಚ್ಚಾಽಪಿ ತ್ರಿವಿಧಂ ಜ್ಞೇಯ ಮೈಶ್ವರ್ಯಂ ಸಾರ್ವಕಾಮಿಕಂ ॥೧೦॥

---

ಶಕ್ತಿಗಳಿಂದ ಆ ಕಮಲಾಸನವು ಕೂಡಿರಬೇಕು. ಹೀಗೆ ಆಸನವನ್ನು ಕಲ್ಪಿಸಿ, ಪಾರ್ವತೀ ಪರಮೇಶ್ವರರನ್ನು ಸ್ಮರಣೆ ಮಾಡಬೇಕು. ಎಂಟು ವಿಧವಾದ ಶಕ್ತಿಗಳಿಂದ ಕೂಡಿರುವ, ಎಂಟು ಶರೀರಗಳನ್ನು ಹೊಂದಿರುವ, ನಿತ್ಯನೂ, ಸ್ವಾಮಿಯೂ, ಆದ ಶಿವನನ್ನು ಧ್ಯಾನಿಸಬೇಕು. ಎಂಟು ವಿಧವಾದ ರುದ್ರರನ್ನೂ, ಅರವತ್ತುನಾಲ್ಕು ವಿಧವಾದ ರುದ್ರರನ್ನೂ, ಎಂಟು ಬಗೆಯ ಗಣಗಳೊಡನೆ ಕೂಡಿದ, ಎಲ್ಲಾ ಶಕ್ತಿಗಳನ್ನೂ ಭಕ್ತನಾದ ಉಪಾಸಕನು, ವೇದಶಾಸ್ತ್ರ ಪುರಾಣಗಳಿಂದ ಶ್ರೇಷ್ಠವಾದ ಜ್ಞಾನವನ್ನು ಹೊಂದಿ, ಕ್ರಮವಾಗಿ ಸ್ಮರಿಸಬೇಕು.

೭–೯. ಹೀಗೆ ನಡೆಸಿದ, ಪಶುಪತಿಯಾದ ಶಿವನಿಗೆ ಸಂಬಂಧಿಸಿದ, ಯೋಗವು, ಮೋಕ್ಷಸಿದ್ಧಿಯನ್ನುಂಟುಮಾಡುವುದು. ಎಲೈ ಬ್ರಾಹ್ಮಣರೇ, ಹೀಗೆ ಯೋಗವನ್ನು ನಡೆಸಿದವನಿಗೆ ಅಣಿಮಾ, ಮುಂತಾದ ಮಹಿಮೆಗಳೂ ಸಿದ್ಧಿಸುವುವು. ಹಾಗಲ್ಲದೇ ಕೋಟಿ ಕರ್ಮಗಳನ್ನು ಮಾಡಿದರೂ ಈ ಉಪಯೋಗವಿಲ್ಲ. ಯೋಗಿಗಳಿಗೆ ಎಂಟು ವಿಧವಾದ ಐಶ್ವರ್ಯ ಸಿದ್ಧಿಯ ಮಹಿಮೆಯು ಉಂಟಾಗುವುದೆಂದು ಹೇಳಿದೆ. ಇದರ ವಿಷಯವನ್ನು ಕ್ರಮವಾಗಿ ಹೇಳುವೆನು, ಕೇಳಿರಿ. ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ, ಎಂಬಿವು ಆ ಅಷ್ಟೈಶ್ವರ್ಯ ಸಿದ್ಧಿಗಳಾಗಿವೆ.

೧೦–೧೨. ಈ ಸಿದ್ಧಿಗಳಲ್ಲೊಂದಾದ ವಶಿತ್ವ, ಎಂಬದು ಇದ್ದರೆ ಮನುಷ್ಯನಿಗೆ ತನ್ನ ಇಚ್ಛೆಯಂತೆಯೇ ಕಾರ್ಯಗಳು ಸಿದ್ಧಿಸುವುವು.

ಸಾಽವದ್ಯಂ ನಿರವದ್ಯಂ ಚ ಸೂಕ್ಷ್ಮಂ ಚೈವ ಪ್ರವರ್ತತೇ ।
ಸಾಽವದ್ಯಂ ನಾಮ ಯತ್ತತ್ರ ಪಂಚ ಭೂತಾಽತ್ಮಕಂ ಸ್ಮೃತಂ ॥೧೧॥
ಇಂದ್ರಿಯಾಣಿ ಮನಶ್ಚೈವ ಅಹಂಕಾರಶ್ಚ ಯಃ ಸ್ಮೃತಃ ।
ತತ್ರ ಸೂಕ್ಷ್ಮಪ್ರವೃತ್ತಿಸ್ತು ಪಂಚ ಭೂತಾಽತ್ಮಿಕಾ ಪುನಃ ॥೧೨॥
ಇಂದ್ರಿಯಾಣಿ ಮನಶ್ಚಿತ್ತ ಬುದ್ಧ್ಯಹಂಕಾರ ಸಂಜ್ಞಿತಂ ।
ತಥಾ ಸರ್ವಮಯಂ ಚೈವ ಆತ್ಮಸ್ಥಾ ಖ್ಯಾತಿರೇವ ಚ ॥೧೩॥
ಸಂಯೋಗ ಏವ ತ್ರಿವಿಧಃ ಸೂಕ್ಷ್ಮೇಷ್ವೇವ ಪ್ರವರ್ತತೇ ।
ಪುನರಷ್ಟ ಗುಣಶ್ಚಾಽಪಿ ಸೂಕ್ಷ್ಮೇಷ್ವೇವ ವಿಧೀಯತೇ ॥೧೪॥

---

ಈ ಐಶ್ವರ್ಯ ವೆಂಬ ಸಿದ್ಧಿಯು, ಎಲ್ಲಾ ಇಷ್ಟಾರ್ಥಗಳನ್ನು ಕೊಡುವುದಾಗಿಯೂ, ಮೂರು ಬಗೆಯದಾಗಿಯೂ, ಇದೆ. ಈ ಐಶ್ವರ್ಯಗಳು ಸಾವದ್ಯ, ನಿರವದ್ಯ, ಸೂಕ್ಷ್ಮ, ಎಂಬುದಾಗಿ ಮೂರು ಬಗೆಯಾಗಿ ಇವೆ. ಸಾವದ್ಯ, ವೆಂಬ ಐಶ್ವರ್ಯವು ಐದು ಪ್ರಕಾರ ಇದೆಯೆಂದೂ, ಭೂತಗಳ ಸ್ವರೂಪವಾಗಿದೆಯೆಂದೂ, ಹೇಳಲ್ಪಟ್ಟಿದೆ. ಇದು ಇಂದ್ರಿಯಗಳು, ಮನಸ್ಸು, ಅಹಂಕಾರ, ಚಿತ್ತಗಳಲ್ಲಿ, ಸೂಕ್ಷ್ಮವಾಗಿ ಪ್ರವೇಶಿಸುವ ಶಕ್ತಿಯುಳ್ಳದ್ದು. ಇದನ್ನು ಪಂಚಭೂತ ಸೂಕ್ಷ್ಮಸ್ವರೂಪವಾದ ಐಶ್ವರ್ಯ ವೆಂದು ತಿಳಿಯಬೇಕು.

೧೩. ಇಂದ್ರಿಯಗಳೂ, ಮನಸ್ಸು, ಚಿತ್ತ, ಬುದ್ಧಿ, ಅಹಂಕಾರ, ಎಂಬ ಹೆಸರುಳ್ಳ, ಅಂತಃಕರಣ, ಹೀಗೆ ಎಲ್ಲಾ ವಿಷಯಗಳನ್ನೂ ಒಳಗೊಂಡ ಆತ್ಮನಲ್ಲಿ ಖ್ಯಾತಿಯೆಂಬುದು ಒಂದಿದೆಯೆಂದು ತಿಳಿಯಬೇಕು. ಇದು ನಿರವದ್ಯವೂ ಸರ್ವಮಯವೂ ಆಗಿರುವ ಸಿದ್ಧಿಯಾಗಿದೆ. ಪಂಚಭೂತ ಮಯವಾದುದು ಸಾವದ್ಯ ಸಿದ್ಧಿಯು, ಎಂದು ತಿಳಿಯಬೇಕು.

೧೪–೧೬. ಈ ಮೂರು ವಿಧವಾದ, ಶಬ್ದಾದಿ ವಿಷಯಗಳಲ್ಲಿ ಪ್ರವೃತ್ತಿರೂಪವಾದ, ಸಂಯೋಗವೂ ಸೂಕ್ಷ್ಮವಾದ ವಸ್ತುಗಳಲ್ಲಿಯೇ ಪ್ರವೇಶಿಸಬಲ್ಲದು. ಹಾಗೆಯೇ ಎಂಟು ಗುಣವುಳ್ಳ ಸಂಯೋಗವು

ತಸ್ಯ ರೂಪಂ ಪ್ರವಕ್ಷ್ಯಾಮಿ ಯಥಾಽಽಹ ಭಗವಾನ್ಪ್ರಭುಃ ।
ತ್ರೈಲೋಕ್ಯೇ ಸರ್ವಭೂತೇಷು ಯಥಾಽಸ್ಯ ನಿಯಮಃ ಸ್ಮೃತಃ ॥
ಅಣಿಮಾಽಽದ್ಯಂ ತಥಾಽವ್ಯಕ್ತಂ ಸರ್ವತ್ರೈವ ಪ್ರತಿಷ್ಠಿತಂ ।
ತ್ರೈಲೋಕ್ಯೇ ಸರ್ವಭೂತಾನಾಂ ದುಷ್ಪ್ರಾಪಂ ಸಮುದಾಹೃತಂ ॥
ತತ್ರಾಸ್ಯ ಭವತಿ ಪ್ರಾಪ್ಯಂ ಪ್ರಥಮಂ ಯೋಗಿನಾಂ ಬಲಂ ।
ಲಂಘನಂ ಪ್ಲವನಂ ಲೋಕೇ ರೂಪಮಸ್ಯ ಸದಾ ಭವೇತ್ ॥೧೭॥
ಶೀಘ್ರತ್ವಂ ಸರ್ವ ಭೂತೇಷು ದ್ವಿತೀಯಂ ತು ಪದಂ ಸ್ಮೃತಂ ।
ತ್ರೈಲೋಕ್ಯೇ ಸರ್ವಭೂತಾನಾಂ ಮಹಿಮ್ನಾ ಚೈವ ವಂದಿತಂ ॥೧೮॥
ಮಹಿತ್ವಂ ಚಾಽಪಿ ಲೋಕೇಽಸ್ಮಿನ್ ತೃತೀಯೋ ಯೋಗ ಉಚ್ಯತೇ ।
ತ್ರೈಲೋಕ್ಯೇ ಸರ್ವಭೂತೇಷು ಯಥೇಷ್ಟಗಮನಂ ಸ್ಮೃತಂ ॥೧೯॥

---

ಸೂಕ್ಷ್ಮವಾದ ವಸ್ತುಗಳ ವಿಷಯದಲ್ಲಿಯೇ ಹೇಳಲ್ಪಟ್ಟಿದೆ. ಭಗವಂತನೂ, ಸ್ವಾಮಿಯೂ, ಆದ ಶಿವನು ಹೇಳಿದ ರೀತಿಯಲ್ಲಿಯೇ ಅದರ ಸ್ವರೂಪವನ್ನು ವಿವರಿಸುವೆನು. ಮೂರುಲೋಕದಲ್ಲಿಯೂ, ಎಲ್ಲಾ ಭೂತಗಳ ವಿಷಯದಲ್ಲಿಯೂ ಇದರ ನಿಯಮವು ಹೇಗೆಂಬುದನ್ನು ವಿವರಿಸುವೆನು. ಕಣ್ಣಿಗೆ ಕಾಣಿಸದ ಅಣಿಮಾ, ಮುಂತಾದ ಮಹಿಮೆಗಳು ಎಲ್ಲಾ ಕಡೆಯಲ್ಲಿಯೂ ಇದ್ದರೂ, ಮೂರು ಲೋಕದಲ್ಲಿಯೂ ಎಲ್ಲಾ ಪ್ರಾಣಿಗಳಿಗೂ ದುರ್ಲಭವೆಂದು ಹೇಳಲ್ಪಟ್ಟಿದೆ. ಆದರೂ,

೧೭–೧೯. ಯೋಗಿಗಳಿಗೆ ಉಂಟಾಗುವ ಈ ಸಿದ್ಧಿಗಳಲ್ಲಿ ಮೊಟ್ಟಮೊದಲು ಹಾರುವುದು ಮತ್ತು ತೇಲುವುದು ಎಂಬ ಬಲಗಳೂ, ಶ್ರೇಷ್ಠವಾದ ರೂಪವೂ ಸಿದ್ಧಿಸುತ್ತವೆ. ಎರಡನೆಯದಾಗಿ ಯೋಗಿಗಳಿಗೆ ಎಲ್ಲರಿಗಿಂತಲೂ ಬಲು ಶೀಘ್ರವಾಗಿ ಹೋಗುವುದೂ, ಮೂರು ಲೋಕದಲ್ಲಿಯೂ, ಎಲ್ಲರಿಂದಲೂ ನಮಸ್ಕರಿಸಲ್ಪಡುವ ಯೋಗ್ಯತೆಯೂ, ಸಿದ್ಧಿಸುತ್ತವೆ. ಲೋಕದಲ್ಲಿ ಮಹಿತ್ವವೆಂಬ ಮೂರನೆಯ ಯೋಗವೂ, ಯೋಗಿಗಳ ವಿಷಯದಲ್ಲಿ ಹೀಗೆ ಹೇಳಲ್ಪಟ್ಟಿದೆ. ಮೂರು ಲೋಕದಲ್ಲಿಯೂ ಎಲ್ಲಾ ವಸ್ತುಗಳೊಳಗೆ ಇಚ್ಛೆ ಬಂದಹಾಗೆ ಪ್ರವೇಶಿಸುವ ಶಕ್ತಿಯೂ, ಯೋಗಿಗಳಿಗೆ ಲಭಿಸುತ್ತದೆ.

ಪ್ರಾಕಾಮ್ಯಾ ವಿಷಯಾನ್ ಭುಂಜನ್ನೇ ತಥಾಽಪ್ರತಿಹತಃ ಕ್ವಚಿತ್ ।
ತ್ರೈಲೋಕ್ಯೇ ಸರ್ವಭೂತಾನಾಂ ಸುಖದಃ ಸಂಪ್ರವರ್ತತೇ ॥೨೦॥
ಈಶೋ ಭವತಿ ಸರ್ವತ್ರ ಪ್ರವಿಭಾಗೇನ ಯೋಗವಿತ್ ।
ವಶ್ಯಾನಿ ಚಾಽಸ್ಯ ಭೂತಾನಿ ತ್ರೈಲೋಕ್ಯೇ ಸ ಚರಾಽಚರೇ ॥೨೧॥
ಇಚ್ಛಯಾ ತಸ್ಯ ರೂಪಾಣಿ ಭವಂತಿ ನ ಭವಂತಿ ಚ।
ಯತ್ರ ಕಾಮಾಽವಸಾಯಿತ್ವಂ ತ್ರೈಲೋಕ್ಯೇ ಸ ಚರಾಚರೇ ॥೨೨॥
ಶಬ್ದಃ ಸ್ಪರ್ಶೋ ರಸೋ ಗಂಧೋ ರೂಪಂ ಚೈವ ಮನಸ್ತಥಾ ।
ಪ್ರವರ್ತಂತೇಽಸ್ಯ ಚೇ ಚ್ಛಾತೋ ನ ಭವಂತಿ ಯಥೇ ಚ್ಛಯಾ ॥೨೩॥
ನ ಜಾಯತೇ ನ ಮ್ರಿಯತೇ ಛಿದ್ಯತೇ ನ ಚ ಭಿದ್ಯತೇ ।
ನ ದಹ್ಯತೇ ನ ಮುಹ್ಯೇತ ಲೀಯತೇ ನ ಚ ಲಿಪ್ಯತೇ ॥೨೪॥

---

೨೦–೨೨. ಯೋಗಿಯು ತಡೆಯೇ ಇಲ್ಲದೆ ಬೇಕುಬೇಕಾದ ಪದಾರ್ಥಗಳನ್ನು ಅನುಭವಿಸಬಲ್ಲನು. ಮೂರು ಲೋಕದಲ್ಲಿಯೂ ಎಲ್ಲರ ಸುಖ ದುಃಖಗಳನ್ನು ಹೆಚ್ಚು ಕಡಿಮೆ ಮಾಡಬಲ್ಲನು. ಯೋಗಿಯು ತನಗೆ ತೋರಿದಹಾಗೆ ತನ್ನನ್ನು ವಿಭಾಗಿಸಿಕೊಂಡು ಎಲ್ಲಾ ಕಡೆ ಯಲ್ಲಿಯೂ ಸ್ವಾಮಿಯಾಗಿರುವ ಶಕ್ತಿಯನ್ನು ಪಡೆಯುವನು. ಮೂರು ಲೋಕದ ಸ್ಥಾವರ ಜಂಗಮಾತ್ಮಕವಾದ ವಸ್ತುಗಳೆಲ್ಲವೂ ಇವನಿಗೆ ಅಧೀನವಾಗುವುವು. ಯೋಗಿಯು ತನ್ನ ಇಚ್ಛೆಗೆ ಅನುಸಾರವಾಗಿ ರೂಪ ವನ್ನು ತೆಗೆದುಕೊಳ್ಳಬಲ್ಲನು. ಅವನ್ನು ಬಿಡಲೂ ಬಲ್ಲನು. ಹೀಗೆಯೇ ಯೋಗಿಯು ಮೂರು ಲೋಕದ ಸ್ಥಾವರ ಜಂಗಮಸ್ವರೂಪವಾದ ಪದಾರ್ಥಗಳಲ್ಲಿ ತನ್ನ ಇಚ್ಛೆಯಂತೆ ವರ್ತಿಸಬಲ್ಲನು.

೨೩–೨೫. ಯೋಗಿಯು ಇಚ್ಛೆಯಂತೆಯೇ ಶಬ್ದ, ಸ್ಪರ್ಶ, ಗಂಧ, ರೂಪ, ಮನಸ್ಸು, ಇವೆಲ್ಲವುಗಳಲ್ಲೂ ಪ್ರವೃತ್ತಿಯು ಉಂಟಾಗುತ್ತದೆ. ಇವನು ಇಚ್ಛಿಸದಿದ್ದರೆ 'ಏನೂ ಉಂಟಾಗುವುದಿಲ್ಲ. ಯೋಗಿಗೆ ಹುಟ್ಟುವುದಾಗಲಿ, ಸಾಯುವುದಾಗಲಿ, ಕತ್ತರಿಸಲ್ಪಡುವುದಾಗಲಿ, ಸೀಳಲ್ಪ ಡುವುದಾಗಲಿ, ಸುಡಲ್ಪಡುವುದಾಗಲಿ, ಮೋಹಗೊಳ್ಳುವುದಾಗಲಿ, ಲಯವಾ

ನ ಕ್ಷೀಯತೇ ನ ಕ್ಷರತಿ ಖಿದ್ಯತೇ ನ ಕದಾಚನ ।
ಕ್ರಿಯತೇ ವಾ ನ ಸರ್ವತ್ರ ತಥಾ ವಿಕ್ರಿಯತೇ ನ ಚ ॥೨೫॥
ಅಗಂಧ ರಸ ರೂಪಸ್ತು ಅಸ್ಪರ್ಶಃ ಶಬ್ದವರ್ಜಿತಃ ।
ಅವರ್ಣೋ ಹ್ಯಸ್ವರ ಶ್ಚೈವ ಅಸವರ್ಣಸ್ತು ಕರ್ಹಿಚಿತ್ ॥೨೬॥
ಸ ಭುಂಜನ್ನೀ ವಿಷಯಾಂ ಶ್ಚೈವ ವಿಷಯೈರ್ನ ಚ ಯುಜ್ಯತೇ ।
ಅಣುತ್ವಾತ್ತು ಪರಃ ಸೂಕ್ಷ್ಮಃ ಸೂಕ್ಷ್ಮತ್ವಾದಪವರ್ಗಿಕಃ ॥೨೭॥
ವ್ಯಾಪಕಸ್ತ್ವಪವರ್ಗಾಚ್ಚ ವ್ಯಾಪಕಾ ತ್ಪುರುಷಃ ಸ್ಮೃತಃ ।
ಪುರುಷಃ ಸೂಕ್ಷ್ಮಭಾವಾತ್ತು ಐಶ್ವರ್ಯೇ ಪರಮೋ ಸ್ಥಿತಃ ॥೨೮॥
ಗುಣೋತ್ತರಮಥೈಶ್ವರ್ಯೇ ಸರ್ವತಃ ಸೂಕ್ಷ್ಮಮುಚ್ಯತೇ ।
ಐಶ್ವರ್ಯಂ ಚಾಽಪ್ರತೀಘಾತಂ ಪ್ರಾಪ್ಯ ಯೋಗಮನುತ್ತಮಂ ॥

---

ಗುವುದಾಗಲಿ, ಜಗತ್ತಿಗೆ ಅಂಟಿಕೊಳ್ಳುವುದಾಗಲಿ, ಒಂದೂ ಇರುವುದಿಲ್ಲ. ಇವನಿಗೆ ಸಾಯುವುದಾಗಲಿ,ಕ್ಷಯಿಸುವುದಾಗಲಿ, ಸಂಕಟಪಡುವುದಾಗಲಿ, ಯಾವಾಗಲೂ ಸಂಭವಿಸುವುದಿಲ್ಲ. ಇವನು ಕರ್ಮವಾಡುವುದಾಗಲಿ, ವಿಕಾರಹೊಂದುವುದಾಗಲಿ, ಯಾವುದನ್ನೂ ಹೊಂದಿ ಇರುವುದಿಲ್ಲ.

೨೬–೨೮. ಯೋಗಿಯು ಗಂಧ, ರಸ, ರೂಪಗಳಿಲ್ಲದವನಾಗಿಯೂ, ಸ್ಪರ್ಶ, ಶಬ್ದಗಳಿಲ್ಲದವನಾಗಿಯೂ, ವರ್ಣ, ಸ್ವರ, ಸಮಾನವರ್ಣಗಳಿಲ್ಲದವನಾಗಿಯೂ, ಇರುವನು. ಯೋಗಿಯು ವಿಷಯುಗಳನ್ನು ಅನುಭವಿಸಿದರೂ, ಆವನಿಗೆ ವಿಷಯ ಸಂಪರ್ಕವಿಲ್ಲ. ಅವನು ಅತ್ಯಂತ ಸೂಕ್ಷ್ಮವಸ್ತುವಿಗಿಂತಲೂ, ಬಹು ಸೂಕ್ಷ್ಮನು. ಸೂಕ್ಷ್ಮಸ್ವಭಾವವಿರುವುದರಿಂದಲೇ ಮೋಕ್ಷಸ್ವಭಾವವನ್ನು ಅನುಭವಿಸುವನು. ಮೋಕ್ಷಸುಖವಿರುವುದರಿಂದಲೇ ವ್ಯಾಪಕನಾಗಿರುವುದರಿಂದಲೇ ಪುರುಷನೂ ಆಗಿದ್ದಾನೆ. ಸೂಕ್ಷ್ಮರೂಪವಿರುವುದರಿಂದಲೇ ಪುರುಷನಾಗಿಯೂ, ಶ್ರೇಷ್ಠವಾದ ಮಹಿಮೆಯಿಂದ ಕೂಡಿದವನಾಗಿಯೂ ಇದ್ದಾನೆ.

೨೯–೩೧. ಅನಂತರದಲ್ಲಿ ಎಲ್ಲಾ ಐಶ್ವರ್ಯಗಳಿಗಿಂತಲೂ ಶ್ರೇಷ್ಠವಾಗಿಯೂ, ಸೂಕ್ಷ್ಮವಾಗಿಯೂ, ಇರುವುದು ಅಣಿಮಾದ್ಯೈಶ್ವರ್ಯಗ

ಅಪವರ್ಗಂ ತತೋ ಗಚ್ಛೇ ತ್ಸೂಕ್ಷ್ಮಂ ತತ್ಪರಮಂ ಪದಂ ।
ಏವಂ ಪಾಶುಪತಂ ಯೋಗಂ ಜ್ಞಾತವ್ಯಂ ಮುನಿಪುಂಗ ವಾಃ ॥೩೦॥

ಸ್ವರ್ಗಾಽಪವರ್ಗ ಫಲದಂ ಶಿವಸಾಯುಜ್ಯ ಕಾರಣಂ ।
ಅಥವಾ ಗತ ವಿಜ್ಞಾನೋ ರಾಗಾತ್ಕರ್ಮ ಸಮಾಚರೇತ್ ॥೩೧॥

ರಾಜಸಂ ತಾಮಸಂ ವಾಽಪಿ ಭುಕ್ತ್ವಾ ತತ್ರೈವ ಮುಚ್ಯತೇ ।
ತಥಾ ಸುಕೃತ ಕರ್ಮಾ ತು ಫಲಂ ಸ್ವರ್ಗೇ ಸಮಶ್ನುತೇ ॥೩೨॥

ತಸ್ಮಾ ತ್ಸ್ಥಾನಾ ತ್ಪುನಃ ಶ್ರೇಷ್ಠೋ ಮಾನುಷ್ಯ ಮುಪಪದ್ಯತೇ ।
ತಸ್ಮಾ ದ್ಬ್ರಹ್ಮ ಪರಂ ಸೌಖ್ಯಂ ಬ್ರಹ್ಮ ಶಾಶ್ವತ ಮುತ್ತಮಂ ॥೩೩॥

ಬ್ರಹ್ಮ ಏವ ಹಿ ಸೇವೇತ ಬ್ರಹ್ಮೈವ ಹಿ ಪರಂ ಸುಖಂ ।
ಪರಿಶ್ರಮೋ ಹಿ ಯಜ್ಞಾನಾಂ ಮಹತಾಽರ್ಥೇನ ವರ್ತತೇ ॥೩೪॥

---

ಳೆಂದು ತಿಳಿಯಬೇಕು. ಯೋಗಿಯು ಯಾವ ವಿಧವಾದ ತಡೆಯೂ ಇಲ್ಲದ ಶ್ರೇಷ್ಠವಾದ ಈ ಯೋಗದ ಮಹಿಮೆಯಿಂದ ಅಣಿಮಾದಿ ಐಶ್ವರ್ಯ ಗಳನ್ನೂ ಪಡೆದು, ಅತ್ಯಂತ ಸೂಕ್ಷ್ಮವಾದ, ಮತ್ತು ಅತ್ಯಂತ ಉತ್ಕೃಷ್ಟ ಸ್ಥಾನವಾದ ಮೋಕ್ಷವನ್ನು ಹೊಂದುವನು. ಎಲೈ ಮುನಿಶ್ರೇಷ್ಠರೇ, ಹೀಗೆ ಪಶುಪತಿಯಾದ ಶಿವನಿಗೆ ಸಂಬಂಧಿಸಿದ ಯೋಗದ ಮಹಿಮೆ ಯೆಂದು ತಿಳಿಯಿರಿ. ಈ ಯೋಗವು ಸ್ವರ್ಗವನ್ನೂ, ಮೋಕ್ಷವನ್ನೂ, ಕೊಡುವಂತಹದೂ, ಶಿವೈಕ್ಯ ಶಿವಸಾಯುಜ್ಯ ರೂಪವಾದ ಮೋಕ್ಷಕ್ಕೆ ಕಾರಣವಾದುದೂ ಆಗಿದೆ. ಹೀಗೆ ಮಧ್ಯದಲ್ಲಿ ಸಿದ್ಧಿಸಿದ ಐಶ್ವರ್ಯಗಳಿಗೆ ಮನಸೋತ ಉಪಾಸಕನು, ಯೋಗವನ್ನು ಅರ್ಧದವರೆಗೆ ನಡೆಸಿದ ಯೋಗಿಯು, ಪರಬ್ರಹ್ಮತತ್ವದ ಜ್ಞಾನವನ್ನು ಕಳೆದುಕೊಂಡು, ತನ್ನ ಇಚ್ಛೆಯಿಂದಲೇ ಕರ್ಮಮಾರ್ಗಕ್ಕೆ ಬೀಳುವನು.

೩೨–೩೪. ಹೀಗೆ ಯೋಗವನ್ನು ಮಧ್ಯದಲ್ಲಿ ಬಿಟ್ಟುಬಿಟ್ಟ ಮನು ಷ್ಯನು ರಜೋ ಗುಣದಿಂದ ಮತ್ತು ತಮೋಗುಣದಿಂದ ಕೂಡಿದ ಭೋಗ ಗಳನ್ನು ಅನುಭವಿಸಿ, ಅನಂತರದಲ್ಲಿ ಮೋಕ್ಷವನ್ನು ಹೊಂದುತ್ತಾನೆ. ಹಾಗೆಯೇ ಒಳ್ಳೆಯ ಕರ್ಮಮಾಡಿದವನು ಸ್ವರ್ಗಲೋಕದ ಫಲವನ್ನು

ಭೂಯೋ ಮೃತ್ಯು ವಶಂ ಯಾತಿ ತಸ್ಮಾನ್ಮೋಕ್ಷಃ ಪರಂ ಸುಖಂ ।
ಅಥವಾ ಧ್ಯಾನಸಂಯುಕ್ತೋ ಬ್ರಹ್ಮತತ್ವ ಪರಾಯಣಃ ॥೩೫॥
ನ ತು ಚ್ಯಾವ ಯಿತುಂ ಶಕ್ಯೋ ಮನ್ವಂತರ ಶತೈರಪಿ ।
ದೃಷ್ಟ್ವಾ ತು ಪುರುಷಂ ದಿವ್ಯಂ ವಿಶ್ವಾಖ್ಯಂ ವಿಶ್ವತೋ ಮುಖಂ ॥
ವಿಶ್ವಪಾದ ಶಿರೋಗ್ರೀವಂ ವಿಶ್ವೇಶಂ ವಿಶ್ವರೂಪಿಣಂ ।
ವಿಶ್ವಗಂಧಂ ವಿಶ್ವಮಾಲ್ಯಂ ವಿಶ್ವಾಂಬರ ಧರಂ ಪ್ರಭುಂ ॥೩೭॥

---

ಅನುಭವಿಸುತ್ತಾನೆ. ಅನಂತರದಲ್ಲಿ ಆ ಪುಣ್ಯವೂ ಮುಗಿದಮೇಲೆ ಶ್ರೇಷ್ಠವಾದ ಆ ಸ್ವರ್ಗವನ್ನು ಬಿಟ್ಟು ಶ್ರೇಷ್ಠನಾದ ಮನುಷ್ಯನಾಗಿ ಹುಟ್ಟುತ್ತಾನೆ. ಆದ್ದರಿಂದ ಬ್ರಹ್ಮನೇ ಶ್ರೇಷ್ಠವಾದ ಸುಖಸ್ವರೂಪನು. ಅವನೇ ನಿತ್ಯನು ಮತ್ತು ಉತ್ತಮನೂ ಆಗಿರುವನು. ಆದ್ದರಿಂದ ಬ್ರಹ್ಮನನ್ನೇ ಸೇವೆಮಾಡಬೇಕು. ಬ್ರಹ್ಮನೇ ಅತ್ಯಂತ ಉತ್ಕೃಷ್ಟನಾದ ಸುಖಸ್ವರೂಪನು. ಯಾಗಗಳನ್ನು ಮಾಡಲು ಬಹಳ ಶ್ರಮವೂ, ಹೆಚ್ಚಾಗಿ ಸಾಮಾನುಗಳೂ ಬೇಕಾಗುತ್ತವೆ.

೩೫–೩೭. ಯಾಗ ಮಾಡಿದರೂ ಸ್ವರ್ಗಾದಿ ಸೌಖ್ಯಗಳು ಬರುವುದೇ ವಿನಾ ಮನುಷ್ಯನಿಗೆ ಮರಣವು ತಪ್ಪುವುದಿಲ್ಲ. ಆದ್ದರಿಂದ ಮೋಕ್ಷವೇ ಅತ್ಯಂತ ಉತ್ಕೃಷ್ಟವಾದ ಸುಖವು. ಹಾಗಲ್ಲದಿದ್ದರೆ ಮಾನವನು ಧ್ಯಾನ ಮಾಡುವವನಾಗಿ, ಬ್ರಹ್ಮಜ್ಞಾನದಲ್ಲಿ ಆಸಕ್ತನಾಗಿದ್ದರೆ, ಇಂಥಾವನನ್ನು ನೂರಾರು ಮನ್ವಂತರಗಳಾದರೂ ಅವನ ಶ್ರೇಷ್ಠಪದವಿಯಿಂದ ಅಲ್ಲಾಡಿಸಲು ಸಾಧ್ಯವಿಲ್ಲ. ಮಾನವನು ಜಾಗ್ರದವಸ್ಥೆಗೆ ಅಭಿಮಾನಿಯಾದ ವಿಶ್ವ, ಎಂಬ ಹೆಸರುಳ್ಳ, ನಾನಾ ಮುಖವುಳ್ಳ, ಪ್ರಪಂಚವನ್ನೇ ವ್ಯಾಪಿಸಿದ, ಕಾಲು, ತಲೆ, ಕತ್ತುಗಳುಳ್ಳ, ಪ್ರಪಂಚಕ್ಕೆ ಅಧಿಪತಿಯಾದ, ಪ್ರಪಂಚ ಸ್ವರೂಪಿಯಾದ, ಪ್ರಪಂಚದ ಎಲ್ಲ ಮಧುರವಾಸನೆಯುಳ್ಳ, ಪ್ರಪಂಚದ ಮಾಲಿಕೆಯುಳ್ಳ, ಪ್ರಪಂಚವೆಂಬ ಬಟ್ಟೆಯನ್ನು ಧರಿಸಿರುವ ದಿವ್ಯ ತತ್ವರೂಪವನ್ನು ಧ್ಯಾನಿಸಬೇಕು.

ಗೋಭಿರ್ಮಹೀಂ ಸಂಪತತೇ ಪತತ್ರಿಣೋ ।
ನೈವಂ ಭೂಯೋ ಜನಯತ್ಯೇವ ಮೇವ ॥
ಕವಿಂ ಪುರಾಣ ಮನುಶಾಸಿ ತಾರಂ ।
ಸೂಕ್ಷ್ಮಾಚ್ಚ ಸೂಕ್ಷ್ಮಂ ಮಹತೋ ಮಹಾಂತಂ ॥೩೮॥

ಯೋಗೇನ ಪಶ್ಯೇ ನ್ನ ಚ ಚಕ್ಷುಷಾ ಪುನ ।
ನಿರಿಂದ್ರಿಯಂ ಪುರುಷಂ ರುಕ್ಮ ವರ್ಣಂ ॥
ಅಲಿಂಗಿನಂ ನಿರ್ಗುಣಂ ಚೇತನಂ ಚ ।
ನಿತ್ಯಂ ಸದಾ ಸರ್ವಗಂ ಸರ್ವಸಾರಂ ॥೩೯॥

ಪಶ್ಯಂತಿ ಯುಕ್ತ್ಯಾ ಹ್ಯಚಲ ಪ್ರಕಾಶಂ ।
ತದ್ಭಾವಿತಾ ಸ್ತೇಜಸಾ ದೀಪ್ಯಮಾನಂ ॥
ಅಪಾಣಿ ಪಾದೋದರ ಪಾರ್ಶ್ವ ಜಿಹ್ವೋ ।
ಹ್ಯತೀಂದ್ರಿಯೋ ವಾಽಪಿ ಸುಸೂಕ್ಷ್ಮ ಏಕಃ ॥೪೦॥

---

೩೮–೪೦. ಸೂರ್ಯನ ಕಿರಣಗಳ ತಾಪವನ್ನು ತಡೆಯಲಾರದೇ ಹಕ್ಕಿಗಳು ಭೂಮಿಗೆ ಬೀಳುತ್ತವೆ. ಪುನಃ ಅವು ಮೇಲಕ್ಕೆ ಹಾರುವುವು. ಹಾಗೆ ಬ್ರಹ್ಮನು ಪ್ರಪಂಚವನ್ನು ಮೊದಲು ನಾಶಮಾಡಿ, ತಿರುಗಿ ಅದೇ ಬಗೆಯ ಜಗತ್ತನ್ನೇ ಸೃಷ್ಟಿಮಾಡುತ್ತಾನೆ. ಇಂಥಾ, ಕವಿಯೂ, ಪ್ರಾಚೀನನೂ, ಪ್ರಪಂಚ ನಿಯಮವನ್ನು ಮಾಡುತ್ತಿರುವವನೂ, ಬಹು ಸೂಕ್ಷ್ಮ ವಸ್ತುವಿಗಿಂತ ಅತಿ ಸೂಕ್ಷ್ಮನೂ, ಅತಿ ದೊಡ್ಡವಸ್ತುವಿಗಿಂತ ದೊಡ್ಡವನೂ, ಇಂದ್ರಿಯಗಳಿಲ್ಲದವನೂ, ಚಿನ್ನದ ಬಣ್ಣವುಳ್ಳವನೂ, ವಿಕಾರವಿಲ್ಲದವನೂ, ಸತ್ವ ಮುಂತಾದ ಗುಣಗಳಿಲ್ಲದವನೂ, ಜ್ಞಾನ ಸ್ವರೂಪಿಯೂ, ನಿತ್ಯನೂ, ಎಲ್ಲೆಲ್ಲಿಯೂ ವ್ಯಾಪಿಸಿರುವವನೂ, ಎಲ್ಲದಕ್ಕಿಂತಲೂ ಸಾರಭೂತವಾದ ವಸ್ತುವೂ. ಆದ ಪರಮೇಶ್ವರನನ್ನು ಕಣ್ಣಿನಿಂದ ನೋಡಲು ಆಗದಿದ್ದರೂ, ಯೋಗದೃಷ್ಟಿಯಿಂದ ನೋಡಬಹುದು. ಯೋಗಿಗಳು ಯೋಗದ ಮಹಿಮೆಯಿಂದ ನಾಶವಾಗದ ಪ್ರಕಾಶವುಳ್ಳ ಪರಮಾತ್ಮನನ್ನು ಅವನ ಪ್ರಕಾಶಮಾನವಾದ ತೇಜಸ್ಸಿನ ಭಾವನೆಯುಳ್ಳವರಾಗಿ ನೋಡುತ್ತಾರೆ. ಭಗವಂತನು ಕೈಕಾಲು, ಹೊಟ್ಟೆ, ಪಕ್ಕೆಗಳು, ನಾಲಿಗೆ ಮುಂತಾದ ದೇಹದ ಅಂಗಗಳಲ್ಲಿ ಒಂದೂ ಇಲ್ಲದವನೂ, ಇಂದ್ರಿಯಗಳಿಗೆ ಅಗೋಚರನೂ, ಬಹು ಸೂಕ್ಷ್ಮನೂ, ಎರಡನೆಯದೊಂದೂ ಇಲ್ಲದವನೂ, ಆಗಿರುತ್ತಾನೆ.

ಪಶ್ಯತ್ಯ ಚಕ್ಷುಃ ಸ ಶೃಣೋತ್ಯಕರ್ಣೋಃ ।
ನ ಚಾಸ್ಯ ಬುದ್ಧಂ ನ ಚ ಬುದ್ಧಿರಸ್ತಿ ॥
ಸ ವೇದ ಸರ್ವಂ ನ ಚ ಸರ್ವವೇದ್ಯಂ ।
ತಮಾಹು ರಗ್ರ್ಯಂ ಪುರುಷಂ ಮಹಾಂತಂ ॥ ೪೧ ॥

ಅಚೇತನಾಂ ಸರ್ವಗತಾಂ ಸೂಕ್ಷ್ಮಾಂ ಪ್ರಸವ ಧರ್ಮಿಣೀಂ ।
ಪ್ರಕೃತಿಂ ಸರ್ವಭೂತಾನಾಂ ಯುಕ್ತಾಃ ಪಶ್ಯಂತಿ ಯೋಗಿನಃ ॥೪೨॥

ಸರ್ವತಃ ಪಾಣಿ ಪಾದಂ ತತ್ಸರ್ವತೋಽಕ್ಷಿ ಶಿರೋ ಮುಖಂ ।
ಸರ್ವತಃ ಶ್ರುತಿ ಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥೪೩॥

ಯುಕ್ತೋ ಯೋಗೇನ ಚೇಶಾನಂ ಸರ್ವತಶ್ಚ ಸನಾತನಂ ।

---

೪೧. ಭಗವಂತನು ಕಣ್ಣುಗಳಿಲ್ಲದಿದ್ದರೂ, ನೋಡುತ್ತಾನೆ. ಕಿವಿಗಳಿಲ್ಲದಿದ್ದರೂ, ಕೇಳುತ್ತಾನೆ. ಇವನಿಗೆ ತಿಳಿಯದಿರುವುದು ಯಾವುದೂ ಇಲ್ಲದಿದ್ದರೂ, ಬುದ್ಧಿಯೆಂಬ ಅಂತಃಕರಣ ರೂಪವಾದ ಇಂದ್ರಿಯವೇ ಇವನಿಗಿಲ್ಲ. ಆದರೂ ಅಖಂಡಜ್ಞಾನ ಸ್ವರೂಪನಾದ ಅವನು ಎಲ್ಲವನ್ನೂ ತಿಳಿಯುತ್ತಾನೆ. ಆದರೆ ಅವನನ್ನು ಯಾರೂ ತಿಳಿಯಲಾರರು. ಇವನನ್ನು ಮೊಟ್ಟಮೊದಲಿನ ಶ್ರೇಷ್ಠನಾದ ಪುರುಷನೆಂದು ಕರೆಯುತ್ತಾರೆ.

೪೨-೪೪. ಯೋಗಿಗಳು ತಮ್ಮ ಯೋಗಾಭ್ಯಾಸದ ಮಹಿಮೆಯಿಂದ ಎಲ್ಲಾ ಕಡೆಯಲ್ಲಿಯೂ ಇರುವ, ಜಡವಾದ, ಸೂಕ್ಷ್ಮವಾದ ಪ್ರಪಂಚದ ಉತ್ಪತ್ತಿಗೆ ಕಾರಣವಾದ, ಎಲ್ಲಾ ವಸ್ತುಗಳಿಗೂ ಮೂಲ ಕಾರಣವಾದ, ಪ್ರಕೃತಿಯನ್ನು ನೋಡುತ್ತಾರೆ. ಭಗವಂತನಿಗೆ ಸಂಬಂಧಪಟ್ಟ ಮೂಲ ಪ್ರಕೃತಿಯೆಂಬ ತತ್ವವು, ಅದರ ಕೈಕಾಲುಗಳನ್ನು ಎಲ್ಲಾ ಕಡೆಯಲ್ಲಿಯೂ ಹರಡಿ, ಎಲ್ಲಾ ಕಡೆಯಲ್ಲಿಯೂ, ಕಣ್ಣು, ತಲೆ, ಮುಖಗಳುಳ್ಳದ್ದಾಗಿ, ಎಲ್ಲವನ್ನೂ ವ್ಯಾಪಿಸಿಕೊಂಡಿದೆ. ಯೋಗಾಭ್ಯಾಸ ಮಾಡಿದ ಯೋಗಿಯು ಜ್ಞಾನಿಯಾಗಿ, ಬಹಳ ಪ್ರಾಚೀನನಾದ, ಎಲ್ಲಾ ಕಡೆಯಲ್ಲಿಯೂ ವ್ಯಾಪಿ

ಪುರುಷಂ ಸರ್ವಭೂತಾನಾಂ ತಂ ವಿದ್ವಾನ್ನ ವಿಮುಚ್ಯತೇ ॥೪೪॥
ಭೂತಾತ್ಮಾನಂ ಮಹಾತ್ಮಾನಂ ಪರಮಾತ್ಮಾನ ಮವ್ಯಯಂ ।
ಸರ್ವಾತ್ಮಾನಂ ಪರಬ್ರಹ್ಮ ತದ್ವೈ ಧಾತಾ ನ ಮುಹ್ಯತಿ ॥೪೫॥
ಪವನೋ ಹಿ ಯಥಾಗ್ರಾಹ್ಯೋ ವಿಚರನ್ ಸರ್ವ ಮೂರ್ತಿಷು ।
ಪುರಿ ಶೇತೇ ಸುದುರ್ಗ್ರಾಹ್ಯಸ್ತಸ್ಮಾತ್ಪುರುಷ ಉಚ್ಯತೇ ॥೪೬॥
ಅಥ ಚೇಲ್ಲುಪ್ತಧರ್ಮಾ ತು ಸಾವಶೇಷೈಃ ಸ್ವಕರ್ಮಭಿಃ ।
ತತಸ್ತು ಬ್ರಹ್ಮಗರ್ಭೇ ವೈ ಶುಕ್ರ ಶೋಣಿತ ಸಂಯುತೇ ॥ ೪೭ ॥

---

ಸಿರುವ, ಎಲ್ಲಾ ವಸ್ತುಗಳಿಗೂ ಮುಂಚೆ ಆದಿಪುರುಷನಾದ ಈಶ್ವರನನ್ನು ದರ್ಶನಮಾಡಿ, ಸಕಲ ವಿಧವಾದ ಅಜ್ಞಾನದಿಂದ ಬಿಡುಗಡೆಯನ್ನು ಹೊಂದುತ್ತಾನೆ.

೪೫–೪೭. ಎಲ್ಲಾ ಭೂತವಸ್ತುಗಳಿಗೂ ಆತ್ಮಸ್ವರೂಪನಾದ, ಮಹಾತ್ಮನಾದ, ಆ ವಾಸ್ತವರೂಪದಲ್ಲಿ ವಿಕಾರರಹಿತನಾದ, ಎಲ್ಲಾ ಸ್ವರೂಪವನ್ನೂ ವ್ಯವಹಾರ ದೃಷ್ಟಿಯಲ್ಲಿ ಧಾರಣ ಮಾಡಿರುವ, ಪರಬ್ರಹ್ಮನನ್ನು ಧ್ಯಾನಮಾಡಿ, ಯೋಗಿಯು ಅಜ್ಞಾನದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಎಲ್ಲಾ ಪ್ರದೇಶಗಳಲ್ಲಿಯೂ ಸಂಚರಿಸುವ ಗಾಳಿಯನ್ನು ತಿಳಿಯುವುದು ಹೇಗೆ ಕಷ್ಟವೋ ಹಾಗೆಯೇ ಎಂದರೆ ಜೀವನೂ ಶರೀರದಲ್ಲಿರುವುದರಿಂದ, ಪುರುಷನೆಂಬ ಒಳ್ಳೆಯ ಹೆಸರನ್ನು ಪಡೆದು, ಬುದ್ಧಿಯಿಂದ ಮುಟ್ಟಲು ಎಂದರೆ ತಿಳಿಯಲು ತುಂಬಾ ಯೋಗ್ಯನಾಗಿರುತ್ತಾನೆ. ಒಂದು ಪಕ್ಷದಲ್ಲಿ ಇಂಥಾ ಯೋಗಿಯು, ತನ್ನ ಕರ್ಮವನ್ನು ಮಧ್ಯದಲ್ಲಿ ಬಿಟ್ಟು ಅದರ ಫಲಾನುಭವದಿಂದ ಕಳೆದುಕೊಂಡಿದ್ದರೆ ಉಳಿದಿರುವ ತನ್ನ ಕರ್ಮವನ್ನು ಅನುಭವಿಸುವುದಕ್ಕಾಗಿ, ವೀರ್ಯ ಮತ್ತು ರಕ್ತಗಳಿಂದ ಕೂಡಿರುವ, ಬ್ರಾಹ್ಮಣನಿಗೆ ಸಂಬಂಧಪಟ್ಟ ಸ್ತ್ರೀಗರ್ಭದಲ್ಲಿ ಹೋಗಿ ಸೇರುತ್ತಾನೆ.

**ಸ್ತ್ರೀಪುಂಸೋಃ ಸಂಪ್ರಯೋಗೇ ಹಿ ಜಾಯತೇ ಹಿ ತತಃ ಪ್ರಭುಃ ।**
**ತತಸ್ತು ಗರ್ಭಕಾಲೇನ ಕಲಲಂ ನಾಮ ಜಾಯತೇ ॥ ೪೮ ॥**
**ಕಾಲೇನ ಕಲಲಂ ಚಾಽಪಿ ಬುದ್ಬುದಂ ಸಂಪ್ರಜಾಯತೇ ।**
**ಮೃತ್ಪಿಂಡಸ್ತು ತಥಾ ಚಕ್ರೇ ಚಕ್ರಾವರ್ತೇನ ಪೀಡಿತಃ ॥ ೪೯ ॥**
**ಹಸ್ತಾಭ್ಯಾಂ ಕ್ರಿಯಮಾಣಸ್ತು ಬಿಂಬತ್ವಮನುಗಚ್ಛತಿ ।**
**ಏವ ಮಾಧ್ಯಾತ್ಮಿಕೈರ್ಯುಕ್ತೋ ವಾಯುನಾ ಸಂಪ್ರಪೂರಿತಃ ॥**
**ಯದಿ ಯೋನಿಂ ವಿಮುಂಚಾಮಿ ತತ್ಪ್ರಪದ್ಯೇ ಮಹೇಶ್ವರಂ ।**
**ಯಾವದ್ಧಿ ವೈಷ್ಣವೋ ವಾಯು ರ್ಜಾತಮಾತ್ರಂ ನ ಸಂಸ್ಪೃಶೇತ್ ॥**

---

೪೮–೫೦. ಆಮೇಲೆ ಆ ಸ್ತ್ರೀಪುರುಷರ ಸಂಬಂಧದಿಂದ ಆ ಜೀವನು ಅಂಥಾ ಗರ್ಭದಲ್ಲಿ ಜನಿಸುತ್ತಾನೆ. ಅನಂತರದಲ್ಲಿ ಗರ್ಭ ಕಾಲದಲ್ಲಿ ಅವರ ಶುಕ್ಲಶೋಣಿತಗಳು ಒಂದು ಬಗೆಯ ಪರಿಣಾಮದಿಂದ ಕಲಲ, ಬುದ್ಬುದ, ರೂಪವನ್ನು ಪಡೆಯುತ್ತವೆ. ಆಮೇಲೆ ಅದು ಒಂದು ಬಗೆಯ ಘನವಾದ ಮಾಂಸದುಂಡೆಯಾಗುತ್ತದೆ. ಚಕ್ರದಸುತ್ತಿಗೆ ಸಿಕ್ಕಿರುವ ಮಣ್ಣಿನ ಮುದ್ದೆಯಂತೆ ಗರ್ಭದಲ್ಲಿ ಇದು ಹಿಂದೆ ಹೇಳಿದ ಮಾಂಸದ ಮುದ್ದೆಯಾಗುತ್ತದೆ. ಚಕ್ರದಿಂದ ತಿರುಗಿಸಲ್ಪಟ್ಟ ಮಣ್ಣಿನ ಮುದ್ದೆಯನ್ನು ಕೈಯ್ಯಿಂದ ಆಡಿಸಿದಾಗ ಅದು ಹೇಗೆ ಮಡಕೆ ಮುಂತಾದ ರೂಪವನ್ನು ತಾಳುವುದೋ, ಹಾಗೆಯೇ ಈ ದೇಹದ ಗರ್ಭದೊಳಗಿರುವ ಮಾಂಸದ ಮುದ್ದೆಯು ಪಂಚ ಭೂತದ ಗುಣಗಳನ್ನೂ ಹೊಂದಿ, ಪ್ರಾಣವಾಯುವಿನಿಂದ ಆಯಾ ರೂಪಾಂತರ ಪರಿಣಾಮಗಳನ್ನು ಪಡೆಯುತ್ತದೆ. ಆಮೇಲೆ ಕ್ರಮವಾಗಿ ಅಂಗಗಳು ಉಂಟಾಗಿ ಜೀವನ ಪ್ರವೇಶವಾಗುತ್ತದೆ.

೫೧–೫೩. ಆಗ ಈ ಜೀವನು ಗರ್ಭದಿಂದ ಹೊರಗಡೆಗೆ ಬರುವುದಕ್ಕೆ ಮುಂಚೆ ಅಲ್ಲಿನ ಯಾತನೆಗಳಿಂದ ನೊಂದು ಮಹೇಶ್ವರನನ್ನು ಧ್ಯಾನಿಸುತ್ತಾ ಮೋಕ್ಷೋಪಾಯವನ್ನೂ ಚಿಂತಿಸುತ್ತಿರುತ್ತಾನೆ. ಹುಟ್ಟಿದ

**ತಾವತ್ಕಾಲಂ ಮಹಾದೇವ ಮರ್ಚಯಾಮೀತಿ ಚಿಂತಯೇತ್ ।**
**ಜಾಯತೇ ಮಾನುಷಸ್ತತ್ರ ಯಥಾರೂಪಂ ಯಥಾ ವಯಃ ॥ ೫೨ ॥**

**ವಾಯುಃ ಸಂಭವತೇ ಖಾತ್ತು ವಾತಾದ್ಭವತಿ ವೈ ಜಲಂ ।**
**ಜಲಾ ತ್ಸಂಭವತಿ ಪ್ರಾಣಃ ಪ್ರಾಣಾಚ್ಛುಕ್ರಂ ವಿವರ್ಧತೇ ॥ ೫೩ ॥**

**ರಕ್ತಭಾಗಾಸ್ತ್ರಯ ಸ್ತ್ರಿಂಶ ದ್ರೇತೋ ಭಾಗಾಶ್ಚತುರ್ದಶ ।**
**ಭಾಗತೋಽರ್ಧಫಲಂ ಕೃತ್ವಾ ತತೋ ಗರ್ಭೋ ನಿಷಿಚ್ಯತೇ ॥೫೪॥**

**ತತಸ್ತು ಗರ್ಭಸಂಯುಕ್ತಃ ಪಂಚಭಿ ರ್ವಾಯುಭಿರ್ವೃತಃ ।**
**ಪಿತುಃ ಶರೀರಾ ತ್ಪ್ರತ್ಯಂಗಂ ರೂಪ ಮಸ್ಯೋಪ ಜಾಯತೇ ॥೫೫॥**

**ತತೋಽಸ್ಯ ಮಾತು ರಾಹಾರಾ ತ್ಪೀತ ಲೀಢಪ್ರವೇಶನಾತ್ ।**
**ನಾಭಿ ದೇಶೇನ ವೈ ಪ್ರಾಣಾಃ ತೇ ಹ್ಯಾಧಾರಾ ಹಿ ದೇಹಿನಾಂ ॥೫೬॥**

---

ಕೂಡಲೆ ವಿಷ್ಣುವಿಗೆ ಸಂಬಂಧಪಟ್ಟ ವಾಯುವಿನ ಸ್ಪರ್ಶವು ಉಂಟಾಗಿ ಮಾಯೆಯು ಕವಿದುಕೊಳ್ಳುವವರೆಗೂ ಈಶ್ವರನನ್ನು ಧ್ಯಾನಿಸುತ್ತಿರುತ್ತಾನೆ. ಅನಂತರದಲ್ಲಿ ಗರ್ಭದೊಳಗಿನ ಆಕಾರ, ಅಳತೆಗನುಸರಿಸಿಯೇ ಆ ಮನುಷ್ಯ ದೇಹವು ಬೆಳೆಯುತ್ತಿರುವುದು. ಆಕಾಶದಿಂದ ಗಾಳಿಯೂ, ಗಾಳಿಯಿಂದ ನೀರೂ, ನೀರಿನಿಂದ ಪ್ರಾಣವಾಯುವೂ, ಪ್ರಾಣವಾಯುವಿನಿಂದ ವೀರ್ಯವೂ ವೃದ್ಧಿ ಹೊಂದುತ್ತದೆ.

೫೪–೫೬. ಮುವತ್ತುಮೂರು ರಕ್ತದ ಭಾಗಗಳೂ, ರೇತಸ್ಸಿನ ಭಾಗಗಳು ಹದಿನಾಲ್ಕೂ, ಮಿಶ್ರವಾಗಿ ಅರ್ಧ ಭಾಗವಾಗಿಯೂ, ಅರ್ಧ ಜಾತಿಯ ಫಲದಷ್ಟು ಗಾತ್ರವುಳ್ಳ ದೇಹವು ಗರ್ಭದಲ್ಲಿ ಬೆಳೆಯುತ್ತದೆ. ಅನಂತರದಲ್ಲಿ ಈ ಗರ್ಭದೇಹದಿಂದಲೂ ಐದು ವಾಯುಗಳಿಂದಲೂ ಕೂಡಿದವನಾಗಿಯೂ, ತಂದೆಯ ಶರೀರದ ಅವಯವಗಳಂತೆ ಇರುವ ಈ ಶಿಶುವಿನ ಪ್ರತಿಯೊಂದು ಅವಯವಗಳಲ್ಲಿಯೂ, ರೂಪವುಂಟಾಗುತ್ತದೆ. ಹಾಗೆಯೇ ತಾಯಿಯು ಸ್ವೀಕರಿಸುವ ನೆಕ್ಕಿದ ಮತ್ತು ಕುಡಿದ ಪದಾರ್ಥಗಳ ಸೇವನೆಯಿಂದ ಈ ಶಿಶುವಿಗೆ ಹೊಕ್ಕುಳಿನ ಮೂಲಕವಾಗಿ ರಸವು ತಲಪಿ ಪ್ರಾಣಗಳು ವೃದ್ಧಿಹೊಂದುತ್ತವೆ. ಪ್ರಾಣಿಗಳಿಗೆ ಇವೇ ಆಹಾರಗಳು.

ನವ ಮಾಸಾ ತ್ಪರಿ ಕ್ಲಿಷ್ಟಃ ಸಂವೇಷ್ಟಿತ ಶಿರೋಧರಃ ।
ವೇಷ್ಟಿತಃ ಸರ್ವಗಾತ್ರೈಶ್ಚ ಅಪರ್ಯಾಪ್ತ ಪ್ರವೇಶನಃ ॥೫೭॥
ನವಮಾಸೋಷಿತಶ್ಚಾಽಪಿ ಯೋನಿಚ್ಛಿದ್ರಾದವಾಙ್ಮುಖಃ ।
ತತಃ ಸ್ವಕರ್ಮಭಿಃ ಪಾಪೈ ರ್ನಿರಯಂ ಸಂ ಪ್ರಪದ್ಯತೇ ॥೫೮॥
ಅಸಿ ಪತ್ರ ವನಂ ಚೈವ ಶಾಲ್ಮಲಿ ಚ್ಛೇದನಂ ತಥಾ ।
ತಾಡನಂ ಭಕ್ಷಣಂ ಚೈವ ಪೂಯಶೋಣಿತ ಭಕ್ಷಣಂ ॥೫೯॥
ಯಥಾ ಹ್ಯಾಪಸ್ತು ಸಂಭಿನ್ನಾಃ ಸಂಶ್ಲೇಷ್ಮ ಮುಪಯಾಂತಿ ವೈ ।
ತಥಾ ಭಿನ್ನಾಶ್ಚ ಭಿನ್ನಾಶ್ಚ ಯಾತನಾ ಸ್ಥಾನಮಾಗತಾಃ ॥೬೦॥
ಏವಂ ಜೀವಾಸ್ತು ತೈಃ ಪಾಪೈ ಸ್ತಪ್ಯಮಾನಾಃ ಸ್ವಯಂ ಕೃತೈಃ ।
ಪ್ರಾಪ್ನುಯುಃ ಕರ್ಮಭಿಃ ಶೇಷೈ ರ್ದುಃಖಂ ವಾ ಯದಿ ವೇತರತ್ ॥

---

೫೭–೫೯. ಶಿಶುವು ಹೀಗೆ ಒಂಬತ್ತು ತಿಂಗಳು ಗರ್ಭದಲ್ಲಿ ಕ್ಲೇಶ ಪಡುತ್ತಾ ಮುದುರಿಕೊಂಡಿರುವ ತಲೆ, ಹೊಟ್ಟೆ ಮುಂತಾದ ಎಲ್ಲಾ ಅವಯವಗಳಿಂದಲೂ ಕೂಡಿ ಬಹಳ ಚಿಕ್ಕದಾಗಿ ಸಾಕಾಗದೆ ಇರುವ ಆ ಗರ್ಭದೇಶದಲ್ಲಿ ಕ್ರಮವಾಗಿ ಬೆಳೆಯುತ್ತಾ ನಾಸಮಾಡುತ್ತಿದ್ದು, ಕಡೆಗೆ ತಲೆಯು ಕೆಳಮುಖವಾಗಲು ಸ್ತ್ರೀಯ ಜನನೇಂದ್ರಿಯದ ರಂಧ್ರದಿಂದ ತನ್ನ ಪೂರ್ವ ಪಾಪಕರ್ಮ ಫಲದಿಂದ, ಜೀವನು ಹುಟ್ಟುತ್ತಾನೆ. ಹಾಗೆಯೇ ಜೀವನು ತನ್ನ ಪಾಪಗಳಿಗೆ ಅನುಸಾರವಾಗಿ ನರಕವನ್ನೂ ಎಂದರೆ ಅಸಿಪತ್ರವನ, ಶಾಲ್ಮಲಿ ಛೇದನ ಮುಂತಾದ ಯಾತನಾ ಸ್ಥಾನಗಳನ್ನೂ ಪಡೆಯುತ್ತಾನೆ. ಅಲ್ಲಿ ಏಟುಗಳನ್ನು ತಿಂದು ಅಮೇಧ್ಯ, ರಕ್ತಗಳಿಂದ ಆಹಾರ ಮಾಡುತ್ತಾ ನಾನಾ ಬಗೆಯ ಕ್ಲೇಶಗಳನ್ನೂ ಅನುಭವಿಸುತ್ತಾನೆ.

೬೦–೬೧. ಹೀಗೆ ನೀರು ಚೆನ್ನಾಗಿ ಕಾಯಿಸಲ್ಪಟ್ಟಾಗ ಗುಳ್ಳೆನೊರೆಗಳಾಗಿ ಹೇಗೆ ಕುದಿಯುವುದೋ ಹಾಗೆ ಜೀವರು ಅನೇಕ ವಿಧವಾದ ನೋವುಗಳನ್ನೂ, ಸಂಕಟಗಳನ್ನೂ, ಅನುಭವಿಸುತ್ತಾರೆ. ಅಲ್ಲದೆ ಜೀವರು ತಾವೇ ಮಾಡಿದ ಅನೇಕ ವಿಧವಾದ ಪಾಪಗಳಿಂದ ಸಂಕಟಗಳನ್ನು ಅನುಭವಿಸುವವರಾಗಿ, ಉಳಿದ ಕರ್ಮಗಳಿಗೆ ಅನುಸಾರವಾಗಿ ದುಃಖವನ್ನೋ ಸುಖ

ಏಕೇನೈವ ತು ಗಂತವ್ಯಂ ಸರ್ವಮುತ್ಸೃಜ್ಯ ವೈ ಜನಂ ।
ಏಕೇನೈವ ತು ಭೋಕ್ತವ್ಯಂ ತಸ್ಮಾತ್ ತ್ಸುಕೃತ ಮಾಚರೇತ್ ॥೬೨॥

ನ ಹ್ಯೇನಂ ಪ್ರಸ್ಥಿತಂ ಕಶ್ಚಿ ದ್ಗಚ್ಛಂತ ಮನುಗಚ್ಛತಿ ।
ಯದನೇನ ಕೃತಂ ಕರ್ಮ ತದೇನ ಮನುಗಚ್ಛತಿ ॥೬೩॥

ತೇ ನಿತ್ಯಂ ಯಮ ವಿಷಯೇಷು ಸಂಪ್ರವೃತ್ತಾಃ ।
ಕ್ರೋಶಂತಃ ಸತತ ಮನಿಷ್ಟ ಸಂಪ್ರಯೋಗೈಃ ॥
ಶುಷ್ಯಂತೇ ಪರಿಗತ ವೇದನಾ ಶರೀರಾ ।
ಬಹ್ವೀಭಿಃ ಸುಭೃಶ ಮನಂತಯಾತನಾಭಿಃ ॥೬೪॥

ಕರ್ಮಣಾ ಮನಸಾ ವಾಚಾ ಯದಭೀಕ್ಷ್ಣಂ ನಿಷೇವತೇ ।
ತದಭ್ಯಾಸೋ ಹರತ್ಯೇನಂ ತಸ್ಮಾತ್ಕಲ್ಯಾಣ ಮಾಚರೇತ್ ॥೬೫॥

---

ವನ್ನೇ ಪಡೆಯುತ್ತಿರುತ್ತಾರೆ. ಜೀವನು ಈ ಯಾತ್ರೆಯಲ್ಲಿ ತನಗೆ ಸಂಬಂಧಿಸಿದ ಜನಗಳನ್ನೂ ಬಿಟ್ಟು, ತನ್ನ ಪುಣ್ಯ ಪಾಪಗಳಿಗೆ ಅನುಸಾರವಾಗಿ ಲೋಕಗಳಿಗೆ ಹೋಗಬೇಕು. ತಾನೊಬ್ಬನೇ ಕರ್ಮ ಫಲವನ್ನು ಅನುಭವಿಸಬೇಕು. ಅದರಿಂದ ಜೀವನು ಯಾವಾಗಲೂ, ಒಳ್ಳೆಯ ಕರ್ಮಗಳನ್ನೇ ಮಾಡಬೇಕು.

೬೩–೬೫. ಜೀವನು ಪರಲೋಕಕ್ಕೆ ಪ್ರಯಾಣ ಮಾಡುವಾಗ ಇವನನ್ನು ಯಾರೂ ಹಿಂಬಾಲಿಸುವುದಿಲ್ಲ. ಇವನು ಮಾಡಿದ ಕರ್ಮ ಮಾತ್ರ ಇವನನ್ನು ಹಿಂಬಾಲಿಸುವುದು. ಜೀವರು ಯಮನ ಮನೆಗೆ ಪ್ರವೇಶ ಮಾಡಿ, ಯಾವಾಗಲೂ ಕಷ್ಟಗಳನ್ನು ಅನುಭವಿಸುತ್ತಾ, ಕಿರಿಚುತ್ತಾ ಅನೇಕ ಯಾತನೆಯ ಶರೀರಗಳನ್ನು ಹೊಂದಿ ಹೇಳಿ ಮುಗಿಸಲು ಅಸಾಧ್ಯವಾದ ಯಾತನೆಗಳನ್ನು ಅನುಭವಿಸುತ್ತಾ, ಒಣಗುತ್ತಾರೆ. ಜೀವನು ಮೂರು ಬಗೆಯಲ್ಲಿ ಎಂದರೆ ಕೆಲಸದಿಂದ, ಮನಸ್ಸಿನಿಂದ, ಮಾತಿನಿಂದ, ಏನನ್ನು ಯಾವಾಗಲೂ ನಡೆಸುತ್ತಾನೋ ಅದರ ಫಲವೇ ಇವನನ್ನು ಕಾಡಿಸುತ್ತದೆ. ಆದ್ದರಿಂದ ಯಾವಾಗಲೂ ಮಂಗಳಕರವಾದ ಕೆಲಸಗಳನ್ನೇ ಮಾಡಬೇಕು.

ಅನಾದಿ ರ್ಮಾಸ್ತ್ರಬಂಥಃ ಸ್ಯಾತ್ ಪೂರ್ವ ಕರ್ಮಣಿ ದೇಹಿನಃ ।
ಸಂಸಾರಂ ತಾಮಸಂ ಘೋರಂ ಷಡ್ವಿಧಂ ಪ್ರತಿಪದ್ಯತೇ ॥೬೬॥
ಮಾನುಷ್ಯಾತ್ಪಶುಭಾವಶ್ಚ ಪಶುಭಾವಾನ್ಮೃಗೋ ಭವೇತ್ ।
ಮೃಗತ್ವಾತ್ಪಕ್ಷಿ ಭಾವಶ್ಚ ತಸ್ಮಾಚ್ಚೈವ ಸರೀಸೃಪಃ ॥೬೭॥
ಸರೀಸೃಪತ್ವಾ ದ್ಗಚ್ಛೇದ್ವೈ ಸ್ಥಾವರತ್ವಂ ನ ಸಂಶಯಃ ।
ಸ್ಥಾವರತ್ವೇ ಪುನಃ ಪ್ರಾಪ್ತೇ ಯಾವ ದುನ್ಮಿಲತೇ ಜನಃ ॥೬೮॥
ಕುಲಾಲ ಚಕ್ರವ ದ್ಭ್ರಾಂತಃ ತತ್ರೈವ ಪರಿವರ್ತತೇ ।
ಇತ್ಯೇವಂ ಹಿ ಮನುಷ್ಯಾದಿಃ ಸಂಸಾರಃ ಸ್ಥಾವರಾಂತಕಃ ॥೬೯॥
ವಿಜ್ಞೇಯ ಸ್ತಾಮಸೋ ನಾಮ ತತ್ರೈವ ಪರಿವರ್ತತೇ ।
ಸಾತ್ವಿಕಶ್ಚಾಽಪಿ ಸಂಸಾರೋ ಬ್ರಹ್ಮಾದಿಃ ಪರಿಕೀರ್ತಿತಃ ॥೭೦॥

---

೬೬–೬೮. ಜೀವನಿಗೆ ಪೂರ್ವ ಜನ್ಮದ ಕರ್ಮದ ಫಲವಾಗಿ ಯಾವಾಗಲೂ ಸಂಸಾರದಲ್ಲಿ ನಿರ್ಬಂಧ ದುಃಖವೆಂಬ ಕಷ್ಟವುಂಟಾಗಿದೆ. ತಮೋಗುಣದಿಂದ ಕೂಡಿದ ಭಯಂಕರವಾದ ಸಂಸಾರವು ಆರು ವಿಧವಾಗಿ ಉಂಟಾಗುತ್ತದೆ. ಮನುಷ್ಯನ ಜನ್ಮದಿಂದ ಪಶುಜನ್ಮಕ್ಕೂ ಪಶುಜನ್ಮದಿಂದ ಮೃಗಜನ್ಮಕ್ಕೂ, ಮೃಗಜನ್ಮದಿಂದ ಪಕ್ಷಿಜನ್ಮಕ್ಕೂ, ಪಕ್ಷಿಜನ್ಮದಿಂದ ಹಾವಿನ ಜನ್ಮಕ್ಕೂ, ಹಾವಿನಜನ್ಮದಿಂದ ಜಡವಾದ ಪದಾರ್ಥಗಳ ಜನ್ಮಕ್ಕೂ, ಜೀವನು ಪ್ರವೇಶಿಸುವನು. ಹೀಗೆ ಮನುಷ್ಯನು ನಾನಾವಿಧವಾದ ಜನ್ಮವನ್ನು ಹೊಂದುತ್ತಾನೆ.

೬೯–೭೧. ಜೀವನು ಕುಂಬಾರನ ಚಕ್ರದಂತೆ ಸರ್ವದಾ ಸುತ್ತುತ್ತಿರುತ್ತಾನೆ. ಹೀಗೆ ಮನುಷ್ಯ ಜನ್ಮವೇ ಮೊದಲಾಗಿ ಜಡಜನ್ಮವೇ ಕೊನೆಯಾದ ಆರು ಬಗೆಯ ಜನ್ಮವೆಂದು ತಿಳಿಯಬೇಕು. ಇದು ತಮೋಗುಣದಿಂದ ಪೂರ್ಣವಾದದ್ದೂ, ಮತ್ತು ಜೀವನು ಇದರಲ್ಲಿ ಸುತ್ತುವವನೂ, ಆಗಿರ ವನೆಂದೂ ತಿಳಿಯಬೇಕು. ಬ್ರಹ್ಮನೇ ಮೊದಲಾದ ಉತ್ತಮ ಜನ್ಮಗಳು ಸತ್ತ್ವಗುಣದಿಂದ ಕೂಡಿರುವುವೆಂದೂ, ಇದು ಬ್ರಹ್ಮನಿಂದ ಪ್ರಾರಂಭವಾಗಿ ಪಿಶಾಚಿಜನ್ಮವೇ ಕೊನೆಯಾದ ಸಂಸಾರಸ್ವರೂಪವೆಂದೂ,

**ಪಿಶಾಚಾಂತಃ ಸ ವಿಜ್ಞೇಯಃ ಸ್ವರ್ಗಸ್ಥಾನೇಷು ದೇಹಿನಾಂ ।**
**ಬ್ರಾಹ್ಮೇ ತು ಕೇವಲಂ ಸತ್ತ್ವಂ ಸ್ಥಾವರೇ ಕೇವಲಂ ತಮಃ ॥೭೦॥**
**ಚತುರ್ದಶಾನಾಂ ಸ್ಥಾನಾನಾಂ ಮಧ್ಯೇ ವಿಷ್ಟಂಭಕಂ ರಜಃ ।**
**ಮರ್ಮಸು ಚ್ಛಿದ್ಯ ಮಾನೇಷು ವೇದನಾಽಽರ್ತಸ್ಯ ದೇಹಿನಃ ॥೭೨॥**
**ತತಸ್ತ್ವತ್ಪರಮಂ ಬ್ರಹ್ಮ ಕಥಂ ವಿಪ್ರಃ ಸ್ಮರಿಷ್ಯತಿ ।**
**ಸಂಸಾರಃ ಪೂರ್ವಧರ್ಮಸ್ಯ ಭಾವನಾಭಿಃ ಪ್ರಣೋದಿತಃ ॥೭೩॥**
**ಮಾನುಷ್ಯಂ ಭಜತೇ ನಿತ್ಯಂ ತಸ್ಮಾದ್ಧ್ಯಾನಂ ಸಮಾಚರೇತ್ ।**
**ಚತುರ್ದಶ ವಿಧಂ ಹ್ಯೇತದ್ಬುದ್ಧ್ವಾ ಸಂಸಾರ ಮಂಡಲಂ ॥೭೪॥**

---

ಅರಿಯಬೇಕು. ಜೀವರಿಗೆ ಸ್ವರ್ಗವೇ ಮೊದಲಾದ ಸ್ಥಾನಗಳಲ್ಲಿಯೂ ಬ್ರಹ್ಮಲೋಕದಲ್ಲಿಯೂ, ಕೇವಲ ಸತ್ವಗುಣವೇ ಮಿಗಿಲಾಗಿ ಮೇಲಾಗಿರುತ್ತದೆಯೆಂದೂ, ಆದರೆ ಜಡಜನ್ಮದಲ್ಲಿ ಕೇವಲ ತಮೋಗುಣವೇ ಪ್ರಧಾನವಾಗಿರುತ್ತದೆಂದೂ, ಗೊತ್ತಾಗುತ್ತದೆ.

೭೨–೭೪. ಕರುಳು ಕುಯ್ಯುತ್ತಿರುವಂತಹ ಯಾತನೆಗಳಿಂದ ಸಂಕಟಪಡುತ್ತಿರುವ ಜೀವನಿಗೆ ಹದಿನಾಲ್ಕು ವಿಧವಾದ ಭೂರಾದಿ ಮತ್ತು ಅತಲಾದಿ ಲೋಕಗಳಲ್ಲಿಯೂ, ಮಧ್ಯದಲ್ಲಿ ರಜೋಗುಣವು ವಿಷ್ಟಂಭಕ, ವಾಗಿರಲು ತನ್ಮೂಲಕ ದುಃಖಾನುಭವವೂ ಆಗುತ್ತದೆ ಆದ್ದರಿಂದ ಬ್ರಾಹ್ಮಣನಾದರೂ, ಶ್ರೇಷ್ಠನಾದ ಪರಬ್ರಹ್ಮನನ್ನೇ ಮರೆಯುವನು. ಏಕೆಂದರೆ ಇವನು ಪೂರ್ವಜನ್ಮದ ಕರ್ಮಾನುಸಾರವಾಗಿ ಪ್ರೇರಿಸಲ್ಪಟ್ಟ ಭಾವನೆಗಳನ್ನು ಹೊಂದಿ ಅದರಿಂದಲೇ ಮುಂದುವರಿಸಲ್ಪಟ್ಟ ಈ ಜನನ, ಮರಣ, ಕರ್ತೃತ್ವ, ಭೋಕ್ತೃತ್ವ, ಗಳ ಪ್ರವಾಹದಲ್ಲಿ ಸಿಕ್ಕಿಕೊಂಡಿರುವಿಕೆ ಎಂಬ ಸಂಸಾರವನ್ನು ಅನುಭವಿಸುತ್ತಿರುತ್ತಾನೆ. ಇದರಂತೆ ಇವನು ಮನುಷ್ಯ ಜನ್ಮವನ್ನೂ ತಾಳಿರುತ್ತಾನೆ. ಆದ್ದರಿಂದ ಯಾವಾಗಲೂ ಶಿವಧ್ಯಾನವನ್ನು ಮಾಡುತ್ತಿರಬೇಕು. ಹೀಗೆ ಜೀವನ ಈ ಸಂಸಾರವೆಂಬ ಚಕ್ರವು ಹದಿನಾಲ್ಕು ಲೋಕಗಳಲ್ಲಿಯೂ ವ್ಯಾಪಿಸಿರುತ್ತದೆ ಎಂದು ತಿಳಿಯಬೇಕು.

ನಿತ್ಯಂ ಸಮಾರಭೇದ್ಧರ್ಮಂ ಸಂಸಾರ ಭಯಪೀಡಿತಃ ।
ತತಸ್ತ್ತರತಿ ಸಂಸಾರಂ ಕ್ರಮೇಣ ಪರಿವರ್ತಿತಃ ॥ ೭೫ ॥

ತಸ್ಮಾಚ್ಚ ಸತತಂ ಯುಕ್ತೋ ಧ್ಯಾನ ತತ್ಪರಯುಂಜಕಃ ।
ತಥಾ ಸಮಾರಭೇದ್ಯೋಗಂ ಯಥಾಽಽತ್ಮಾನಂ ಸ ಪಶ್ಯತಿ ॥ ೭೬ ॥

ಏಷ ಆಪಃ ಪರಂ ಜ್ಯೋತಿ ರೇಷ ಸೇತು ರನುತ್ತಮಃ ।
ವಿವೃತ್ತ್ಯೋ ಹ್ಯೇಷ ಸಂ ಭೇಧಾ ದ್ಭೂತಾನಾಂ ಚೈವ ಶಾಶ್ವತಃ ॥೭೭॥

ತದೇನಂ ಸೇತು ಮಾತ್ಮಾನ ಮಗ್ನಿಂ ವೈ ವಿಶ್ವತೋಮುಖಂ ।
ಹೃದಿಸ್ಥಂ ಸರ್ವಭೂತಾನಾ ಮುಪಾಸೀತ ಮಹೇಶ್ವರಂ ॥೭೮॥

---

೭೫–೭೭. ಜೀವನು ಈ ಸಂಸಾರ ನಿರ್ಬಂಧವೆಂಬ ದುಃಖದ ಭಯದಿಂದ ಕಾಡಿಸಲ್ಪಡುತ್ತಿರುವುದನ್ನು ಆಲೋಚಿಸಿ ಯಾವಾಗಲೂ ಧರ್ಮ ಮಾರ್ಗವನ್ನು ಅವಲಂಬಿಸಬೇಕು. ಹೀಗೆ ಮಾಡಿದರೆ ಕ್ರಮವಾಗಿ ಆ ಧರ್ಮಾಚರಣೆಯಿಂದ ಚಿತ್ತವು ಶುದ್ಧವಾಗಿ, ನಿರ್ಮಲವಾದ ಮನಸ್ಸಿನಲ್ಲಿ ಜ್ಞಾನೋದಯವಾಗಿ, ಈ ಸಂಸಾರದಿಂದ ಉದ್ಧಾರವಾಗುವ ದಾರಿಯು ಸಿಕ್ಕುವುದು. ಆದ್ದರಿಂದ ಮನುಷ್ಯನು ಯಾವಾಗಲೂ ತನ್ನ ಆತ್ಮ ಸ್ವರೂಪವನ್ನು ತಿಳಿಯುವುದಕ್ಕೆ ಸಹಕಾರಿಯಾದ ಯೋಗಾಭ್ಯಾಸವನು ಮಾಡುತ್ತಿರಬೇಕು. ಸರ್ವಕ್ಕೂ ಅಧಿಷ್ಠಾನವಾಗಿರುವ, ವಿವರ್ತ ಕಾರಣ ವಾಗಿರುವ, ಪರಮಾತ್ಮನೇ ನೀರಿನ ಸ್ವರೂಪನೂ, ಶ್ರೇಷ್ಠವಾದ ತೇಜಸ್ಸಿನ ಸ್ವರೂಪನೂ, ಆಗಿರುತ್ತಾ, ಬಗೆ ಬಗೆಯಾಗಿರುವ ಈ ಸಂಸಾರ ಸಾಗರವನ್ನು ದಾಟಿ ಮೋಕ್ಷಮಾರ್ಗಕ್ಕೆ ಸೇರಲು ಬೇಕಾದ ಸೇತುವೆಯನ್ನು ಕಟ್ಟಿದವನೂ, ಸಕಲ ಪ್ರಾಣಿಗಳ ಸ್ವರೂಪವನ್ನೂ ತಾಳಿರುವವನೂ, ನಿತ್ಯನೂ ಆಗಿದ್ದಾನೆ.

೭೮–೮೦. ಆದುದರಿಂದ ಹೀಗೆ ಮೋಕ್ಷಕ್ಕೆ ಸೇತುವೆಯೂ, ಅಗ್ನಿ ಸ್ವರೂಪನೂ, ಸರ್ವವ್ಯಾಪಿಯೂ, ಎಲ್ಲರ ಹೃದಯದಲ್ಲಿಯೂ ವಾಸಿಸುವವನೂ, ಎಲ್ಲಾ ವಸ್ತುಗಳಿಗೂ ನಿಯಾಮಕನೂ ಆದ ಮಹೇಶ್ವರನನ್ನು ಧ್ಯಾನಿಸುತ್ತಾ ಆರಾಧನೆ ಮಾಡಬೇಕು. ಹಾಗೆಯೇ ಎಲ್ಲ ಪ್ರಪಂಚದ ಒಳಗಡೇ ಇರುವ ಉಮಾದೇವಿಯಿಂದ ಕೂಡಿ ಅರ್ಧನಾರೀಶ್ವರ ರೂಪ

ತಥಾಽಂತಃ ಸಂಸ್ಥಿತಂ ದೇವಂ ಸ್ವಶಕ್ತ್ಯಾ ಪರಿಮಂಡಿತಂ ।
ಅಷ್ಟಧಾ ಚಾಽಷ್ಟಧಾ ಚೈವ ತಥಾ ಚಾಽಷ್ಟವಿಧೇನ ಚ ॥೭೯॥
ಸೃಷ್ಟ್ಯರ್ಥಂ ಸಂಸ್ಥಿತಂ ವಹ್ನಿಂ ಸಂಕ್ಷಿಪ್ಯ ಚ ಹೃದಿಸ್ಥಿತಂ ।
ಧ್ಯಾತ್ವಾ ಯಥಾ ವಾ ದೇವೇಶಂ ರುದ್ರಂ ಭುವನ ನಾಯಕಂ ॥೮೦॥
ಹುತ್ವಾ ಪಂಚಾಽಹುತೀಃ ಸಮ್ಯಕ್ ತಚ್ಚಿಂತಾ ಗತಮಾನಸಃ ।
ವೈಶ್ವಾನರಂ ಹೃದಿಸ್ಥಂ ತು ಯಥಾವದನು ಪೂರ್ವಶಃ ॥೮೧॥
ಆಪಃ ಪೂತಾಃ ಸಕೃ ತ್ಪ್ರಾಶ್ಯತೂಷ್ಣೀಂ ಹುತ್ವಾ ಹ್ಯುಪಾವಿಶತ್ ।
ಪ್ರಾಣಾಯೇತಿ ತತಸ್ತಸ್ಯ ಪ್ರಥಮಾ ಹ್ಯಾಹುತಿಃ ಸ್ಮೃತಾ ॥೮೨॥
ಅಪಾನಾಯ ದ್ವಿತೀಯಾ ಚ ವ್ಯಾನಾಯೇತಿ ತಥಾ ಪರಾ ।
ಉದಾನಾಯ ಚತುರ್ಥೀ ಸ್ಯಾತ್ ಸಮಾನಾಯೇತಿ ಪಂಚಮೀ ॥

---

ನಾದ, ತನ್ನ ಸ್ಪಂದ ರೂಪವಾದ ಮಾಯಾ ಶಕ್ತಿಯಿಂದಲೇ ಜಗತ್ತನ್ನು ಧರಿಸಿ ಬೆಳಗುತ್ತಿರುವ, ಜಗತ್ತಿನ ಸೃಷ್ಟಿ ಮುಂತಾದ ಕಾರ್ಯ ನಿರ್ವಹಣೆ ಗಾಗಿ, ಇಪ್ಪತ್ತುನಾಲ್ಕು ವಿಧವಾಗಿ ಎಂದರೆ ಪೃಥಿವ್ಯಾದಿಯಾದ ಅಷ್ಟ ಮೂರ್ತಿ ರೂಪದಿಂದಲೂ, ಅದಕ್ಕೆ ಅಭಿಮಾನಿಯಾದಭವಾದಿಯಾದ ಎಂಟು ರೂಪದಿಂದಲೂ, ಹಾಗೆಯೇ ವಾಮದೇವಾದಿಯಾದ ಎಂಟು ರೂಪ ದಿಂದಲೂ, ಈ ಸಂಸಾರದ ಬೆಂಕಿಯಲ್ಲಿ ಪ್ರವೇಶಿಸಿರುವ, ಸಣ್ಣ ಸ್ವರೂಪ ದಲ್ಲಿ ಮನಸ್ಸಿನಲ್ಲಿರುವ, ರುದ್ರಸ್ವರೂಪಿಯೂ, ಪ್ರಪಂಚಕ್ಕೆ ಒಡೆಯನೂ ಆದ ಶಿವನನ್ನು ಧ್ಯಾನಮಾಡಬೇಕು.

೮೧–೮೩. ಬ್ರಾಹ್ಮಣನು ಐದು ವಿಧವಾದ ಹೋಮಗಳನ್ನು ಚೆನ್ನಾಗಿ ಮಾಡಿ, ಶಿವಧ್ಯಾನದಲ್ಲಿ ಆಸಕ್ತನಾಗಿ, ಕ್ರಮವಾಗಿ ತನ್ನ ಮತ್ತು ಎಲ್ಲರ ಉದರದಲ್ಲಿರುವ ವೈಶ್ವಾನರ ಎಂಬ ಅಗ್ನಿಯನ್ನು ಧ್ಯಾನ ದಿಂದ ಸ್ಪರ್ಶಮಾಡಿ, ವಸ್ತ್ರಪರಿಶುದ್ಧವಾದ ನೀರನ್ನು ಮಂತ್ರೋಕ್ತ ವಾದ ರೀತಿಯಲ್ಲಿ ಪಾನಮಾಡಿ, ಸುಮ್ಮನೇ ಹೋಮಮಾಡಬೇಕು. ಹೇಗೆಂದರೆ ಮೊದಲನೆಯ ಹೋಮವು ಪ್ರಾಣವಾಯುವಿಗೂ, ಎರಡನೆ ಯದು ಅಪಾನವಾಯುವಿಗೂ, ಮೂರನೆಯದು ವ್ಯಾನವಾಯುವಿಗೂ, ನಾಲ್ಕನೆಯದು ಉದಾನವಾಯುವಿಗೂ, ಐದನೆಯದು ಸಮಾನವಾಯು ವಿಗೂ, ಆಗಲೆಂದು ಉದ್ದೇಶಿಸಿ ಕ್ರಮವಾಗಿ ಸಮರ್ಪಿಸಬೇಕು.

**ಸ್ವಾಹಾಕಾರೈಃ ಪೃಥಕ್ ಹುತ್ವಾ ಶೇಷಂ ಭುಂಜೀತ ಕಾಮತಃ ।**
**ಆಪಃ ಪುನಃ ಸಕೃತ್ಪ್ರಾಶ್ಯ ಆಚಮ್ಯ ಹೃದಯಂ ಸ್ಪೃಶೇತ್ ॥೮೪॥**
**ಪ್ರಾಣಾನಾಂ ಗ್ರಂಥಿರಸ್ಯಾತ್ಮಾ ರುದ್ರೋ ಹ್ಯಾತ್ಮಾ ವಿಶಾಂತಕಃ ।**
**ರುದ್ರೋ ವೈ ಹ್ಯಾತ್ಮನಃ ಪ್ರಾಣ ಏವ ಮಾಪ್ಯಾಯಯೇ ತ್ಸ್ವಯಂ॥**
**ಪ್ರಾಣೇ ನಿವಿಷ್ಟೋ ವೈ ರುದ್ರಃ ತಸ್ಮಾತ್ಪ್ರಾಣಮಯಃ ಸ್ವಯಂ ।**
**ಪ್ರಾಣಾಯ ಚೈವ ರುದ್ರಾಯ ಜುಹೋತ್ಯಮೃತಮುತ್ತಮಂ ॥೮೬॥**
**ಶಿವಾऽऽವಿಶೇಹ ಮಾಮೀಶ ಸ್ವಾಹಾ ಬ್ರಹ್ಮಾತ್ಮನೇ ಸ್ವಯಂ ।**
**ಏವಂ ಪಂಚಾऽऽಹುತೀಶ್ಚೈವ ಶ್ರಾದ್ಧೇ ಕುರ್ವೀತ ಶಾಸನಾತ್ ॥೮೭॥**

---

೮೪-೮೬. ಹೀಗೆ ಬ್ರಾಹ್ಮಣನು ಮನಃಪೂರ್ವಕವಾಗಿ ಸ್ವಾಹಾ ಎಂಬ ಮಂತ್ರದಿಂದ ಪ್ರತ್ಯೇಕವಾಗಿ ಹೋಮಮಾಡಿ, ಉಳಿದ ಆಹಾರದ ಭಾಗವನ್ನು ತನ್ನ ಇಚ್ಛಾನುಸಾರವಾಗಿ ಆದರದೊಡನೆ ಭೋಜನ ಮಾಡಬೇಕು. ನೀರನ್ನು ಪುನಃ ಮಂತ್ರ ಪೂರ್ವಕವಾಗಿ ಸೇವಿಸಿ, ಆಚಮನವನ್ನು ಮಾಡಿ, ಎದೆಯನ್ನು ಮುಟ್ಟಬೇಕು. ಇವನ ಆತ್ಮನು ತತ್ಸ್ವರೂಪದಲ್ಲಿ ಪ್ರಾಣ ಮುಂತಾದ ಐದು ವಾಯುಗಳನ್ನು ಬಿಡದಂತೆ ಸೇರಿಸಿರುವ ಗಂಟೂ, ಶಿವಸ್ವರೂಪನೂ, ದುಃಖನಾಶಕನೂ, ಆಗಿದ್ದಾನೆ. ಆತ್ಮನಿಗೆ ಪ್ರಾಣದಾಯಕನು ಶಿವನೇ ಆಗಿದ್ದಾನೆಂದು, ಪ್ರಾಣಾನಾಂಗ್ರಂಥಿರಸಿ, ಎಂದು ಮೊದಲಾಗಿರುವ ಯಾಜುಷ ಮಂತ್ರವನ್ನು ಹೇಳುತ್ತಾ ತೃಪ್ತಿ ಹೊಂದಬೇಕು. ಶಿವನು ಪ್ರಾಣರೂಪದಲ್ಲೂ ಇದ್ದಾನೆ. ಆದ್ದರಿಂದ ಅವನು ಪ್ರಾಣದಿಂದ ಪೂರ್ವನಾಗಿದ್ದಾನೆ. ಪ್ರಾಣಸ್ವರೂಪಿಯಾದ ಶಿವನಿಗೆ ಶ್ರೇಷ್ಠವಾದ ಈ ರೀತಿಯಲ್ಲಿ ಹೋಮ ಮಾಡಬೇಕು.

೮೭-೮೯. ಓ ಸ್ವಾಮಿಯಾದ ಶಿವನೇ, ನನ್ನ ಹೃದಯವನ್ನು ಪ್ರವೇಶಿಸು. ಬ್ರಹ್ಮಸ್ವರೂಪಿಯಾದ ನಿನಗೆ ಸ್ವಾಹಾಕಾರದಿಂದ ಹೋಮವನ್ನು ಅರ್ಪಿಸುತ್ತಿರುವೆನು, ಎಂದು ಧ್ಯಾನಿಸಬೇಕು. ಇದಕ್ಕೆ ಪ್ರಾಣಾಗ್ನಿಹೋತ್ರವೆಂದು ಹೆಸರಿದೆ. ಈ ರೀತಿಯಾಗಿ ಐದು ವಿಧವಾದ

ಪುರುಷೋಽಸಿ ಪುರೇ ಶೇಷೇ ತ್ವಮಂಗುಷ್ಠ ಪ್ರಮಾಣತಃ ।
ಆಶ್ರಿತಶ್ಚೈವ ಚಾಂಗುಷ್ಠ ಮೀಶಃ ಪರಮಕಾರಣಂ ॥೮೮॥
ಸರ್ವಸ್ಯ ಜಗತಶ್ಚೈವ ಪ್ರಭುಃ ಪ್ರೀಣಾತು ಶಾಶ್ವತಃ ।
ತ್ವಂ ದೇವಾನಾಮಪಿ ಜ್ಯೇಷ್ಠೋ ರುದ್ರಸ್ತ್ವಂ ಚ ಪುರೋ ವೃಷಾ ॥
ಮೃದು ಸ್ತ್ವಮನ್ನ ಮಸ್ಮಭ್ಯ ಮೇತದಸ್ತು ಹುತಂ ತವ ।
ಇತ್ಯೇವಂ ಕಥಿತಂ ಸರ್ವಂ ಗುಣಪ್ರಾಪ್ತಿ ವಿಶೇಷತಃ ॥೯೦॥
ಯೋಗಾಚಾರಃ ಸ್ವಯಂ ತೇನ ಬ್ರಹ್ಮಣಾ ಕಥಿತಃ ಪುರಾ ।
ಏವಂ ಪಾಶುಪತಂ ಜ್ಞಾನಂ ಜ್ಞಾತವ್ಯಂ ಚ ಪ್ರಯತ್ನತಃ ॥೯೧॥

---

ಹೋಮಗಳನ್ನು ಶ್ರಾದ್ಧಕಾಲಗಳಲ್ಲಿಯೂ ಶಾಸ್ತ್ರೋಕ್ತ ಕ್ರಮದಲ್ಲಿ ಮಾಡಬೇಕು. ಓ ಶಿವನೇ, ನೀನು ಪ್ರತಿ ಶರೀರದಲ್ಲಿಯೂ, ಹೆಬ್ಬೆರಳಿನ ಗಾತ್ರದ ಹೃದಯಾಕಾಶದಲ್ಲಿ ತೋರುತ್ತಾ ಇರುವವನಾಗಿ ಪುರುಷನೆನಿಸಿಕೊಳ್ಳುತ್ತೀಯೆ. ಹೆಬ್ಬೆರಳಿನ ಅಳತೆಯುಳ್ಳ, ಆ ಹೃದಯದ ಪ್ರವೇಶವನ್ನು ಜಗತ್ತಿಗೆ ಮೂಲಕಾರಣನಾದ ನೀನು ಜನರಿಗೆ ಗೋಚರನಾಗಲು ಆಶ್ರಯಿಸಿದ್ದೀಯೆ. ಎಲ್ಲಾ ಜಗತ್ತಿಗೂ ಸ್ವಾಮಿಯಾದ, ನಿತ್ಯನಾದ, ನೀನು ನನ್ನ ವಿಷಯದಲ್ಲಿ ದಯವಿಟ್ಟು ಮೆಚ್ಚಬೇಕು. ನೀನು ದೇವತೆಗಳಿಗೆಲ್ಲರಿಗೂ ಶ್ರೇಷ್ಠನೂ, ರುದ್ರನೂ, ಮೂರು ಬಗೆಯ ರೋಗ ದುಃಖಗಳನ್ನು ನಾಶಮಾಡುವವನೂ, ಎಲ್ಲರಿಗೂ ಮೊದಲಿನವನೂ, ಧರ್ಮಸ್ವರೂಪನೂ ಆಗಿದ್ದೀಯೆ.

೯೦. ಓ ಸ್ವಾಮಿಯಾದ ಶಿವನೇ, ನೀನು ನನಗೆ ಅನ್ನಸ್ವರೂಪನೂ ಆಗಿದ್ದೀಯೆ. ಈ ಹೋಮವನ್ನು ದಯವಿಟ್ಟು ಸ್ವೀಕರಿಸು. ಹೀಗೆ ಶಿವನ ಯೋಗಸಂಬಂಧವಾದ ಶಿವನ ಗುಣಮಹಿಮೆ, ಫಲಪ್ರಾಪ್ತಿ, ಮತ್ತು ಅದರ ಆಚರಣೆಯ ವಿವರಗಳ ವಿಧಾನವೆಲ್ಲವೂ ಹೇಳಲ್ಪಟ್ಟಿದೆ.

೯೧–೯೩. ಬ್ರಹ್ಮನಿಂದಲೇ ಈ ಯೋಗಾಭ್ಯಾಸ ಕ್ರಮವು ಹಿಂದೆ ಹೇಳಲ್ಪಟ್ಟಿತು. ಹೀಗೆ ಪ್ರಯತ್ನ ಪೂರ್ವಕವಾಗಿ ಪಶುಪತಿಯಾದ ಶಿವನಿಗೆ ಸಂಬಂಧಿಸಿದ ಈ ಧರ್ಮದ ಜ್ಞಾನವನ್ನು ಯೋಗಿಯು ಪಡೆಯಬೇಕು.

ಭಸ್ಮ ಸ್ನಾಯೀ ಭವೇನ್ನಿತ್ಯಂ ಭಸ್ಮಲಿಪ್ತಃ ಸದಾ ಭವೇತ್ ।
ಯಃ ಪಠೇತ್ ಶೃಣುಯಾ ದ್ವಾಽಪಿ ಶ್ರಾವಯೇದ್ವಾ ದ್ವಿಜೋತ್ತಮಾನ್
ದೈವೇ ಕರ್ಮಣಿ ಪಿತ್ರ್ಯೇ ವಾ ಸ ಯಾತಿ ಪರಮಾಂ ಗತಿಂ ॥೯೩॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸದ್ಗತಿದಾಯಕ ಪ್ರಾಣಾಗ್ನಿ
ಹೋತ್ರಹೋಮೇತ್ಯಾದಿ ವಿಷಯ ವಿವರಣಂನಾಮ
ಅಷ್ಟಾಶೀತಿ ತಮೋಽಧ್ಯಾಯಃ

---

ಅವನು ಪ್ರತಿ ದಿನದಲ್ಲಿಯೂ ಬೂದಿಯಿಂದಲೇ ಸ್ನಾನಮಾಡುವವನಾಗಿಯೂ, ಬೂದಿಯನ್ನೇ ಶರೀರಕ್ಕೆಲ್ಲಕ್ಕೂ ಹಚ್ಚಿಕೊಂಡಿರುವವನಾಗಿಯೂ, ಮಂತ್ರಜಪಧ್ಯಾನ ಮಾಡುತ್ತಾ ಇರಬೇಕು. ಈ ವಿಚಾರವನ್ನು ಯಾವನು ದೇವಕಾರ್ಯ ಅಥವಾ ಪಿತೃಕಾರ್ಯಗಳ ಸಮಯದಲ್ಲಿ ಕೇಳುವನೋ ಅಥವಾ ಬ್ರಾಹ್ಮಣ ಶ್ರೇಷ್ಠರಿಗೆ ಹೇಳುವನೋ ಅವನು ಅತ್ಯುತ್ಕೃಷ್ಟವಾದ ಸದ್ಗತಿಯನ್ನು ಹೊಂದುವನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಅಣಿಮಾ ಮುಂತಾದ
ಎಂಟು ವಿಧ ಸಿದ್ಧಿ ಮತ್ತು ಸತ್ವ ರಜ ಸ್ತಮಸ್ಸೆಂಬ ಮೂರುಗುಣಗಳಿಂದ
ಉಂಟಾಗಿರುವ ಈ ಸಂಸಾರದಲ್ಲೂ ಸದ್ಗತಿದಾಯಕವಾದ ಪ್ರಾಣಾಗ್ನಿ
ಹೋತ್ರ ಹೋಮವೇ ಮೊದಲಾದ ವಿಷಯಗಳನ್ನು ವಿವರಿಸಿರುವ
ಎಂಬತ್ತೆಂಟನೆಯ ಅಧ್ಯಾಯವು ಮುಗಿದುದು.

अथ श्री ಲಿಂಗಮಹಾಪುರಾಣೇ ಪೂರ್ವಭಾಗೇ
ಏಕೋನ ನವತಿತಮೋಽಧ್ಯಾಯಃ

॥ ಸೂತ ಉವಾಚ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ಶೌಚಾಽಚಾರಸ್ಯ ಲಕ್ಷಣಂ ।
ಯದನುಷ್ಠಾಯ ಶುದ್ಧಾತ್ಮಾ ಪರೇತ್ಯ ಗತಿ ಮಾಪ್ನುಯಾತ್ ॥ ೧ ॥
ಬ್ರಹ್ಮಣಾ ಕಥಿತಂ ಪೂರ್ವಂ ಸರ್ವಭೂತ ಹಿತಾಯ ವೈ ।
ಸಂಕ್ಷೇಪಾ ತ್ಸರ್ವವೇದಾರ್ಥಂ ಸಂ ಚಯಂ ಬ್ರಹ್ಮವಾದಿನಾಂ ॥೨॥
ಉದಯಾರ್ಥಂ ತು ಶೌಚಾನಾಂ ಮುನೀನಾ ಮುತ್ತಮಂ ಪದಂ ।
ಯಸ್ತತ್ರಾಽಥಾಽಪ್ರಮತ್ತಃ ಸ್ಯಾತ್ ಸ ಮುನಿರ್ನಾಽವಸೀದತಿ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಎಂಬತ್ತೊಂಬತ್ತನೆಯ ಅಧ್ಯಾಯವು

೧-೩. ಸೂತನು ಹೇಳಿದನು.:— ಇನ್ನು ಮುಂದೆ ಶುದ್ಧವಾದ ಆಚಾರಸ್ವರೂಪವನ್ನು ಹೇಳುವೆನು. ಬ್ರಾಹ್ಮಣನು ಇದನ್ನು ನಡೆಸಿ, ಶುದ್ಧವಾದ ಮನಸ್ಸುಳ್ಳವನಾಗಿ, ಅತ್ಯಂತ ಶ್ರೇಷ್ಠವಾದ ಸದ್ಗತಿ ಯನ್ನೈದುವನು. ಎಲ್ಲಾ ಪ್ರಾಣಿಗಳ ಕ್ಷೇಮಕ್ಕಾಗಿ, ಎಲ್ಲಾ ವೇದಗಳ ಅರ್ಥದಸಾರವಾದ ಈ ಶೌಚಕ್ರಮದ ವಿಷಯವು ಹಿಂದೆ ಬ್ರಹ್ಮನಿಂದಲೇ ಹೇಳಲ್ಪಟ್ಟಿತು. ಬ್ರಹ್ಮಜ್ಞಾನಿಗಳಾದ ಮತ್ತು ಪರಿಶುದ್ಧರಾದ ಋಷಿ ಗಳಿಗೆ ಶ್ರೇಷ್ಠವಾದ ಸ್ಥಾನವು ಲಭಿಸುವುದಕ್ಕಾಗಿ, ಈ ವಿಚಾರವು ಅವ ನಿಂದ ಹೇಳಲ್ಪಟ್ಟಿತು. ಈ ವಿಷಯವನ್ನು ಆಚರಿಸುವುದರಲ್ಲಿ ಯಾವ ಮಾನವನು ಅಜಾಗರೂಕತೆಯನ್ನು ವಹಿಸುವುದಿಲ್ಲವೋ ಅವನು ದುರ್ಗತಿ ಯನ್ನು ಹೊಂದುವುದಿಲ್ಲ.

ಮಾನಾಽವಮಾನೌ ದ್ವಾವೇತೌ ತಾವೇವಾಹು ರ್ವಿಷಾಽಮೃತೇ ।
ಅವಮಾನೋಽಮೃತಂ ತತ್ರ ಸನ್ಮಾನೋ ವಿಷಮುಚ್ಯತೇ ॥ ೪ ॥

ಗುರೋ ರಪಿ ಹಿತೇ ಯುಕ್ತಃ ಸ ತು ಸಂವತ್ಸರಂ ವಸೇತ್ ।
ನಿಯಮೇಷ್ವ ಪ್ರಮತ್ತಸ್ತು ಯಮೇಷು ಚ ಸದಾ ಭವೇತ್ ॥ ೫ ॥

ಪ್ರಾಪ್ಯಾಽನುಜ್ಞಾಂ ತತಶ್ಚೈವ ಜ್ಞಾನಯೋಗ ಮನುತ್ತಮಂ ।
ಅವಿರೋಧೇನ ಧರ್ಮಸ್ಯ ಚರೇತ ಪೃಥಿವೀ ಮಿಮಾಂ ॥ ೬ ॥

ಚಕ್ಷುಃ ಪೂತಂ ಚರೇನ್ಮಾರ್ಗಂ ವಸ್ತ್ರಪೂತಂ ಜಲಂ ಪಿಬೇತ್ ।
ಸತ್ಯ ಪೂತಂ ವದೇ ದ್ವಾಕ್ಯಂ ಮನಃ ಪೂತಂ ಸಮಾಚರೇತ್ ॥ ೭ ॥

---

೪–೭. ಇತರರಿಂದ ನಮಗೆ ದೊರೆಯುವ ಮಾನ, ಮತ್ತು ಅವಮಾನಗಳೇ ವಿಷ ಮತ್ತು ಅಮೃತಗಳೆಂದು ಹೇಳಲ್ಪಟ್ಟಿವೆ. ಅವಮಾನವನ್ನು ಅಮೃತವೆಂದೂ, ಒಳ್ಳೆಯ ಮಾನವನ್ನು ವಿಷವೆಂದೂ ತಿಳಿಯಬೇಕು. ಏಕೆಂದರೆ ಸನ್ಮಾನದಿಂದ ಅಹಂಕಾರವು ಹೆಚ್ಚುತ್ತದೆ. ಅವಮಾನದಿಂದ ನಮ್ಮ ದೋಷವನ್ನು ತಿಳಿದು, ಅದನ್ನು ಬಿಟ್ಟು ಮೇಲ್ಮೆಯನ್ನು ಹೊಂದಬಹುದು. ಶಿಷ್ಯನು ಗುರುವಿಗೆ ಅನುಕೂಲವಾಗಿ ಒಂದು ವರ್ಷಕಾಲ ಅವನ ಹತ್ತಿರ ಸೇವೆಯನ್ನು ಮಾಡುತ್ತಾ ವಾಸಮಾಡಬೇಕು. ಅವನು ಅನುಸರಿಸಬೇಕಾದ ಈ ಮುಮುಕ್ಷು ಧರ್ಮಗಳನ್ನು ಸ್ವಲ್ಪವೂ ತಪ್ಪದೇ ಪಾಲಿಸುತ್ತಾ ಇಂದ್ರಿಯಗಳನ್ನು ನಿಗ್ರಹಮಾಡಬೇಕು. ಅನಂತರ ಗುರುವಿನ ಅಪ್ಪಣೆಯನ್ನು ಪಡೆದು, ಶ್ರೇಷ್ಠವಾದ ಜ್ಞಾನಯೋಗವನ್ನು ಹೊಂದಿ, ಧರ್ಮಕ್ಕೆ ವಿರೋಧವಾಗಿಲ್ಲದಿರುವಂತೆ ದೇಶಾಟನೆಯಿಂದ ವಿವೇಚನೆ, ಹೃದಯ ವೈಶಾಲ್ಯಗಳನ್ನು ಪಡೆಯಲು ಈ ಭೂಮಿಯನ್ನು ಸಾಧ್ಯವಾದಷ್ಟು ಸಂಚಾರ ಮಾಡಬೇಕು. ಕಣ್ಣಿಗೆ ಯಾವುದು ಪರಿಶುದ್ಧವಾದ ದಾರಿಯೆಂದು ತೋರುತ್ತದೆಯೋ ಆ ದಾರಿಯಲ್ಲಿ ಸಂಚಾರಮಾಡಬೇಕು. ಬಟ್ಟೆಯಿಂದ ಶೋಧಿಸಿದ ನೀರನ್ನು ಕುಡಿಯಬೇಕು. ಸತ್ಯದಿಂದ ಪರಿಶುದ್ಧವಾದ ಮಾತುಗಳನ್ನಾಡಬೇಕು. ಮನಸ್ಸಿಗೆ, ಆತ್ಮಸಾಕ್ಷಿಗೆ, ಪರಿಶುದ್ಧವಾಗಿ ತೋರುವ ಕೆಲಸಗಳನ್ನು ಮಾಡಬೇಕು.

ಮತ್ಸ್ಯ ಗೃಹ್ಯಸ್ಯ ಯತ್ಪಾಪಂ ಷಣ್ಮಾಸಾಽಭ್ಯಂತರೇ ಭವೇತ್ ।
ಏಕಾಹಂ ತತ್ಸಮಂ ಜ್ಞೇಯ ಮಪೂತಂ ಯಜ್ಜಲಂ ಭವೇತ್॥ ೮ ॥

ಅಪೂತೋದಕ ಪಾನೇ ತು ಜಪೇಚ್ಚ ಶತಪಂಚಕಂ ।
ಅಘೋರ ಲಕ್ಷಣಂ ಮಂತ್ರಂ ತತಃ ಶುದ್ಧಿಮವಾಪ್ನುಯಾತ್ ॥ ೯ ॥

ಅಥವಾ ಪೂಜಯೇ ಚ್ಛಂಭುಂ ಘೃತಸ್ನಾನಾಽದಿ ವಿಸ್ತರೈಃ ।
ತ್ರಿಧಾ ಪ್ರದಕ್ಷಿಣೀ ಕೃತ್ಯ ಶುದ್ಧ್ಯತೇ ನಾಽತ್ರ ಸಂಶಯಃ ॥೧೦॥

ಆತಿಥ್ಯ ಶ್ರಾದ್ಧ ಯಜ್ಞೇಷು ನ ಗಚ್ಛೇದ್ಯೋಗವಿತ್ಕ್ವಚಿತ್ ।
ಏವಂ ಹ್ಯಹಿಂಸಕೋ ಯೋಗೀ ಭವೇದಿತಿ ವಿಚಾರಿತಂ ॥೧೧॥

ವಹ್ನೌ ವಿಧೂಮೇಽತ್ಯಂಗಾರೇ ಸರ್ವಸ್ಮಿನ್ಭುಕ್ತ ವಜ್ಜನೇ ।
ಚರೇತ್ತು ಮತಿಮಾನ್ಭೈಕ್ಷ್ಯಂ ನ ತು ತೇಷ್ವೇವ ನಿತ್ಯಶಃ ॥೧೨॥

---

೮–೧೦. ಆರು ತಿಂಗಳಕಾಲ ಮೀನು ಹಿಡಿಯುವವನ ಮನೆಯಲ್ಲಿ ವಾಸಮಾಡಿದರೆ ಯಾವ ಪಾಪವು ಬರುವುದೋ ಅಂತಹ ಪಾಪವು ಅಶುದ್ಧವಾದ ನೀರನ್ನು ಒಂದು ದಿನ ಕುಡಿದರೆ ಬರುವುದು. ಅಶುದ್ಧವಾದ ನೀರನ್ನು ಕುಡಿದರೆ ಶಿವನ ಮಂತ್ರವನ್ನು ಐನೂರಾವೃತ್ತಿ ಜಪವನ್ನು ಮಾಡಬೇಕು. ಮತ್ತು "ಅಘೋರ" ಎಂದು ಪ್ರಾರಂಭವಾಗುವ ಮಂತ್ರವನ್ನು ಜಪಿಸಬೇಕು. ಇದರಿಂದ ಶುದ್ಧಿಯಾಗುವುದು. ಹಾಗಲ್ಲದಿದ್ದರೆ ಮೂರು ಸಲ ಪ್ರದಕ್ಷಿಣೆಮಾಡಿ, ತುಪ್ಪ ಮುಂತಾದ ಪಂಚಾಮೃತದಿಂದ ಸ್ನಾನವೇ ಮೊದಲಾದ ಷೋಡಶೋಪಚಾರಗಳನ್ನು ಮಾಡಿ ಶಿವನನ್ನು ಪೂಜಿಸಬೇಕು. ಹೀಗೆ ಮಾಡಿದರೆ ಶುದ್ಧಿಯಾಗುವುದರಲ್ಲಿ ಸಂದೇಹವಿಲ್ಲ.

೧೧–೧೨. ಯೋಗಿಯು ಅತಿಥಿ ಸತ್ಕಾರ ಮಾಡುವಾಗ, ಶ್ರಾದ್ಧಕಾಲದಲ್ಲಿ ಮತ್ತು ಯಾಗ ಕಾಲದಲ್ಲಿ ಎಲ್ಲಿಗೂ ಹೋಗಬಾರದು. ಹೀಗೆ ಯೋಗಿಯು ಹಿಂಸೆಯನ್ನು ಮಾಡದವನಾಗಿರಬೇಕು. ಎಂದು ಗೊತ್ತುಮಾಡಿ ಹೇಳಲ್ಪಟ್ಟಿದೆ. ಹೊಗೆಯಿಲ್ಲದ, ತುಂಬ ಕೆಂಡಗಳುಳ್ಳ, ಅಗ್ನಿಯು ತಣ್ಣಗಾಗಿರುವಾಗ, ಎಲ್ಲರೂ ಊಟಮಾಡಿ ಆದಮೇಲೆ, ಪರ್ಣಶಾಲೆಯ ಮುಂದೆ ಬುದ್ಧಿಶಾಲಿಯಾದ ಯೋಗಿಯು, ಭಿಕ್ಷೆಗಾಗಿ ಹೋಗಬೇಕು.

**ಅಥೈನ ಮವಮನ್ಯಂತೇ ಪರೇ ಪರಿಭವಂತಿ ಚ ।**
**ಯಥಾ ಯುಕ್ತಂ ಚರೇದ್ಭೈಕ್ಷ್ಯಂಸತಾಂ ಧರ್ಮ ಮದೂಷಯನ್॥**
**ಭೈಕ್ಷ್ಯಂ ಚರೇ ದ್ವನಸ್ಥೇಷು ಯಾಯಾವರ ಗೃಹೇಷು ಚ ।**
**ಶ್ರೇಷ್ಠಾ ತು ಪ್ರಥಮಾ ಹೀಯಂ ವೃತ್ತಿರಸ್ಯೋಪ ಜಾಯತೇ॥೧೪॥**
**ಅತ ಊರ್ಧ್ವಂ ಗೃಹಸ್ಥೇಷು ಶೀ(ಕು)ಲೀ ನೇಷು ಚರೇದ್ದ್ವಿಜಾಃ ।**
**ಶ್ರದ್ದಧಾನೇಷು ದಾಂತೇಷು ಶ್ರೋತ್ರಿಯೇಷು ಮಹಾತ್ಮಸು ॥೧೫॥**
**ಅತ ಊರ್ಧ್ವಂ ಪುನಶ್ಚಾಽಪಿ ಅದುಷ್ಟಾ ಪತಿತೇಷು ಚ ।**
**ಭೈಕ್ಷ್ಯಚರ್ಯಾ ಹಿ ವರ್ಣೇಷು ಜಘನ್ಯಾ ವೃತ್ತಿರುಚ್ಯತೇ ॥೧೬॥**

---

ಹೋದವರ ಮನೆಗೇ ನಿತ್ಯದಲ್ಲಿಯೂ, ಯೋಗಿಯು ಭಿಕ್ಷೆಗಾಗಿ ಹೋಗ ಬಾರದು. ಹಾಗೇನಾದರೂ ಹೋದರೆ ಇವನಿಗೆ ಇತರರು ಅವಮಾನ ಮಾಡುವರು ಮತ್ತು ತಿರಸ್ಕಾರ ಮಾಡುವರು. ಆದ್ದರಿಂದ ಯೋಗಿಯು ಸತ್ಪುರುಷರ ಧರ್ಮಕ್ಕೆ ಲೋಪಬಾರದಂತೆ ಇರುವ ರೀತಿಯಲ್ಲಿ ಯೋಗ್ಯ ವಾದ ಕ್ರಮದಲ್ಲಿ ಭಿಕ್ಷಾಜೀವನವನ್ನು ನಡೆಸಬೇಕು.

೧೪-೧೬. ಯೋಗಿಯು ಕಾಡಿನಲ್ಲಿ ವಾಸಮಾಡುವ ಯತಿಗಳ ಸಮೀಪಕ್ಕೆ ಭಿಕ್ಷೆಗಾಗಿ ಹೋಗಬೇಕು. ಶ್ರೇಷ್ಠವಾದ ಬ್ರಾಹ್ಮಣನ ಮನೆಯ ಮುಂದೆಯಾದರೂ ಭಿಕ್ಷೆಗಾಗಿ ಹೋಗಬೇಕು. ಇವುಗಳ ಪೈಕಿ ಮೊದಲನೆಯ ಜೀವನವು ಉತ್ತಮವಾದುದು. ಎಲೈ ಬ್ರಾಹ್ಮಣರೇ, ಒಳ್ಳೆಯ ನಡತೆಯುಳ್ಳ ಗೃಹಸ್ಥರ ಮನೆಯ ಮುಂದೆಯೂ, ಯೋಗಿಯು ಭಿಕ್ಷೆಗಾಗಿ ಸಂಚರಿಸಬಹುದು. ಶ್ರದ್ಧಾಭಕ್ತಿಯುಳ್ಳ, ಇಂದ್ರಿಯ ನಿಗ್ರಹವುಳ್ಳ, ಮಹಾತ್ಮರಾದ ವೇದಾಧ್ಯಯನ ಸಂಪನ್ನರಲ್ಲಿಯೂ, ಭಿಕ್ಷೆ ಗಾಗಿ ಹೋಗಬಹುದು. ಇದೂ ಅಲ್ಲದೆ ಕೆಟ್ಟವರಲ್ಲದ, ಹೀನಜಾತಿಯ ವರೂ ಅಲ್ಲದ, ಜನಗಳ ಮನೆಯ ಮುಂದೆ ಭಿಕ್ಷೆಗೆ ಹೋಗಬಹುದು. ಆದರೆ ಕೀಳು ಜಾತಿಯಲ್ಲಿ ಭಿಕ್ಷೆಗಾಗಿ ಹೋಗುವುದು ಬಹಳ ಪಾಪಿ ಜೀವನವೆಂದರಿಯಬೇಕು.

**ಭೈಕ್ಷ್ಯಂ ಯಾವಾಗೂಸ್ತ್ರಕ್ರಂ ವಾ ಪಯೋ ಯಾವಕಮೇವಚ ।**
**ಫಲ ಮೂಲಾದಿ ಪಕ್ವಂ ವಾ ಕಣ ಪಿಣ್ಯಾಕ ಸಕ್ತವಃ ॥೧೭॥**

**ಇತ್ಯೇತೇ ವೈ ಮಯಾ ಪ್ರೋಕ್ತಾ ಯೋಗಿನಾಂ ಸಿದ್ಧಿ ವರ್ಧನಾಃ ।**
**ಆಹಾರಾಸ್ತೇಷು ಸಿದ್ಧೇಷು ಶ್ರೇಷ್ಠ ಭೈಕ್ಷ್ಯ ಮಿತಿ ಸ್ಮೃತಂ ॥೧೮॥**

**ಅಬ್ಬಿಂದುಂ ಯಃ ಕುಶಾಗ್ರೇಣ ಮಾಸಿಮಾಸಿ ಸಮಶ್ನುತೇ ।**
**ನ್ಯಾಯತೋ ಯಶ್ಚರೇ ದ್ಭೈಕ್ಷ್ಯಂ ಪೂರ್ವೋಕ್ತಾತ್ಸ ವಿಶಿಷ್ಯತೇ ॥**

**ಜರಾ ಮರಣ ಗರ್ಭೇಭ್ಯೋ ಭೀತಸ್ಯ ನರಕಾದಿಷು ।**
**ಏವಂ ದಾಯಯತೇ ತಸ್ಮಾತ್ತದ್ಭೈಕ್ಷ್ಯಮಿತಿ ಸಂಸ್ಮೃತಂ ॥೨೦॥**

---

೧೭-೧೯. ಯವಾಗೂ ಎಂಬ ಧಾನ್ಯ, ಅಥವಾ ಮಜ್ಜಿಗೆ, ಹಾಲು, ಜವೇಗೋಧುವೆ, ಹಣ್ಣು, ಗೆಡ್ಡೆಗೆಣಸುಗಳು, ಕಾಳುಗಳು, ಪಿಣ್ಯಾಕ ವೆಂಬ ಹಿಟ್ಟು, ಇವುಗಳನ್ನು ಭಿಕ್ಷೆಗಾಗಿ ಬೇಡಿದರೆ ನಿಷೇಧವೇನೂ ಇಲ್ಲ. ಮತ್ತು ಇವುಗಳನ್ನು ಯಾಚನೆ ಮಾಡಿದರೆ ಯೋಗಿಗಳಿಗೆ ಸಿದ್ಧಿಯು ಹೆಚ್ಚುತ್ತದೆ. ಇವುಗಳೇ ಯೋಗಿಯ ಆಹಾರಗಳು, ಇವುಗಳನ್ನು ಸ್ವಂತವಾಗಿ ಸಂಪಾದಿಸುವುದಕ್ಕಿಂತ, ಇವುಗಳನ್ನು ಯಾಚನೆ ಮಾಡುವುದೇ ಯೋಗಿಗಳಿಗೆ ಶ್ರೇಷ್ಠವಾದುದು. ಪ್ರತಿ ತಿಂಗಳಲ್ಲಿಯೂ ಯೋಗಿಯು ದರ್ಭೆಯ ತುದಿಯಿಂದ ನೀರಿನ ತೊಟ್ಟುಗಳನ್ನು ಪಾನ ಮಾಡಿದರೆ ಮತ್ತು ಶಾಸ್ತ್ರೋಕ್ತ ಕರ್ಮದಲ್ಲಿ ಭಿಕ್ಷಾಜೀವನವನ್ನು ನಡೆಸಿದರೆ ಅವನು ಹಿಂದೆ ಹೇಳಲ್ಪಟ್ಟ ಯೋಗಿಗಳಿಗಿಂತ ಸರ್ವಶ್ರೇಷ್ಠನಾಗುತ್ತಾನೆ.

೨೦-೨೨. ಹುಟ್ಟು, ಸಾವು, ಮುಪ್ಪು, ಮತ್ತು ನರಕ ಮುಂತಾದ ವುಗಳಿಗೆ ಹೆದರುವ ಮತ್ತು ಇವುಗಳಿಂದ ಬಿಡುಗಡೆಯನ್ನು ಬಯಸುವ ಸನ್ಯಾಸಿಗೆ ಭಿಕ್ಷಾಜೀವನವು ಅವನ ಪಿತ್ರಾರ್ಜಿತವಾದ ಸ್ವತ್ತಿನ ಒಂದು ಭಾಗದಂತಿರುತ್ತದೆ. ಅಂತಹ ಯತಿಯೇ ಭಿಕ್ಷೆಗೆ ಅರ್ಹನಾದ ಅಧಿ ಕಾರಿಯು. ಮೊಸರನ್ನು ಸೇವನೆಮಾಡುವವರೂ, ಹಾಲನ್ನು ಉಪಯೋಗಿ ಸುವವರೂ, ಮತ್ತು ಕೃಛ್ರ ಚಾಂದ್ರಾಯಣ ಮುಂತಾದ ವ್ರತನಿಯಮ ಗಳಿಂದ ಶರೀರದ ಶೋಷಣೆಯನ್ನು ಮಾಡುವವರೂ, ಇವರೆಲ್ಲರೂ

**ದಧಿ ಭಕ್ಷಾಃ ಪಯೋ ಭಕ್ಷಾ ಯೇ ಚಾಽನ್ಯೇ ಜೀವಕ್ಷೀಣಕಾಃ ।**
**ಸರ್ವೇ ತೇ ಭೈಕ್ಷ ಭಕ್ಷಸ್ಯ ಕಲಾಂ ನಾರ್ಹಂತಿ ಷೋಡಶೀಂ ॥೨೧॥**

**ಭಸ್ಮಶಾಯೀ ಭವೇನ್ನಿತ್ಯಂ ಭಿಕ್ಷಾ ಚಾರೀ ಜಿತೇಂದ್ರಿಯಃ ।**
**ಯ ಇಚ್ಛೇತ್ಪರಮಂ ಸ್ಥಾನಂ ವ್ರತಂ ಪಾಶುಪತಂ ಚರೇತ್ ॥೨೨॥**

**ಯೋಗಿನಾಂ ಚೈವ ಸರ್ವೇಷಾಂ ಶ್ರೇಷ್ಠಂ ಚಾಂದ್ರಾಯಣಂ ಭವೇತ್**
**ಏಕಂ ದ್ವೇ ತ್ರೀಣಿ ಚತ್ವಾರಿ ಶಕ್ತಿತೋ ವಾ ಸಮಾಚರೇತ್ ॥೨೩॥**

**ಅಸ್ತೇಯಂ ಬ್ರಹ್ಮಚರ್ಯಂ ಚ ಅಲೋಭಸ್ತ್ಯಾಗ ಏವಚ ।**
**ವ್ರತಾನಿ ಪಂಚ ಭಿಕ್ಷೂಣಾ ಮಹಿಂಸಾ ಪರಮಾ ತ್ವಿಹ ॥೨೪॥**

---

ಭಿಕ್ಷಾಜೀವನವನ್ನು ಮಾಡುವ ಯತಿಯ ಹದಿನಾರನೆಯ ಒಂದು ಭಾಗದಷ್ಟು ಯೋಗ್ಯತೆಯನ್ನು ಪಡೆದಿಲ್ಲ. ಯಾವನು ಉತ್ಕೃಷ್ಟವಾದ ಸ್ಥಾನವನ್ನು ಬಯಸುವನೋ ಅವನು ಬೂದಿಯ ಮೇಲೆ ಮಲಗಿ ಭಿಕ್ಷಾಜೀವನವನ್ನು ನಡೆಸುವವನಾಗಿ, ಇಂದ್ರಿಯನಿಗ್ರಹವುಳ್ಳವನಾಗಿ, ಪಶುಪತಿಯಾದ ಶಿವನಿಗೆ ಸಂಬಂಧಪಟ್ಟ, ವ್ರತವನ್ನು ಪ್ರತಿದಿನವೂ ಮಾಡಬೇಕು.

೨೩-೨೫. ಎಲ್ಲಾ ಯೋಗಿಗಳಿಗೂ ಚಾಂದ್ರಾಯಣವೆಂಬ ವ್ರತವು ಶ್ರೇಷ್ಠವಾದುದು. ಒಂದು, ಎರಡು, ಮೂರು, ನಾಲ್ಕು, ಹೀಗೆ ಅವರವರ ಶಕ್ತ್ಯನುಸಾರವಾಗಿ ಈ ವ್ರತವನ್ನಾಚರಿಸಬೇಕು. ಸಂನ್ಯಾಸಿಗಳಿಗೆ ಕಾಯಿಕ, ವಾಚಿಕ, ಮಾನಸಿಕವೆಂಬ ಮೂರು ಬಗೆಯ ಕಳ್ಳತನವನ್ನೂ ಮಾಡದಿರುವುದು, ವಿದ್ಯಾಭ್ಯಾಸಮಾಡುವುದು, ತಿಳಿವಳಿಕೆಯನ್ನು ಇತರರಲ್ಲಿಯೂ ಹರಡುವುದು, ಬ್ರಹ್ಮಚರ್ಯವು ,ದುರಾಸೆಯಿಲ್ಲದಿರುವುದು, ತನ್ನ ಶಕ್ತಿಗೆ ಅನುಸಾರವಾಗಿ, ಆವಶ್ಯಕತೆ ಔಚಿತ್ಯಗಳನ್ನರಿತು ತಕ್ಕಂತೆ ವೆಚ್ಚಮಾಡುವುದು, ಎಲ್ಲವನ್ನೂ ವಿವೇಕ ವೈರಾಗ್ಯಗಳಿಂದ ತ್ಯಾಗಮಾಡುವುದೆಂಬ ನಿಯಮಗಳು, ಹೇಳಲ್ಪಟ್ಟವೆ. ಇವುಗಳೆಲ್ಲಕ್ಕಿಂತಲೂ, ಮೇಲೆ ಹೇಳಿದಂತೆ ಮೂರು ಬಗೆಯ ಅಹಿಂಸೆಯೆಂಬ ನಿಯಮವು ಬಹು ಮುಖ್ಯವೂ, ಅತಿಶ್ರೇಷ್ಠವೂ, ಆಗಿದೆ. ಅಲ್ಲದೇ ಕೋಪವಿಲ್ಲದಿರುವುದು,

ಅಕ್ರೋಧೋ ಗುರು ಶುಶ್ರೂಷಾ ಶೌಚ ಮಾಹಾರಲಾಘವಂ ।
ನಿತ್ಯಂ ಸ್ವಾಧ್ಯಾಯ ಇತ್ಯೇತೇ ನಿಯಮಾಃ ಪರಿಕೀರ್ತಿತಾಃ ॥೨೫॥
ಬೀಜಯೋನಿ ಗುಣಾ ವಸ್ತು ಬಂಧಃ ಕರ್ಮಭಿ ರೇವ ಚ ।
ಯಥಾ ದ್ವಿಪ ಇವಾರಣ್ಯೇ ಮನುಷ್ಯಾಣಾಂ ವಿಧೀಯತೇ ॥೨೬॥
ದೇವ್ಯೈ ಸ್ತುಲ್ಯಾಃ ಸರ್ವಯಜ್ಞ ಕ್ರಿಯಾಸ್ತು ।
ಯಜ್ಞಾಜ್ಜಾಪ್ಯಂ ಜ್ಞಾನ ಮಾಹುಶ್ಚ ಜಾಪ್ಯಾತ್ ॥
ಜ್ಞಾನಾತ್ ಧ್ಯಾನಂ ಸಂಗರಾಗಾದಪೇತಂ ।
ತಸ್ಮಿನ್ಪ್ರಾಪ್ತೇ ಶಾಶ್ವತಸ್ಯೋಪಲಂಭಃ ॥೨೭॥

---

ಗುರುಗಳಿಗೆ ಸೇವೆಮಾಡುವುದು, ದೇಹಶುದ್ಧಿ, ಕಡಿಮೆಯಾಗಿ ಮಿತವಾಗಿ ಆಹಾರ ತೆಗೆದುಕೊಳ್ಳುವುದು, ಪ್ರತಿದಿನದಲ್ಲೂ ವೇದಾಧ್ಯಯನ ಮಾಡುವುದು ಎಂಬ ನಿಯಮಗಳು ಹೇಳಲ್ಪಟ್ಟವೆ.

೨೬–೨೮. ಮನುಷ್ಯನು ಹುಟ್ಟುವುದಕ್ಕೆ ಕಾರಣರಾದ ಮಾತಾಪಿತೃಗಳಲ್ಲಿರುವ ಗುಣಗಳೂ ಉಂಟುಮಾಡುವ, ಸಂಚಿತ ಮತ್ತು ಆಗಾಮಿ ರೂಪವಾದ ತನ್ನ ಕರ್ಮದಿಂದ ಮನುಷ್ಯನಿಗೆ ಧನ ಮುಂತಾದವುಗಳಲ್ಲಿ ಅಭಿಮಾನದಿಂದ ಉಂಟಾಗುವ ಮತ್ತು ಸಂಬಂಧಿಸುವ, ಸಂಸಾರವೆಂಬ ಕಟ್ಟು ಸಹ. ಕಾಡಿನಲ್ಲಿರುವ ಆನೆಯನ್ನು ಹೇಗೆ ಹಿಡಿಯಲು ಅಸಾಧ್ಯವೋ ಹಾಗೆ, ಸುಲಭವಾಗಿ ಸಡಿಲಿಸಲಾಗದ ರೀತಿಯಲ್ಲಿ ದೇವತೆಗಳಿಂದ ಗೊತ್ತು ಮಾಡಲ್ಪಟ್ಟದೆ. ಎಲ್ಲಾ ಯಾಗ ಮತ್ತು ಪಂಚಮಹಾಯಜ್ಞಗಳೆಂಬ ಸತ್ಕರ್ಮವನ್ನು ಮಾಡುವ ಜನರನ್ನು, ಆ ಕರ್ಮಗಳು ದೇವತೆಗಳಂತೆ ಸ್ವರ್ಗ ಮುಂತಾದ ಸದ್ಗತಿಯನ್ನು ಪಡೆಯಿಸುತ್ತವೆ. ಯಾಗದಿಂದಲೂ ಮತ್ತು ಮಂತ್ರ ಜಪದಿಂದಲೂ ಉತ್ತಮ ಜ್ಞಾನ ಪ್ರಾಪ್ತಿಯು ಫಲವಾದುದರಿಂದ, ಕರ್ಮಕ್ಕಿಂತ ತತ್ವಜ್ಞಾನವು ಮೇಲಾದುದು. ಹಾಗೆಯೇ ಜ್ಞಾನಕ್ಕಿಂತ ಸಂಸಾರ ಸಂಬಂಧವನ್ನು ದೂರಮಾಡುವ ಜೀವಬ್ರಹ್ಮೈಕ್ಯ ತತ್ವದ ಧ್ಯಾನದ ಮೇಲ್ಮೆಯೂ, ಧ್ಯಾನದಿಂದ ಉಂಟಾಗುವ ನಿತ್ಯವಾದ ಮೋಕ್ಷರೂಪವಾದ ಅಪರೋಕ್ಷಾನುಭವದ ಸುಖಪ್ರಾಪ್ತಿಯೂ, ಕ್ರಮವಾಗಿ ಶ್ರೇಯಸ್ಕರವೆಂದು ಹೇಳಲ್ಪಟ್ಟಿರುತ್ತವೆ. ಜ್ಞಾನಸಾಧನ

ದಮಃ ಶಮಃ ಸತ್ಯ ಮಕಲ್ಮಷತ್ವಂ ।
ಮೌನಂ ಭೂತೇ ಷ್ವಖಿಲೇಷು ಚಾಽಽರ್ಜವಂ ॥
ಅತೀಂದ್ರಿಯಂ ಜ್ಞಾನ ಮಿದಂ ತಥಾ ಶಿವಂ ।
ಪ್ರಾಹುಸ್ತಥಾ ಜ್ಞಾನ ವಿಶುದ್ಧ ಬುದ್ಧಯಃ ॥೨೮॥
ಸಮಾಹಿತೋ ಬ್ರಹ್ಮಪರೋಽಪ್ರಮಾದೀ ।
ಶುಚಿಸ್ತಥೈ ಕಾಂತ ರತಿ ರ್ಜಿತೇಂದ್ರಿಯಃ ॥
ಸಮಾಪ್ನುಯಾ ದ್ಯೋಗ ಮಿಮಂ ಮಹಾತ್ಮಾ ।
ಮಹರ್ಷಯ ಶ್ಚೈವ ಮನಿಂದಿತಾಽಮಲಾಃ ॥೨೯॥
ಪ್ರಾಪ್ಯತೇಽಭಿ ಮತಾನ್ದೇ ಶಾನಂ ಕುಶೇನ ನಿವಾರಿತಃ ।
ಏತನ್ಮಾರ್ಗೇಣ ಶುದ್ಧೇನ ದಗ್ಧಬೀಜೋ ಹ್ಯಕಲ್ಮಷಃ ॥೩೦॥

---

ಅನುಷ್ಠಾನದಿಂದ ಶುದ್ಧವಾದ ಬುದ್ಧಿಯುಳ್ಳ ಜ್ಞಾನಿಗಳು ಬಾಹ್ಯವಾದ ಮತ್ತು ಆಂತರವಾದ ಇಂದ್ರಿಯ ನಿಗ್ರಹ, ಶಾಂತಿ, ಸತ್ಯ,. ಶುದ್ಧತೆ, ಮೌನ, ಎಲ್ಲಾ ಪ್ರಾಣಿಗಳಲ್ಲಿಯೂ ಸಮಾನವಾದ ಭಾವದಿಂದ ಸರಳವಾದ ನಡೆವಳಿಕೆ, ಇಂದ್ರಿಯಗಳಿಗೆ ಅಗೋಚರವಾದ ಮತ್ತು ಮಂಗಳಕರವಾದ ಶ್ರೇಷ್ಠವಾದ ಬ್ರಹ್ಮಾತ್ಮೈಕ್ಯಸಾಕ್ಷಾತ್ಕಾರರೂಪವಾದ ತಿಳಿವಳಿಕೆ, ಇವೆಲ್ಲವೂ ಇರಬೇಕೆಂದು ಹೇಳುತ್ತಾರೆ.

೨೯–೩೧. ಬ್ರಾಹ್ಮಣನು ಸಮಾಧಾನವುಳ್ಳವನಾಗಿಯೂ, ಬ್ರಹ್ಮನಲ್ಲಿ ಆಸಕ್ತಿಯುಳ್ಳವನಾಗಿಯೂ, ಜಾಗರೂಕನಾಗಿಯೂ, ಶುದ್ಧನಾಗಿಯೂ, ವಿಷಯಾನುಭವಗಳ ಗೊಂದಲವನ್ನು ಬಿಟ್ಟು ಒಬ್ಬನೇ ಇರುವುದರಲ್ಲಿ ಆಸಕ್ತಿಯುಳ್ಳವನಾಗಿಯೂ, ಇಂದ್ರಿಯಗಳನ್ನು ಜಯಿಸಿದವನಾಗಿಯೂ, ಮಹಾತ್ಮನಾಗಿಯೂ, ಇರುವ ಬ್ರಾಹ್ಮಣನೂ, ಸಾಧಕನೂ, ಈ ಯೋಗವನ್ನು ಸಂಪಾದಿಸಬಹುದು. ಶ್ರೇಷ್ಠವಾದ ಗುಣಗಳುಳ್ಳ ಪರಿಶುದ್ಧರಾದ ಮಹರ್ಷಿಗಳು ಈ ಯೋಗವನ್ನು ಹೀಗೆಯೇ ಸಂಪಾದಿಸಿದರು. ಅಂಕುಶದಿಂದ ಓಡಿಸಲ್ಪಡುವ ಆನೆಯಂತೆ, ಈ ಶುದ್ಧವಾದ ಯೋಗಮಾರ್ಗವನ್ನು ಅನುಸರಿಸಿದ ಮನುಷ್ಯನು ತನಗೆ ಇಷ್ಟವಾದ ಸದ್ಗತಿಯನ್ನು ಹೊಂದುವವನಾಗಿಯೂ, ಸಂಪೂರ್ಣವಾಗಿ ಸುಟ್ಟುಹೋದಂತಾಗಿರುವ, ಫಲವನ್ನು ಕೊಡುವ ಶಕ್ತಿಯನ್ನು ಕಳೆದುಕೊಂಡ

ಸದಾಽಚಾರ ರತಾಃ ಶಾಂತಾಃ ಸ್ವಧರ್ಮ ಪರಿಪಾಲಕಾಃ ।
ಸರ್ವಾನ್ ಲೋಕಾ ನ್ನಿನಿರ್ಜಿತ್ಯ ಬ್ರಹ್ಮಲೋಕಂ ವ್ರಜಂತಿ ತೇ ॥೩೧॥
ಪಿತಾಮಹೇನೋಪದಿಷ್ಟೋ ಧರ್ಮಃ ಸಾಕ್ಷಾತ್ಸನಾತನಃ ।
ಸರ್ವಲೋಕೋಪ ಕಾರಾರ್ಥಂ ಶೃಣುಧ್ವಂ ಪ್ರವದಾಮಿ ವಃ ॥೩೨॥
ಗುರೂಪದೇಶ ಯುಕ್ತಾನಾಂ ವೃದ್ಧಾನಾಂ ಕ್ರಮ ವರ್ತಿನಾಂ ।
ಅಭ್ಯುತ್ಥಾನಾದಿಕಂ ಸರ್ವಂ ಪ್ರಣಾಮಂ ಚೈವ ಕಾರಯೇತ್ ॥೩೩॥
ಅಷ್ಟಾಂಗ ಪ್ರಣಿಪಾತೇನ ತ್ರಿಧಾ ನ್ಯಸ್ತೇನ ಸುವ್ರತಾಃ ।
ತ್ರಿಃ ಪ್ರದಕ್ಷಿಣ ಯೋಗೇನ ವಂದ್ಯೋ ವೈ ಬ್ರಾಹ್ಮಣೋ ಗುರುಃ ॥
ಜ್ಯೇಷ್ಠಾ ನ್ಯೇಽಪಿ ಚ ತೇ ಸರ್ವೇ ವಂದನೀಯೋ ವಿಜಾನತಾ ।
ಆಜ್ಞಾಭಂಗಂ ನ ಕುರ್ವೀತ ಯದೀಚ್ಛೇತ್ಸಿದ್ಧಿಮುತ್ತಮಂ ॥೩೫॥

---

ರುವ, ತನ್ನ ಕರ್ಮವೆಂಬ ಬೀಜವುಳ್ಳವನಾಗಿಯೂ, ಸಕಲ ಪಾಪದಿಂದ ಬಿಡಲ್ಪಟ್ಟವನೂ ಆಗಿರುವನು. ಒಳ್ಳೆಯ ಆಚಾರ ಶೀಲರಾದ, ಶಾಂತ ಸ್ವಭಾವವುಳ್ಳ, ತಮ್ಮ ಧರ್ಮವನ್ನೇ ಕಾಪಾಡಿಕೊಂಡು ಬರುತ್ತಿರುವ, ಈ ಯೋಗಿಗಳು ಎಲ್ಲಾ ಲೋಕಗಳನ್ನೂ ಮೀರಿ ಬ್ರಹ್ಮಲೋಕವನ್ನೇ ಹೊಂದುವರು.

೩೨–೩೪. ಬ್ರಹ್ಮನಿಂದಲೇ ಉಪದೇಶಮಾಡಲ್ಪಟ್ಟ, ಬಹಳ ಪ್ರಾಚೀನವಾದ ಈ ಧರ್ಮವು ಎಲ್ಲಾ ಲೋಕಕ್ಕೂ ಕ್ಷೇಮವನ್ನುಂಟು ಮಾಡುವುದಾಗಿದೆ. ಅದನ್ನು ಈಗ ಹೇಳುವೆನು. ಗುರುವಿನ ಉಪದೇಶ ವನ್ನು ಪಡೆದ, ಶಾಸ್ತ್ರೋಕ್ತ ಕ್ರಮದಲ್ಲಿ ನಡೆಯುವ, ಜ್ಞಾನವೃದ್ಧರೂ ಮತ್ತು ವಯೋವೃದ್ಧರೂ ಆದವರಿಗೆ ಶಿಷ್ಯನಾದವನು ಎದ್ದು ನಮಸ್ಕಾ ರವೇ ಮೊದಲಾದ ಸತ್ಕಾರವನ್ನು ಮಾಡಬೇಕು. ಎಲ್ಲೈ ಬ್ರಾಹ್ಮಣ ಶ್ರೇಷ್ಠರೇ, ಶಿಷ್ಯನು ಮೂರು ಸಲ ಪ್ರದಕ್ಷಿಣೆಮಾಡಿ, ಪೂಜ್ಯನಾದ ಬ್ರಾಹ್ಮಣನಾದ ಗುರುವಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಬೇಕು.

೩೫–೩೭. ಹಾಗೆಯೇ ಅವರಂತೆಯೇ ಹಿರಿಯರಾದ ಜನರೂ ಶಿಷ್ಯನ ನಮಸ್ಕಾರಕ್ಕೆ ಯೋಗ್ಯರು. ಬ್ರಾಹ್ಮಣನು ತನ್ನ ಶ್ರೇಷ್ಠವಾದ ಯೋಗದ ಸಿದ್ಧಿಯನ್ನು ಅಪೇಕ್ಷಿಸುವುದಾದರೆ, ಗುರುವಿನ ಅಪ್ಪಣೆ

ಧಾತು ಶೂನ್ಯ ಬಿಲಕ್ಷೇತ್ರ ಕ್ಷುದ್ರ ಮಂತ್ರೋಪ ಜೀವನಂ ।
ವಿಷಗ್ರಹ ವಿಡಂಬಾದೀ ನ್ವರ್ಜಯೇ ತ್ಸರ್ವಯತ್ನತಃ ॥೩೬॥

ಕೈತವಂ ವಿತ್ತಶಾಠ್ಯಂ ಚ ಪೈಶುನ್ಯಂ ವರ್ಜಯೇತ್ಸದಾ ।
ಅತಿಹಾಸ ಮವಷ್ಟಂಭಂ ಲೀಲಾ ಸ್ವೇಚ್ಛಾಪ್ರವರ್ತನಂ ॥೩೭॥

ವರ್ಜಯೇತ್ಸರ್ವಯತ್ನೇನ ಗುರೂಣಾ ಮಪಿ ಸಂನಿಧೌ ।
ತದ್ವಾಕ್ಯಪ್ರತಿಕೂಲಂ ಚ ಅಯುಕ್ತಂ ವೈ ಗುರೋರ್ವಚಃ ॥೩೮॥

ನ ವದೇ ತ್ಸರ್ವ ಯತ್ನೇನ ಅನಿಷ್ಟಂ ನ ಸ್ಮರೇತ್ಸದಾ ।
ಯತೀನಾ ಮಾಸನಂ ವಸ್ತ್ರಂ ದಂಡಾದ್ಯಂ ಪಾದುಕೇ ತಥಾ ॥೩೯॥

---

ಯನ್ನು ಮೀರಬಾರದು. ಶಿಷ್ಯನು ರಸ, ಗಂಧಕ, ಪಾಷಾಣ, ಮುಂತಾದ ಧಾತುವಾದದ ಪ್ರಯೋಗಗಳನ್ನೂ ಮತ್ತು ನಾಸ್ತಿಕವಾದಗಳನ್ನೂ, ಊಷರಭೂಮಿಯಲ್ಲಿ ವಾಸಮಾಡುವುದೂ, ಭೂತಪ್ರೇತಗಳನ್ನು ವಶ ಮಾಡಿಕೊಳ್ಳುವ ಮಂತ್ರಗಳನ್ನೂ ಅವಲಂಬಿಸಿ ಜೀವಿಸುವುದು, ವಿಷ ದಿಂದ ಕೂಡಿದ ಹಾವೇ ಮೊದಲಾದುವನ್ನು ಹಿಡಿಯುವ ಮಂತ್ರಗಳನ್ನು ತಿಳಿದುಕೊಳ್ಳುವುದು, ಇತರರನ್ನು ಅಣಕಿಸುವುದು, ಇವೇ ಮೊದಲಾ ದವುಗಳಿಂದ ಜೀವಿಕೆಯನ್ನು ಸಂಪಾದಿಸುವುದು ಮುಂತಾದವನ್ನೂ ಯಾವಾಗಲೂ ಬಿಡಬೇಕು. ಅಲ್ಲದೇ ಮೋಸ, ದುಡ್ಡಿನ ವಿಷಯದಲ್ಲಿ ದ್ರೋಹ, ಚಾಡಿಕೋರತನ, ಇವುಗಳನ್ನೂ ಬಿಡಬೇಕು. ಬಹಳ ನಗು ವುದು, ಕೆಟ್ಟ ಕೆಲಸಗಳನ್ನು ಆರಂಭಿಸುವುದು, ಆಟಕ್ಕಾಗಿ ತನ್ನ ಇಚ್ಛೆ ಬಂದಂತೆ ವರ್ತಿಸುವುದು, ಇವುಗಳನ್ನೂ ಬಿಡಬೇಕು.

೩೮–೪೦. ಶಿಷ್ಯನು ಗುರುಗಳ ಸಂನಿಧಿಯಲ್ಲಿ ಸಕಲ ಪ್ರಯತ್ನ ದಿಂದಲೂ, ಅವರ ಮಾತಿಗೆ ವಿರುದ್ಧವಾಗಿ ಮಾತನಾಡಬಾರದು. ಅವರ ಮಾತಿಗೆ ಪ್ರತಿಯಾಗಿ ನಡೆಯಲೂ ಬಾರದು. ಶಿಷ್ಯನು ತನ್ನ ಸರ್ವ ಪ್ರಯತ್ನ ದಿಂದಲೂ, ಅವರಿಗೆ ಕೆಡುಕನ್ನು ಬಯಸುವುದಾಗಲಿ, ಅದನ್ನು ಸ್ಮರಿಸುವುದಾಗಲಿ, ಇವನ್ನೂ ಮಾಡಕೂಡದು. ಯತಿಗಳಿಗೆ ಸೇರಿದ ಆಸನ, ಬಟ್ಟೆ, ದಂಡಕೋಲು, ಮೊದಲಾದುವು, ಪಾದರಕ್ಷೆಗಳು, ಹಾರ,

ಮಾಲ್ಯಂ ಚ ಶಯನ ಸ್ಥಾನಂ ಪಾತ್ರಂ ಛಾಯಾಂ ಚ ಯತ್ನತಃ ।
ಯಜ್ಞೋಪ ಕರಣಾಂಗಂ ಚ ಸ ಸ್ಪೃಶೇಚ್ಛೈ ಪದೇನ ಚ ॥೪೦॥
ದೇವದ್ರೋಹಂ ಗುರುದ್ರೋಹಂ ನ ಕುರ್ಯಾತ್ಸರ್ವಯತ್ನತಃ ।
ಕೃತ್ವಾ ಪ್ರಮಾದತೋ ವಿಪ್ರಾಃ ಪ್ರಣವಸ್ಯಾಯುತಂ ಜಪೇತ್ ॥
ದೇವದ್ರೋಹ ಗುರುದ್ರೋಹಾತ್ಕೋಟಿ ಮಾತ್ರೇಣ ಶುಧ್ಯತಿ ।
ಮಹಾಪಾತಕ ಶುದ್ಧ್ಯರ್ಥಂ ತಥೈವ ಚ ಯಥಾ ವಿಧಿ ॥೪೨॥
ಪಾತಕೀ ಚ ತದರ್ಧೇನ ಶುಧ್ಯತೇ ವೃತ್ತವಾನ್ಯದಿ ।
ಉಪ ಪಾತಕಿನಃ ಸರ್ವೇ ತದರ್ಧೇನೈವ ಸುವ್ರತಾಃ ॥೪೩॥
ಸಂಧ್ಯಾ ಲೋಪೇ ಕೃತೇ ವಿಪ್ರಃ ತ್ರಿರಾವೃತ್ತ್ಯೈವ ಶುಧ್ಯತಿ ।
ಆಹ್ನಿಕ ಚ್ಛೇದನೇ ಜಾತೇ ಶತಮೋಘಮುದಾಹೃತಂ ॥೪೪॥

---

ಮಲಗುವಸ್ಥಳ, ಕಮಂಡಲು, ನೆರಳಿನಲ್ಲಿ ಜಾಗ, ಯಾಗಕ್ಕೆ ಬೇಕಾದ ಸಾಮಾನುಗಳು, ಇವು ಯಾವುದನ್ನೂ ಕಾಲಿನಿಂದ ಮುಟ್ಟ ಕೂಡದು

೪೧–೪೩. ಯಾವಾಗಲೂ ದೇವರ ವಿಷಯದಲ್ಲಿ ದ್ರೋಹವನ್ನಾಗಲಿ, ಗುರುವಿನ ವಿಷಯದಲ್ಲಿ ದ್ರೋಹವನ್ನಾಗಲೀ, ಮನುಷ್ಯನು ಸರ್ವ ಪ್ರಯತ್ನ ದಿಂದಲೂ ಬಿಡಬೇಕು. ಎಲೈ ಬ್ರಾಹ್ಮಣರೇ, ಅಕಸ್ಮಾತ್ತು ಇವುಗಳು ನಡೆದುಹೋದರೆ, ಹತ್ತು ಸಹಸ್ರ ಸಲ ಓಂ ಕಾರವನ್ನು ಜಪಿಸಬೇಕು. ದೇವದ್ರೋಹ, ಗುರುದ್ರೋಹಗಳು ನಡೆದಿದ್ದರೆ, ಒಂದು ಕೋಟಿ ಜಪ ದಿಂದ ಆ ಮಹಾಪಾಪಗಳು ಹೋಗುವುವು. ಈ ಮಹಾಪಾಪ ನಿವಾರಣೆ ಗಾಗಿ, ಶಾಸ್ತ್ರೋಕ್ತ ಕ್ರಮದಲ್ಲಿ ಆ ರೀತಿಯ ಪ್ರಾಯಶ್ಚಿತ್ತವನ್ನು ಮಾಡ ಬೇಕು. ಸಾಮಾನ್ಯ ಪಾಪವನ್ನು ಮಾಡಿದ್ದರೆ ಸದಾಚಾರ ಗುಣಾಢ್ಯನಾದ ಈ ಮನುಷ್ಯನು, ಇದರ ಅರ್ಧ ಜಪ ಮಾಡಿದರೆ ಶುದ್ಧನಾಗುವನು. ಅದಕ್ಕಿಂತಲೂ ಕಡಿಮೆ ಪಾಪವನ್ನು ಮಾಡಿದ್ದರೆ, ಅದಕ್ಕಿಂತಲೂ ಅರ್ಧ ಜಪಮಾಡಿದರೆ ಸಾಕಾಗಿರುತ್ತದೆ.

೪೪–೪೬. ಬ್ರಾಹ್ಮಣನು ಸಂಧ್ಯೆಯನ್ನು ಮಾಡುವುದನ್ನು ಅಕ ಸ್ಮಾತ್ ಬಿಟ್ಟರೆ, ಮೂರು ರಾತ್ರಿಗಳಲ್ಲಿ ಪ್ರಣವ ಸಹಿತ ಗಾಯತ್ರೀ ಜಪವನ್ನು ಮಾಡಿದರೆ ಆ ಪಾಪದಿಂದ ಬಿಡುಗಡೆಯಾಗಿ ಶುದ್ಧಿಯನ್ನು

ಲಂಘನೇ ಸಮಯಾನಾಂ ತು ಅಭಕ್ಷ್ಯಸ್ಯ ಚ ಭಕ್ಷಣೇ ।
ಅವಾಚ್ಯ ವಾಚನಂ ಚೈವ ಸಹಸ್ರಾಚ್ಛುದ್ಧಿರುಚ್ಯತೇ ॥೪೫॥
ಕಾಕೋಲೂಕ ಕಪೋತಾನಾಂ ಪಕ್ಷಿಣಾಮಪಿ ಘಾತನೇ ।
ಶತಮಷ್ಟೋತ್ತರಂ ಜಪ್ತ್ವಾ ಮುಚ್ಯತೇ ನಾತ್ರ ಸಂಶಯಃ ॥೪೬॥
ಯಃ ಪುನಸ್ತತ್ತ್ವವೇತ್ತಾ ಚ ಬ್ರಹ್ಮವಿದ್ಬ್ರಾಹ್ಮಣೋತ್ತಮಃ ।
ಸ್ಮರಣಾಚ್ಛುದ್ಧಿಮಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ॥೪೭॥
ನೈವಮಾತ್ಮವಿದಾಮಸ್ತಿ ಪ್ರಾಯಶ್ಚಿತ್ತಾನಿ ಚೋದನಾ ।
ವಿಶ್ವಸ್ಯೈವ ಹಿ ತೇ ಶುದ್ಧಾ ಬ್ರಹ್ಮವಿದ್ಯಾ ವಿದೋ ಜನಾಃ ॥೪೮॥

---

ಹೊಂದುವನು. ಸಂಧ್ಯಾವಂದನ ಕರ್ಮವನ್ನು ಅಕಸ್ಮಾತ್ ಅಜ್ಞಾನದಿಂದ ಬಿಟ್ಟಿದ್ದರೆ ನೂರುಸಲ ಗಾಯತ್ರೀ ಜಪ ಮಾಡಬೇಕು. ಜನಗಳಿಗೆ ಏನನ್ನಾದರೂ ಪ್ರತಿಜ್ಞೆ ಮಾಡಿ, ಅದನ್ನು ನೆರವೇರಿಸದೇ ಇದ್ದರೆ, ತಿನ್ನಬಾರದ್ದನ್ನು ತಿಂದಿದ್ದರೆ ಅಥವಾ ಆಡಬಾರದ್ದನ್ನು ಆಡಿದ್ದರೆ, ಪ್ರತ್ಯೇಕವಾಗಿ ಸಾವಿರಸಲ ಗಾಯತ್ರೀ ಜಪವನ್ನು ಮಾಡಿದರೆ ಈ ಪಾಪಗಳು ತೊಲಗುವುವು. ಕಾಗೆ, ಗೂಬೆ, ಪಾರಿವಾಳಗಳನ್ನು ಕೊಂದಿದ್ದರೆ, ಮನುಷ್ಯನು ನೂರೆಂಟುಸಲ ಗಾಯತ್ರೀಜಪ ಮಾಡಿದರೆ ಆ ಪಾಪದಿಂದ ಬಿಡುಗಡೆಹೊಂದುತ್ತಾನೆ.

೪೭. ತತ್ವಜ್ಞಾನಿಯೂ, ಬ್ರಹ್ಮಜ್ಞಾನಿಯೂ, ಬ್ರಾಹ್ಮಣಶ್ರೇಷ್ಠನೂ ಆದವನಿಗೆ ಇಂಥಾ ಪಾಪಗಳು ಸಂಘಟಿಸಿದರೆ ಕೇವಲ ಶಿವ ಸ್ಮರಣೆಯಿಂದಲೇ ಆ ಪಾಪಗಳಿಂದ ಅವನು ದೂರನಾಗುವನೆಂಬುವುದರಲ್ಲಿ ಸಂದೇಹವಿಲ್ಲ.

೪೮–೫೦. ಆತ್ಮಜ್ಞಾನಿಗಳಿಗಾವರೋ ಈ ವಿಧವಾದ ಪ್ರಾಯಶ್ಚಿತ್ತಗಳೊಂದೂ ಹೇಳಲ್ಪಟ್ಟಿಲ್ಲ. ಬ್ರಹ್ಮಜ್ಞಾನಿಗಳಾದ ಮನುಷ್ಯರು, ಪ್ರಪಂಚಕ್ಕೇ ಶುದ್ಧಿಯನ್ನುಂಟು ಮಾಡುವವರೂ, ಯೋಗಧ್ಯಾನದಲ್ಲಿ ನಿರತರಾದವರೂ, ಯಾವ ವಿಧವಾದ ಸಂಸಾರದ ಸಂಕಟಗಳನ್ನೂ ಹಚ್ಚಿಕೊಳ್ಳದೇ, ಅಪರಂಜಿಯ ಚಿನ್ನದಂತೆ, ಯಾವಾಗಲೂ ಶುದ್ಧಭಾವವುಳ್ಳವರೂ ಆಗಿರು

**ಯೋಗಧ್ಯಾನೈಕ ನಿಷ್ಠಾಶ್ಚ ನಿರ್ಲೇಪಾಃ ಕಾಂಚನಂ ಯಥಾ ।**
**ಶುದ್ಧಾನಾಂ ಶೋಧನಂ ನಾಽಸ್ತಿ ವಿಶುದ್ಧಾ ಬ್ರಹ್ಮವಿದ್ಯಯಾ ॥೪೯॥**

**ಉದ್ಧೃತಾಽನುಷ್ಣಫೇನಾಭಿಃ ಪೂತಾಭಿರ್ವಸ್ತ್ರ ಚಕ್ಷುಷಾ ।**
**ಅದ್ಭಿಃ ಸಮಾಚರೇತ್ಸರ್ವಂ ವರ್ಜಯೇತ್ಕಲುಷೋದಕಂ ॥೫೦॥**

**ಗಂಧವರ್ಣ ರಸೈ ದುರ್ಷ್ಟ ಮಶುಚಿಸ್ಥಾನ ಸಂಸ್ಥಿತಂ ।**
**ಪಂಕಾಶ್ಮದೂಷಿತಂ ಚೈವ ಸಾಮುದ್ರಂ ಪಲ್ವಲೋದಕಂ ॥೫೧॥**

**ಸಶೈವಾಲಂ ತಥಾಽನ್ಯೈರ್ವಾ ದೋಷೈ ದುರ್ಷ್ಟಂ ವಿವರ್ಜಯೇತ್ ।**
**ವಸ್ತ್ರ ಶೌಚಾಽನ್ವಿತಃ ಕುರ್ಯಾತ್ಸರ್ವ ಕಾರ್ಯಾಣಿ ವೈ ದ್ವಿಜಾಃ ॥೫೨॥**

**ನಮಸ್ಕಾರಾದಿಕಂ ಸರ್ವಂ ಗುರು ಶುಶ್ರೂಷಾದಿಕಂ ।**
**ವಸ್ತ್ರಶೌಚ ವಿಹೀನಾಽತ್ಮಾ ಹ್ಯಶುಚಿ ರ್ನಾತ್ರ ಸಂಶಯಃ ॥೫೩॥**

---

ತ್ತಾರೆ. ಶುದ್ಧರಾದ ಅಂತಹ ಬ್ರಹ್ಮಜ್ಞಾನಿಗಳಿಗೆ ಪುನಃ ಶುದ್ಧಿಯು ಬೇಕಾಗಿರುವುದಿಲ್ಲ. ಅವರು ಬ್ರಹ್ಮಜ್ಞಾನದಿಂದಲೇ ಪರಿಶುದ್ಧರಾಗಿರುತ್ತಾರೆ. ಮೇಲಕ್ಕೆ ತೆಗೆದ, ಬಿಸಿಯಾಗಿಲ್ಲದ, ನೊರೆಯಿಲ್ಲದಿರುವ ಮತ್ತು ಬಟ್ಟೆಯಿಂದ ಪರಿಶೋಧಿಸಲ್ಪಟ್ಟ ನೀರಿನಿಂದಲೇ ಎಲ್ಲಾ ಶಾಸ್ತ್ರೋಕ್ತವಾದ ಕರ್ಮಗಳನ್ನೂ ನೆರವೇರಿಸಬೇಕು. ಕೊಳಕಾದ ನೀರನ್ನು ಉಪಯೋಗಿಸಬಾರದು.

೫೧–೫೩. ದುರ್ಗಂಧದಿಂದ ಕೂಡಿದ, ಅಸಹ್ಯವಾಗಿ ಕಾಣುವ, ಕೆಟ್ಟಬಣ್ಣ, ರುಚಿಗಳುಳ್ಳ ದ್ರವಗಳಿಂದ ಕೆಟ್ಟಿರುವ, ಅಶುದ್ಧವಾದ ಸ್ಥಳದಲ್ಲಿರುವ, ಕೆಸರು, ಮಣ್ಣು, ಕಲ್ಲುಗಳಿಂದ ಕೂಡಿದ, ಅಥವಾ ಸಮುದ್ರದ, ಸಣ್ಣ ಕುಂಟೆಯ, ಪಾಚಿಯೊಂದಿಗೆ ಕೂಡಿರುವ, ಅಥವಾ ಇನ್ನು ಯಾವುದಾದರೂ ದೋಷಗಳಿಂದ ಕೆಟ್ಟಿರುವ, ನೀರನ್ನು ಸರ್ವಥಾ ಕರ್ಮಗಳಲ್ಲಿ ಉಪಯೋಗಿಸಬಾರದು. ಬಟ್ಟೆಯನ್ನು ಚೆನ್ನಾಗಿ ಒಗೆದು ಶುದ್ಧಿಮಾಡಿಕೊಂಡು, ಎಲ್ಲಾ ಶಾಸ್ತ್ರೋಕ್ತ ಕರ್ಮಗಳನ್ನೂ ಮಾಡಬೇಕು. ಶುದ್ಧವಾದ ಬಟ್ಟೆಯನ್ನುಡದೆ, ಬ್ರಾಹ್ಮಣನು ಗುರುವಿಗೆ, ನಮಸ್ಕಾರ, ಸೇವೆ, ಮುಂತಾದವನ್ನು ಮಾಡಿದರೆ, ಅವನ ಕಾರ್ಯಗಳು ಸಫಲವಾಗಲಾರವು. ಮತ್ತು ಅವನು ಅಪರಿಶುದ್ಧನೆಂದೇ ಪರಿಗಣಿಸಲ್ಪಡುವನು.

ದೇವಕಾರ್ಯೇಷು ಯುಕ್ತಾನಾಂ ಪ್ರತ್ಯಹಂ ಶೌಚ ಮಿಷ್ಯತೇ ।
ಇತರೇಷಾಂ ಹಿ ವಸ್ತ್ರಾಣಾಂ ಶೌಚಂ ಕಾರ್ಯಂ ಮಲಾಗಮೇ ॥೫೪॥

ವರ್ಜಯೇ ತ್ಸರ್ವಯತ್ನೇನ ವಾಸೋಽನ್ಯೈ ರ್ವಿಧೃತಂ ದ್ವಿಜಾಃ ।
ಕೌಶೇಯಾ ವಿಕಯೋ ರೂಕ್ಷೈಃ ಕ್ಷೌಮಾಣಾಂ ಗೌರ ಸರ್ಷಪೈಃ ॥

ಶ್ರೀಫಲೈ ರಂಶು ಪಟ್ಟಾನಾಂ ಕುತುಪಾನಾ ಮರಿಷ್ಟಕೈಃ ।
ಚರ್ಮಣಾಂ ವಿದಲಾನಾಂ ಚ ವೇತ್ರಾಣಾಂ ವಸ್ತ್ರ ವನ್ಮತಂ ॥೫೬॥

ವಲ್ಕಲಾನಾಂ ತು ಸರ್ವೇಷಾಂ ಛತ್ರ ಚಾಮರ ಯೋರಪಿ ।
ಚೈಲವ ಚ್ಛೌಚ ಮಾಖ್ಯಾತಂ ಬ್ರಹ್ಮವಿದ್ಭಿ ರ್ಮುನೀಶ್ವರೈಃ ॥೫೭॥

ಭಸ್ಮನಾ ಶುದ್ಧ್ಯತೇ ಕಾಂಸ್ಯಂ ಕ್ಷಾರೇಣಾಯಸಮುಚ್ಯತೇ ।
ತಾಮ್ರ ಮಾಮ್ಲೇನ ವೈ ವಿಪ್ರಾ ಸ್ತ್ರಪು ಸೀಸಕಯೋರಪಿ ॥೫೮॥

---

೫೪–೫೬. ದೇವಕಾರ್ಯಗಳನ್ನು ಮಾಡುವವನು ಪ್ರತಿನಿತ್ಯವೂ ಶುದ್ಧ ಬಟ್ಟೆಯನ್ನೇ ಧರಿಸಿರಬೇಕು. ಇತರ ಬಗೆಯ ಬಟ್ಟೆಗಳಿಗೆ ಅಶುದ್ಧಿ ಯುಂಟಾದರೆ ಆವಾಗ ಮಾತ್ರ ಕೂಡಲೇ ಅದನ್ನು ಒಗೆದು ಶುದ್ಧಿಮಾಡ ಬೇಕು. ಇವನು ಬೇರೆಯವರುಟ್ಟ ಬಟ್ಟೆಯನ್ನು ಎಂದಿಗೂ ಧರಿಸ ಬಾರದು. ರೇಷ್ಮೆಯ ಅಥವಾ ಕುರಿಯ ತುಪ್ಪಟದ ಬಟ್ಟೆಯನ್ನು ಬಲ ವಾದ ಗಾಳಿಯಿಂದಲೂ, ಪಟ್ಟವಸ್ತ್ರವನ್ನು ಬೆಳ್ಳಗಿರುವ ಸಾಸವೇಕಾಳು ಪುಡಿಯಿಂದಲೂ, ಚಿನ್ನದ ಬಣ್ಣವುಳ್ಳ ಪೀತಾಂಬರಗಳನ್ನು ಬಿಲ್ವಪತ್ರೇ ಕಾಯಿನ ಪುಡಿ, ರಸ, ಇವುಗಳಿಂದಲೂ, ದರ್ಭಾಸನ ಮತ್ತು ಕಂಬಳಿ ಗಳನ್ನು ಮಜ್ಜಿಗೆಯಿಂದಲೂ, ಸಣಬಿನ ಮತ್ತು ಕಿತ್ತಾನಾರಿನ ಬಟ್ಟೆ ಗಳನ್ನು ಅಂಟವಾಳದ ಕಾಯಿಯ ರಸದಿಂದಲೂ, ಶುದ್ಧಿಮಾಡಿದ ವಸ್ತ್ರ ಗಳು ಮೇಲೆಹೇಳಿದ ದೇವಕಾರ್ಯಗಳನ್ನು ಮಾಡುವವನಿಗೆ ಸರ್ವಶ್ರೇಷ್ಠ ಗಳು.

೫೭–೫೯. ಬ್ರಹ್ಮಜ್ಞಾನಿಗಳಾದ ಋಷಿಶ್ರೇಷ್ಠರು, ಎಲ್ಲಾ ವಿಧ ವಾದ ನಾರುಮಡಿಗಳೂ, ಛತ್ರ, ಚಾಮರಗಳೂ, ಇವನ್ನು ರೇಷ್ಮೆವಸ್ತ್ರ ದಂತೆಯೇ ಪರಿಶುದ್ಧ ಮಾಡಬೇಕೆಂದು ಹೇಳಿದ್ದಾರೆ. ಕಂಚು ಬೂದಿ

**ಹೈಮಮುದ್ಭಿಃ ಶುಭಂ ಪಾತ್ರಂ ರೌಪ್ಯ ಪಾತ್ರಂ ದ್ವಿಜೋತ್ತಮಾಃ ।**
**ಮಣ್ಯಶ್ಮ ಶಂಖ ಮುಕ್ತಾನಾಂ ಶೌಚಂ ತೈಜಸ ವತ್ಸ್ಮೃತಂ ॥೫೯॥**
**ಅಗ್ನೇರಪಾಂ ಚ ಸಂಯೋಗಾ ದತ್ಯಂತೋಪ ಹತಸ್ಯ ಚ ।**
**ರಸಾನಾ ಮಿಹ ಸರ್ವೇಷಾಂ ಶುದ್ಧಿ ರುತ್ಪ್ಲವನಂ ಸ್ಮೃತಂ ॥೬೦॥**
**ತೃಣ ಕಾಷ್ಠಾದಿ ವಸ್ತೂನಾಂ ಶುಭೇ ನಾಽಭ್ಯುಕ್ಷಣಂ ಸ್ಮೃತಂ ।**
**ಉಷ್ಣೇನ ವಾರಿಣಾ ಶುದ್ಧಿ ಸ್ತಥಾ ಸ್ರುಕ್ಸ್ರುವಯೋರಪಿ ॥೬೧॥**
**ತಥೈವ ಯಜ್ಞ ಪಾತ್ರಾಣಾಂ ಮುಸಲೋ ಲೂಖಲಸ್ಯ ಚ ।**
**ಶೃಂಗಾಽಸ್ಥಿ ದಾರುದಂತಾನಾಂ ತಕ್ಷಣೇನೈವ ಶೋಧನಂ ॥೬೨॥**

---

ಯಿಂದಲೂ, ಉಪ್ಪಿನಿಂದ ಕಬ್ಬಿಣವೂ, ಹುಣಿಸೆಯ ಹಣ್ಣಿನಿಂದ ತಾಮ್ರವೂ, ತ್ರಪು ಎಂಬ ಲೋಹ ತವರ ಮತ್ತು ಸೀಸ, ಇವು ಹುಣಿಸೆಯ ಹಣ್ಣಿನಿಂದಲೂ, ಶುದ್ಧಿಯನ್ನು ಹೊಂದುತ್ತವೆ. ಚಿನ್ನದ ಪದಾರ್ಥವು ನೀರಿನಿಂದಲೂ, ಬೆಳ್ಳಿಯ ಪದಾರ್ಥವು ನೀರಿನಿಂದಲೂ, ಶುದ್ಧಿ ಹೊಂದುತ್ತವೆ. ಮಣಿ, ಶಂಖ, ಮುತ್ತು ಇವು ಯಾವಾಗಲೂ ಚಿನ್ನಬೆಳ್ಳಿಗಳಂತೆ ಶುದ್ಧವಾಗುತ್ತವೆಯೆಂದು ತಿಳಿಯಬೇಕು.

೬೦–೬೨. ಬೆಂಕಿ ಮತ್ತು ನೀರಿನ ಸಂಬಂಧದಿಂದ, ಬಹಳ ಚೆನ್ನಾಗಿ ಕಾದ ದ್ರವ ಪದಾರ್ಥಗಳಿಗೆ ಅವನ್ನು ಕುದಿಯಿಸುವುದರಿಂದಲೇ ಶುದ್ಧಿಯಾಗುವುದು. ಹುಲ್ಲು, ಸೌದೆ, ಮೊದಲಾದ ಪದಾರ್ಥಗಳಿಗೆ, ಮಂಗಳಕರವಾದ ಬಿಸಿಯಾದ ನೀರಿನಿಂದ ಪ್ರೋಕ್ಷಣೆ ಮಾಡಿದರೆ ಶುದ್ಧಿಯುಂಟಾಗುವುದು. ಹಾಗೆಯೇ ಸ್ರುಕ್, ಸ್ರುವ, ಎಂದು ಮುಂತಾದ ಯಾಗದಲ್ಲಿ ಉಪಯೋಗಿಸುವ ಪಾತ್ರೆ ಮತ್ತು ಹೋಮದ್ರವ್ಯಗಳಿಗೆ ಸ್ವಸ್ತಿ ವಾಚನ ಮಂತ್ರದಿಂದ ಪವಿತ್ರವಾದ ಜಲ ಪ್ರೋಕ್ಷಣದಿಂದ ಶುದ್ಧಿಯುಂಟಾಗುವುದು. ಹಾಗೆ ಮಾಡೋಣದರಿಂದಲೇ ಯಾಗದ ಇತರ ಪಾತ್ರೆಗಳಿಗೂ ಒನಕೆ, ಹಾರೆ, ಮುಂತಾದ ಸಂಸಾರದ ಪದಾರ್ಥಗಳಿಗೂ ಶುದ್ಧಿಯುಂಟಾಗುವುದು ಕೊಂಬು, ಮೂಳೆ, ಮರ. ಆನೆಯಕೊಂಬು ದಂತದಿಂದ ಮಾಡಿರುವ ಪದಾರ್ಥಗಳಿಗೆ ಕೆತ್ತೋಣದರಿಂದಲೇ ಶುದ್ಧಿಯುಂಟಾಗುವುದು.

ಸಂಹತಾನಾಂ ಮಹಾಭಾಗಾ ದ್ರವ್ಯಾಣಾಂ ಪ್ರೋಕ್ಷಣಂ ಸ್ಮೃತಂ।
ಅಸಂಹತಾನಾಂ ದ್ರವ್ಯಾಣಾಂ ಪ್ರತ್ಯೇಕಂ ಶೌಚ ಮುಚ್ಯತೇ ॥೬೩॥
ಅಭುಕ್ತರಾಶಿಧಾನ್ಯಾನಾ ಮೇಕದೇಶಸ್ಯ ದೂಷಣೇ।
ತಾವನ್ಮಾತ್ರಂ ಸಮುದ್ಧೃತ್ಯ ಪ್ರೋಕ್ಷಯೇ ದ್ದ್ವೈ ಕುಶಾಂಭಸಾ॥೬೪॥
ಶಾಕಮೂಲ ಫಲಾದೀನಾಂ ಧಾನ್ಯವಚ್ಛುದ್ಧಿ ರಿಷ್ಯತೇ।
ಮಾರ್ಜನೋನ್ಮಾರ್ಜನೈ ರ್ವೇಶ್ಮ ಪುನಃ ಪಾಕೇನ ಮೃನ್ಮಯಂ ॥೬೫॥
ಉಲ್ಲೇಖನೇನಾಂಜನೇನ ತಥಾ ಸಂಮಾರ್ಜನೇನ ಚ।
ಗೋ ನಿವಾಸೇನ ವೈ ಶುದ್ಧಾ ಸೇಚನೇನ ಧರಾ ಸ್ಮೃತಾ ॥೬೬॥

---

೬೩–೬೫. ಎಲೈ ಮಹನೀಯರಾದ ಬ್ರಾಹ್ಮಣರೇ, ಒಟ್ಟಿಗೇ ಸೇರಿಸಿರುವ ಕಂತೆ ಹೊರೆ ಮುಂತಾದ ಪದಾರ್ಥಗಳಿಗೆ ಪ್ರೋಕ್ಷಣೆ ಮಾಡುವುದರಿಂದ ಶುದ್ಧಿಯನ್ನು ಮಾಡಬೇಕೆಂದು ಹೇಳಿದೆ. ಪದಾರ್ಥಗಳೆಲ್ಲವೂ ಒಟ್ಟಿಗೆ ಇಲ್ಲದಿದ್ದರೆ ಬೇರೆ ಬೇರೆಯಾಗಿ ಶುದ್ಧಿಮಾಡಬೇಕು. ಉಪಯೋಗಿಸದೇ ಇರುವ ಧಾನ್ಯರಾಶಿಗಳ ಒಂದು ಭಾಗಕ್ಕೆ ಏನಾದರೂ ಅಶುದ್ಧಿಯುಂಟಾದರೆ, ಅಷ್ಟುಮಾತ್ರ ಬೇರೆ ತೆಗೆದು ದರ್ಭೆಯ ನೀರಿನಿಂದ ಪ್ರೋಕ್ಷಣೆಮಾಡಬೇಕು. ಸಪ್ಪು, ಗೆಣಸು, ಗೆಡ್ಡೆಗಳು, ಹಣ್ಣುಗಳಿಗೆ, ಧಾನ್ಯವನ್ನು ಶುದ್ಧಿಮಾಡುವ ರೀತಿಯಲ್ಲಿಯೇ ಶುದ್ಧಿಯನ್ನು ಮಾಡಬೇಕೆಂದು ಹೇಳಿದೆ. ಮನೆಯನ್ನು ಚೆನ್ನಾಗಿ ಗುಡಿಸಿ, ಸಾರಿಸಿ ಸ್ವಸ್ತಿವಾಚನ ಮಂತ್ರವನ್ನು ಹೇಳಿ ಜಲದಿಂದ ಪ್ರೋಕ್ಷಣೆಯನ್ನು ಮಾಡಿದರೆ ಶುದ್ಧಿಯಾಗುವುದು. ಮಣ್ಣಿನ ಪಾತ್ರೆಗಳನ್ನು ಪುನಃ ಬೇಯಿಸುವುದರಿಂದ ಶುದ್ಧಿಯಾಗುವುದು.

೬೬–೬೮. ಅಗೆಯುವುದರಿಂದ, ಗೋಮಯವನ್ನು ಹಚ್ಚುವುದರಿಂದ, ಕಸ ಗುಡಿಸುವುದರಿಂದ, ಗೋವುಗಳನ್ನು ಕಟ್ಟುವುದರಿಂದ ಭೂಮಿಯು ಪರಿಶುದ್ಧವಾಗುವುದು. ಅಲ್ಲದೇ ನೀರನ್ನು ಚುಮುಕಿಸಿದರೂ ಭೂಮಿಯು ಶುದ್ಧವಾಗುವುದು. ಕೆರೆ ಹೊಳೆ ಮುಂತಾದ ಭೂಮಿಯಲ್ಲಿರುವ ನೀರು ಶುದ್ಧವಾದುದು. ಯಾವ ನೀರನ್ನು ಕುಡಿದು ಹಸು

ಭೂಮಿಸ್ಥ ಮುದಕಂ ಶುದ್ಧಂ ವೈತೃಷ್ಣ್ಯಂ ಯತ್ರ ಗೌ ರ್ವ್ರಜೇತ್ ।
ಅವ್ಯಾಪ್ತಂ ಯದ ಮೇಧ್ಯೇನ ಗಂಧ ವರ್ಣ ರಸಾಽನ್ವಿತಂ ॥೬೭॥
ವತ್ಸಃ ಶುಚಿಃ ಪ್ರಸ್ರವಣೇ ಶಕುನಿಃ ಫಲ ಪಾತನೇ ।
ಸ್ವದಾರಾಽಸ್ಯಂ ಗೃಹಸ್ಥಾನಾಂ ರತೌ ಭಾರ್ಯಾಽಭಿ ಕಾಂಕ್ಷಯಾ ॥೬೮॥
ಹಸ್ತಾಭ್ಯಾಂ ಕ್ಷಾಲಿತಂ ವಸ್ತ್ರಂ ಕಾರುಣಾ ಚ ಯಥಾ ವಿಧಿ ।
ಕುಶಾಂಬುನಾ ಸು ಸಂಪ್ರೋಕ್ಷ್ಯ ಗೃಹ್ಣೀಯಾ ದ್ಧರ್ಮ ವಿತ್ತಮಃ ॥
ಪಣ್ಯಂ ಪ್ರಸಾರಿತಂ ಚೈವ ವರ್ಣಾಶ್ರಮ ವಿಭಾಗಶಃ ।
ಶುಚಿ ರಾಕರಜಂ ತೇಷಾಂ ಶ್ವಾ ಮೃಗ ಗ್ರಹಣೇ ಶುಚಿಃ ॥೭೦॥

---

ಗಳಿಗೆ ದಣಿವಾರಿರುವುದೋ ಆ ನೀರೂ, ಮಲದಿಂದ ಕೂಡಿಲ್ಲದ, ಸುಗಂಧ, ಸ್ವಚ್ಛತೆಗಳಿಂದ ಕೂಡಿದ, ನೀರೂ ಶುದ್ಧವಾದುದು. ಹಾಲು ಕರೆಯುವಾಗ ಹತ್ತಿರವಿರುವ ಕರುವು ಕುಡಿದು ಮಿಗುವ ಹಾಲೂ ಪರಿಶುದ್ಧ ವಾದುದು. ಗಿಣಿ ಮುಂತಾದ ಹಕ್ಕಿಯು ಬೀಳಿಸಿದ ಹಣ್ಣು ಪರಿಶುದ್ಧ ವಾದುದು. ತನ್ನ ಹೆಂಡತಿಯಲ್ಲಿ ಪ್ರೀತಿಮಮತೆಯಿಂದ ಗೃಹಸ್ಥನು ಧರ್ಮವಾದ ರೀತಿಯಲ್ಲಿ ವಿಹರಿಸುವಾಗ ಅವಳ ಮುಖವೂ ಶುದ್ಧವಾದುದೇ ಆಗಿರುತ್ತದೆ.

೬೯-೭೦. ಅಗಸನ ಕೈಯಿಂದ ಒಗೆಯಲ್ಪಟ್ಟ ಬಟ್ಟೆಗಳನ್ನು ಶಾಸ್ತ್ರೋಕ್ತ ಕ್ರಮದಲ್ಲಿ ದರ್ಭೆಯ ತುದಿಯ ನೀರಿನಿಂದ ಪ್ರೋಕ್ಷಣೆ ಮಾಡಿ, ಧರ್ಮವನ್ನು ತಿಳಿದ ಬ್ರಾಹ್ಮಣನು ಸ್ವೀಕರಿಸಬೇಕು. ವರ್ಣಾ ಶ್ರಮ ವಿಭಾಗಕ್ಕೆ ಅನುಸರಿಸಿ, ಹರಡಿರುವ ಅಂಗಡಿಯ ಸಾಮಾನುಗಳೂ ಗಣಿಯಿಂದ ದೊರೆಯುವ ಲೋಹಗಳೂ, ಆಯಾಯಾ ವರ್ಣಾಶ್ರಮ ದವರಿಗೆ ಪರಿಶುದ್ಧವೇ ಆಗಿರುತ್ತವೆ. ಅಲ್ಲದೆ ನಾಯಿ, ಮುಂತಾದ ಪ್ರಾಣಿಗಳೂ ಮೃಗಗಳ ಬೇಟೆಯ ಸಮಯದಲ್ಲಿ ಶುದ್ಧವೆಂದು ಪರಿಗಣಿ ಸಲ್ಪಡುತ್ತವೆ. ಎಲೈ ಬ್ರಾಹ್ಮಣ ಶ್ರೇಷ್ಠರೇ, ಒಳ್ಳೆಯ ಮರದ ನೆರಳೂ, ವೇದಾಧ್ಯಯನ ಮಾಡುವಾಗ ಬಾಯಿಂದ ಬೀಳಬಹುದಾದ ನೀರಿನ

ಛಾಯಾ ಚ ವಿಪ್ರುಷೋ ವಿಪ್ರಾ ಮಕ್ಷಿಕಾಽದ್ಯಾ ದ್ವಿಜೋತ್ತಮಾಃ ।
ರಜೋ ಭೂರ್ವಾಯು ರಗ್ನಿಶ್ಚ ಮೇಧ್ಯಾನಿ ಸ್ಪರ್ಶನೇ ಸದಾ ॥೭೧॥

ಸುಪ್ತ್ವಾ ಭುಕ್ತ್ವಾಚ ವೈ ವಿಪ್ರಾಃ ಕ್ಷುತ್ವಾ ಪೀತ್ವಾಚ ವೈ ತಥಾ ।
ಷ್ಠೀವಿತ್ವಾಽಧ್ಯಯನಾಽದೌ ಚ ಶುಚಿ ರಪ್ಯಾಚಮೇ ತ್ಪುನಃ ॥೭೨॥

ಪಾದೌ ಸ್ಪೃಶಂತಿ ಯೇ ಚಾಽಪಿ ಪರಾಽಚ ಮನ ಬಿಂದವಃ ।
ತೇ ಪಾರ್ಥಿವೈಃ ಸಮಾ ಜ್ಞೇಯಾ ನ ತೈರಪ್ರಯತೋ ಭವೇತ್ ॥

ಕೃತ್ವಾ ಚ ಮೈಥುನಂ ಸ್ಪೃಷ್ಟ್ವಾ ಪತಿತಂ ಕುಕ್ಕುಟಾದಿಕಂ ।
ಸೂಕರಂ ಚೈವ ಕಾಕಾದಿ ಶ್ವಾನಮುಷ್ಟ್ರಂ ಖರಂ ತಥಾ ॥೭೪॥

ಯೂಪಂ ಚಾಂಡಾಲಕಾದ್ಯಾಂಶ್ಚ ಸ್ಪೃಷ್ಟ್ವಾ ಸ್ನಾನೇನ ಶುದ್ಧ್ಯತಿ ।
ರಜಸ್ವಲಾಂ ಸೂತಿಕಾಂ ಚ ನ ಸ್ಪೃಶೇ ದಂತ್ಯಜಾ ಮಪಿ ॥೭೫॥

---

ತುಂತುರು, ಹಾಗೆಯೇ ಅನಿವಾರ್ಯವಾದ ನೊಣವೇ ಮೊದಲಾದವೂ ಅಶುದ್ಧಿಯನ್ನುಂಟುಮಾಡಲಾರವು. ಧೂಳು, ಭೂಮಿ, ವಾಯು, ಬೆಂಕಿ, ಇವುಗಳು ಯಾವಾಗಲೂ ಮುಟ್ಟುವುದಕ್ಕೆ ಯೋಗ್ಯವೂ ಮತ್ತು ಶುದ್ಧವೂ ಆಗಿರುವುವು. ಎಲೈ ಬ್ರಾಹ್ಮಣರೇ, ಮಲಗಿ ಎದ್ದಮೇಲೂ ಊಟಮಾಡಿದ ಮೇಲೆಯೂ ಮತ್ತು ತಿಂದು, ಕುಡಿದಮೇಲೆ, ಹಾಗೆಯೇ ಉಗುಳಿದಮೇಲೆ, ವೇದಾಧ್ಯಯನವಾದಮೇಲೆ ಆಚಮನವನ್ನು ಮಾಡಿದರೆ ದ್ವಿಜರು ಶುದ್ಧರಾಗುವರು, ಎಂದು ಶಾಸ್ತ್ರಗಳಲ್ಲಿ ಹೇಳಿದೆ.

೭೩–೭೫. ಇತರರು ಮಾಡಿದ ಆಚಮನದ ನೀರಿನ ತೊಟ್ಟುಗಳು, ಯಾರ ಕಾಲುಗಳ ಮೇಲೆ ಅಕಸ್ಮಾತ್ ಹಾರಿ ಬೀಳುತ್ತವೋ, ಆ ನೀರು ಭೂಮಿಯಲ್ಲಿರುವ ನೀರಿಗೆ ಸಮಾನವೆಂದೂ, ಅದರಿಂದ ಉಂಟಾದ ಸಂಬಂಧದಿಂದ ಅವರು ಅಶುದ್ಧರಾಗುವುದಿಲ್ಲವೆಂದೂ ಭಾವಿಸಬೇಕು. ಅದರಿಂದ ಕರ್ತೃವಿಗೆ ಪಾಪವೇನೂ ಇಲ್ಲವು. ಬ್ರಾಹ್ಮಣನು ಸ್ತ್ರೀಸಂಪರ್ಕವನ್ನು ಮಾಡಿದರೆ, ಭೂಮಿಯಲ್ಲಿ ಬಿದ್ದಿರುವ ಕೋಳಿಯೇ ಮೊದಲಾದುವನ್ನು ಅಕಸ್ಮಾತ್ ಮುಟ್ಟಿದರೆ, ಹಂದಿ, ಕಾಗೆಯೇ ಮೊದಲಾದುವನ್ನಾಗಲಿ, ನಾಯಿ, ಒಂಟೆ, ಕತ್ತೆ, ಇವುಗಳನ್ನಾಗಲಿ ಅಕಸ್ಮಾತ್ ಮುಟ್ಟಿ

**ಸೂತಿಕಾಽಶೌಚ ಸಂಯುಕ್ತಃ ಶಾವಾಽಶೌಚ ಸಮನ್ವಿತಃ ।**
**ಸಂಸ್ಪೃಶೇನ್ನ ರಜಸ್ತಾಸಾಂ ಸ್ಪೃಷ್ಟ್ವಾ ಸ್ನಾತ್ವೈವ ಶುಧ್ಯತಿ ॥೭೬॥**
**ನೈವಾಽಶೌಚಂ ಯತೀನಾಂ ಚ ವನಸ್ಥ ಬ್ರಹ್ಮಚಾರಿಣಾಂ ।**
**ನೈಷ್ಠಿಕಾನಾಂ ನೃಪಾಣಾಂ ಚ ಮಂಡಲೀನಾಂ ಚ ಸುವ್ರತಾಃ ॥೭೭॥**
**ತತಃ ಕಾರ್ಯವಿರೋಧಾದ್ಧಿ ನೃಪಾಣಾಂ ನಾಽನ್ಯಥಾ ಭವೇತ್ ।**
**ವೈಖಾನಸಾನಾಂ ವಿಪ್ರಾಣಾಂ ಪತಿತಾನಾ ಮಸಂಭವಾತ್ ॥೭೮॥**

---

ದರೆ ಯಾಗಶಾಲೆಗಳಲ್ಲಿ ಪಶುವನ್ನು ಕಟ್ಟಿರುವ ಕಂಬವನ್ನು ಅಥವಾ ಜೈನ, ಬೌದ್ಧಮಂದಿರಗಳ ಕಂಬಗಳನ್ನು ಮುಟ್ಟಿದರೂ, ಚಂಡಾಲರೇ ಮೊದಲಾದವರನ್ನು ಅಕಸ್ಮಾತ್ ಮುಟ್ಟಿದರೂ ಅಂಥವರು ಸ್ನಾನವನ್ನು ಮಾಡಿದರೆ ಶುದ್ಧಿಯುಂಟಾಗುವುದು. ಹಾಗೆಯೇ ಮುಟ್ಟಾದವಳನ್ನೂ, ಹೆರಿಗೆಯಾಗಿರುವ ಕೋಣೆಯಿಂದ ಬಂದವಳನ್ನೂ, ಬಾಣಂತಿಯನ್ನೂ ಮತ್ತು ಪಂಚಮಳನ್ನೂ, ಸಹ ಮುಟ್ಟುವುದು ತುಂಬಾ ನಿಷೇಧ ಮಾಡಲ್ಪಟ್ಟಿದೆ.

೭೬–೭೮. ಸಂಬಂಧಿಗಳು ಹೆರೋಣದರಿಂದ ಬಂದ ಸೂತಕದಿಂದ ಅಥವಾ ಸಂಬಂಧಿಗಳ ಸಾವಿನಿಂದ ಬಂದ ಆಶೌಚದಿಂದ ಕೂಡಿದವನಾಗಿರುವ ಬ್ರಾಹ್ಮಣನು, ಮುಟ್ಟಾದವಳನ್ನೂ ಅಥವಾ ಸೂಲಗಿತ್ತಿಯನ್ನೂ ಮುಟ್ಟಬಾರದು. ಹಾಗೇನಾದರೂ ಅಕಸ್ಮಾತ್ ಮುಟ್ಟಿಬಿಟ್ಟರೆ, ಸ್ನಾನ ಮಾಡುವುದರಿಂದ ಶುದ್ಧಿಯಾಗುವುದು. ಸಂನ್ಯಾಸಿಗಳು, ವಾನಪ್ರಸ್ಥಾಶ್ರಮದವರು, ಆ ಜೀವ ಬ್ರಹ್ಮಚಾರಿಗಳು ಇವರಿಗೆ ಮತ್ತು ಒಳ್ಳೆಯ ಆಚಾರದಲ್ಲಿರುವ ರಾಜರು ಮತ್ತು ಮಂತ್ರಿ ಮೊದಲಾದವರಿಗೂ ಸೂತಕವೇ ಇಲ್ಲ. ರಾಜನೇ ಮೊದಲಾದವರು ಯಾವಾಗಲೂ ರಾಜಕಾರ್ಯಗಳಲ್ಲಿ ತೊಡಗಿರುವುದರಿಂದಲೂ, ಸೂತಕವನ್ನು ಆಚರಿಸಲು ಹೊರಟರೆ, ಆ ರಾಜಕಾರ್ಯಕ್ಕೆ ಅಡ್ಡಿ ಬರುವುದರಿಂದಲೂ, ಸಂನ್ಯಾಸಿಗಳೇ ಮೊದಲಾದವರು ಅತ್ಯಾಶ್ರಮಿಗಳಾಗಿರುರುವುದರಿಂದ ಧರ್ಮಬಾಹಿರರಾಗುವುದು ಅಸಂಭವವಾದ್ದರಿಂದಲೂ, ಇವರಿಗೂ ಸೂತಕವನ್ನು ವಿಧಿಸಿಲ್ಲವು.

ಅಸಂಚಯ ದ್ವಿಜಾನಾಂ ಚ ಸ್ನಾನಮಾತ್ರೇಣ ನಾಽನ್ಯಥಾ ।
ತಥಾಽಸಂನಿಹಿತಾ ನಾಂ ಚ ಯಜ್ಞಾರ್ಥಂ ದೀಕ್ಷಿತಸ್ಯ ಚ ॥೭೯॥

ಏಕಾಽಹಾದ್ಯಜ್ಞಯಾ ಜೀನಾಂ ಶುದ್ಧಿರುಕ್ತಾ ಸ್ವಯಂಭುವಾ ।
ತತ ಸ್ತ್ವಧೀತ ಶಾಖಾನಾಂ ಚತುರ್ಭಿಃ ಸರ್ವದೇಹಿನಾಂ ॥೮೦॥

ಸೂತಕಂ ಪ್ರೇತಕಂ ನಾಸ್ತಿ ತ್ರ್ಯಹಾದೂರ್ಧ್ವಮನುತ್ರ ವೈ ।
ಅರ್ವಾಗೇಕಾ ದಶಾಽಹಾಂತಂ ಬಾಂಧವಾನಾಂ ದ್ವಿಜೋತ್ತಮಾಃ ॥

ಸ್ನಾನಮಾತ್ರೇಣ ವೈ ಶುದ್ಧಿ ರ್ಮರಣೇ ಸಮುಪಸ್ಥಿತೇ ।
ತತೋ ಋತು ತ್ರಯಾದರ್ವಾಗೇಕಾಽಹಃ ಪರಿಗೀಯತೇ ॥೮೨॥

ಸಪ್ತವರ್ಷಾ ತ್ತತಶ್ಚಾಽರ್ವಾಕ್ ತ್ರಿರಾತ್ರಂ ಹಿ ತತಃ ಪರಂ ।
ದಶಾಽಹಂ ಬ್ರಾಹ್ಮಣಾನಾಂ ವೈ ಪ್ರಥಮೋಽಹನಿ ವಾ ಪಿತುಃ ॥೮೩॥

---

೭೯–೮೧. ಪ್ರತಿದಿನವೂ ಆಯಾಯ ದಿನವೇ ಸಂಪಾದಿಸಿ ಕಷ್ಟದಿಂದ ಜೀವನವನ್ನು ನಡೆಸುವ ದ್ವಿಜರಿಗೆ, ಎಂಥಾ ಸೂತಕದಲ್ಲಿಯೂ. ಒಂದು ಸ್ನಾನಮಾತ್ರವೇ ಹೇಳಲ್ಪಟ್ಟಿದೆ. ಹಾಗೆಯೇ ದೂರದಲ್ಲಿರುವುದರಿಂದ ಸೂತಕ ಬಂದಿರುವುದು ಗೊತ್ತಾಗದೆ ಇರುವವರಿಗೆ, ಯಾಗದೀಕ್ಷೆಯನ್ನು ವಹಿಸಿರುವವರಿಗೆ, ಶಾವಾಶೌಚವಿಲ್ಲವು. ಅಲ್ಲದೆ ಋತ್ವಿಕ್ಕುಗಳಿಗೆ ಒಂದು ದಿವಸ ಸೂತಕವಿದ್ದು, ಅನಂತರ ಸ್ನಾನಮಾಡಿದರೆ ಶುದ್ಧಿಯಾಗುವುದು. ಹಾಗೆಯೇ ವೇದಾಧ್ಯಯನ ಸಂಪನ್ನರಾದವರಿಗೆ ಒಂದು ದಿನದಲ್ಲೇ ಸೂತಕವು ಕಳೆದು ಹೋಗುವುದು. ಏಳುತಲೆ ಕಳೆದಿರುವ ಒಂದೇ ಗೋತ್ರದವರಿಗೆ ಮೂರು ದಿನಗಳಿಗೆ ಮೇಲ್ಪಟ್ಟು ಸೂತಕವಿಲ್ಲವು. ಹುಟ್ಟಿದ ಹನ್ನೊಂದು ದಿನಗಳ ಒಳಗೆ ಶಿಶುವು ಮೃತವಾದರೆ ಬಾಂಧವರಿಗೆ ಒಂದು ಸ್ನಾನವೂ ಬ್ರಹ್ಮನಿಂದ ವಿಧಿಸಲ್ಪಟ್ಟಿದೆ.

೮೨–೮೩. ಮೇಲೆ ಹೇಳಿದಂತೆ ಶಿಶುವಿನ ಸಾವು ಸಂಭವಿಸಿರಲು ಹನ್ನೊಂದು ದಿನದೊಳಗೆ ಒಂದುಸ್ನಾನ ಮಾತ್ರದಿಂದಲೇ ಶುದ್ಧಿಯುಂಟಾಗುವುದು. ಅನಂತರದಲ್ಲಿ ಮೂರು ಋತುಗಳು ಕಳೆಯುವುದರೊಳಗಾಗಿ ಮರಣವು ಸಂಭವಿಸಿದರೆ ಒಂದುದಿನ ಸೂತಕವೆಂದು ಹೇಳಲ್ಪಟ್ಟಿದೆ. ಏಳು

**ದಶಾಽಹಂ ಸೂತಿಕಾಽಶೌಚಂ ಮಾತುರಪ್ಯೇವ ಮನ್ಯಯಾಃ ।**
**ಅರ್ವಾಕ್ತ್ರಿವರ್ಷಾ ತ್ಸ್ನಾನೇನ ಬಾಂಧವಾನಾಂ ಪಿತುಃ ಸದಾ ॥೮೪॥**
**ಅಷ್ಟಾಽಬ್ದಾ ದೇಕರಾತ್ರೇಣ ಶುದ್ಧಿಃ ಸ್ಯಾದ್ಬಾಂಧವಸ್ಯ ತು ।**
**ದ್ವಾದಶಾಽಬ್ದಾ ತ್ತತಶ್ಚಾಽರ್ವಾಕ್ ತ್ರಿರಾತ್ರಂ ಸ್ತ್ರೀಷು ಸುವ್ರತಾಃ ॥**
**ಸಪಿಂಡತಾ ಚ ಪುರುಷೇ ಸಪ್ತಮೇ ವಿನಿವರ್ತತೇ ।**
**ಅತಿಕ್ರಾಂತೇ ದಶಾಽಹೇ ತು ತ್ರಿರಾತ್ರ ಮಶುಚಿರ್ಭವೇತ್ ॥೮೬॥**
**ತತಃ ಸಂನ್ನಿಹಿತೋ ವಿಪ್ರ ಶ್ಚಾಽರ್ವಾಕ್ ಪೂರ್ವಂ ತದೇವ ವೈ ।**
**ಸಂವತ್ಸರೇ ವ್ಯತೀತೇ ತು ಸ್ನಾನಮಾತ್ರೇಣ ಶುಧ್ಯತಿ ॥೮೭॥**

---

ವರ್ಷಗಳೊಳಗೆ ಮರಣವು ಸಂಭವಿಸಿ ತಿಳಿದರೆ ಮೂರು ದಿನ ಸೂತಕವೆಂದು ಹೇಳಲ್ಪಟ್ಟಿದೆ. ಏಳು ವರ್ಷಗಳ ಮೇಲೆ ಉಪನೀತರಾದ ಬ್ರಾಹ್ಮಣರಿಗೆ ಮರಣ ಸಂಭವಿಸಿದರೆ ಜ್ಞಾತಿಗಳಿಗೆ ಆಶೌಚವು ಹತ್ತುದಿನಗಳೆಂದು ಹೇಳಿದೆ. ಜನನಾಶೌಚದಲ್ಲಿ ಹತ್ತು ದಿನಗಳು ಸೂತಕವೆಂದೂ, ತಾಯಿಗೆ ಮಾತ್ರ ಹತ್ತು ದಿನ ಆಶೌಚವು ಎಂದೂ, ಮೂರು ವರ್ಷಕ್ಕೆ ಮುಂಚೆ ಸ್ತ್ರೀ ಶಿಶು ವಿನ ಮರಣವಾದರೆ ನೆಂಟರಿಗೂ ತಂದೆಗೂ ಮೂರು ದಿವಸಗಳ ಸೂತಕವೂ ಹೇಳಲ್ಪಟ್ಟಿದೆ.

೮೫–೮೭. ಎಂಟು ವರ್ಷಗಳಿಗಿಂತ ಮುಂಚೆ ಸ್ತ್ರೀಮರಣವಾದರೆ ಒಂದು ರಾತ್ರಿಯು ಕಳೆದರೆ ಬಾಂಧವರಾದ ನೆಂಟರಿಗೆ ಶುದ್ಧಿಯು ಹೇಳಲ್ಪಟ್ಟಿದೆ. ಹನ್ನೆರಡು ವರ್ಷಗಳು ಅಥವಾ ಅದಕ್ಕಿಂತ ಸ್ವಲ್ಪ ಮುಂಚೆ ಸ್ತ್ರೀಮರಣವಾದರೆ ಮೂರು ರಾತ್ರಿ ಆಶೌಚದಲ್ಲಿದ್ದು ಮೇಲೆ ಸ್ನಾನಮಾಡಬೇಕು. ಮೂಲ ಪುರುಷನಿಂದ ಏಳು ತಲೆಗಳು ಕಳೆದರೆ ಜ್ಞಾತಿಗಳಿಗೆ ಸಪಿಂಡತ್ವವು ಕಳೆದುಹೋಗುತ್ತವೆ. ಸ್ತ್ರೀಮರಣವಾಗಿ ಹತ್ತು ದಿವಸಗಳು ಕಳೆದಿದ್ದರೆ ನೆಂಟನು ಮೂರು ದಿವಸಗಳು ಸೂತಕದಲ್ಲಿರಬೇಕು. ಅಲ್ಲದೆ ಬ್ರಾಹ್ಮಣನು ಹತ್ತಿರದಲ್ಲಿದ್ದಾಗಲೇ ಈ ಸೂತಕ ಕ್ರಮವು ವಿಧಿಸಲ್ಪಟ್ಟಿದೆ. ಒಂದು ಪಕ್ಷ ಅವನಿಗೆ ಗೊತ್ತಾಗದೇ ಒಂದು ವರ್ಷವಾದ ಮೇಲೆ ಗೊತ್ತಾದರೆ ಒಂದು ಸ್ನಾನಮಾಡಿದರೆ ಶುದ್ಧಿಯುಂಟಾಗುವುದು.

**ಸ್ಪೃಷ್ಟ್ವಾ ಪ್ರೇತಂ ತ್ರಿರಾತ್ರೇಣ ಧರ್ಮಾರ್ಥಂ ಸ್ನಾನಮುಚ್ಯತೇ ।**
**ದಾಹಕಾನಾಂ ಚ ನೇತ್ರೂಣಾಂ ಸ್ನಾನಮಾತ್ರ ಮಬಾಂಧವೇ ॥೮೮॥**

**ಅನುಗಮ್ಯ ಚ ವೈ ಸ್ನಾತ್ವಾ ಘೃತಂ ಪ್ರಾಶ್ಯ ವಿಶುಧ್ಯತಿ ।**
**ಆಚಾರ್ಯಮರಣೇ ಚೈವ ತ್ರಿರಾತ್ರಂ ಶ್ರೋತ್ರಿಯೇ ಮೃತೇ ॥೮೯॥**

**ಪಕ್ಷಿಣೀ ಮಾತುಲಾನಾಂ ಚ ಸೋದರಾಣಾಂ ಚ ವಾ ದ್ವಿಜಾಃ ।**
**ಭೂಪಾನಾಂ ಮಂಡಲೀನಾಂ ಚ ಸದ್ಯೋ ನೀರಾಷ್ಟ್ರವಾಸಿನಾಂ॥೯೦॥**

**ಕೇವಲಂ ದ್ವಾದಶಾಹೇನ ಕ್ಷತ್ರಿಯಾಣಾಂ ದ್ವಿಜೋತ್ತಮಾಃ ।**
**ನಾಽಭಿಷಿಕ್ತಸ್ಯ ಚಾಽಶೌಚಂ ಸಂಪ್ರಮಾದೇಷು ವೈ ರಣೇ ॥೯೧॥**

**ವೈಶ್ಯಃ ಪಂಚದಶಾಹೇನ ಶೂದ್ರೋ ಮಾಸೇನ ಶುಧ್ಯತಿ ।**
**ಇತಿ ಸಂಕ್ಷೇಪತಃ ಪ್ರೋಕ್ತಾ ದ್ರವ್ಯಶುದ್ಧಿ ರನುತ್ತಮಾ ॥೯೨॥**

---

೮೮–೯೦. ನೆಂಟನು ಪ್ರೇತವನ್ನು ಮುಟ್ಟಿದ್ದರೆ ಮೂರು ರಾತ್ರಿಯ ವರೆಗೆ ಮೈಲಿಗೆ ಯಲ್ಲಿದ್ದು ಆ ಮೇಲೆ ಧರ್ಮಕ್ಕೆ ಅನುಸಾರವಾಗಿ ಸ್ನಾನ ಮಾಡಬೇಕು. ಸುಡುವವರು ಮತ್ತು ಶವವನ್ನು ಒಯ್ಯುವವರು ನೆಂಟ ರಲ್ಲದಿದ್ದ ಪಕ್ಷದಲ್ಲಿ ಒಂದು ಸ್ನಾನಮಾಡಿದರೆ ಸಾಕು. ಶವವನ್ನು ಹಿಂಬಾಲಿಸಿ ಹೋಗಿದ್ದು ಹಿಂತಿರುಗಿ ಬಂದವರು ಒಂದು ಸ್ನಾನವನ್ನು ಮಾಡಿ ತುಪ್ಪವನ್ನು ತಿಂದರೆ ಶುದ್ಧಿಯಾಗುವುದು. ಗುರುವು ಸತ್ತಾಗ ಮೂರುದಿನ ಸೂತಕವೂ, ಶ್ರೋತ್ರಿಯನಾದ ಬ್ರಾಹ್ಮಣನು ಸತ್ತಾಗಲೂ, ಅದರಂತೆಯೇ ಮೂರು ದಿವಸ ಸೂತಕವೂ, ವಿಧಿಸಲ್ಪಟ್ಟಿದೆ. ಎಲೈ ಬ್ರಾಹ್ಮಣರೇ. ಸೋದರ ಮಾವನಿಗೆ ಮತ್ತು ಅವನ ಅಣ್ಣ ತಮ್ಮಂದಿರಿಗೆ ಪಕ್ಷಿಣೀ ಎಂದರೆ ಒಂದೂವರೆ ದಿನವೂ ಸೂತಕವೆಂದು ವಿಧಿಸಲ್ಪಟ್ಟಿದೆ. ರಾಜರು ಮಂತ್ರಿಗಳು ಸಾಮಂತರಾಜರು, ಪರದೇಶವಾಸಿಗಳಾಗಿರುವು ದಾದರೆ ಇವರಿಗೆ ತತ್ಕಾಲದಲ್ಲಿ ಒಂದು ಸ್ನಾನಮಾಡಿದರೆ ಸೂತಕವು ತೊಲಗುವುದು.

೯೧–೯೨. ಎಲೈ ಬ್ರಾಹ್ಮಣ ಶ್ರೇಷ್ಠರೇ, ಕ್ಷತ್ರಿಯರಿಗೆ ಹನ್ನೊಂದು ದಿವಸ ಮಾತ್ರ ಸೂತಕವು ಹೇಳಲ್ಪಟ್ಟಿದೆ. ರಾಜ್ಯಾಡಳಿತದಲ್ಲಿ ಪಟ್ಟದ ಅಭಿಷೇಕ ಮಾಡಿಸಿ ಕೊಂಡಿರುವವರಿಗೆ, ಅಥವಾ ಪ್ರಮಾದವಾದ ಸ್ಥಿತಿ ಯಲ್ಲಿರುವವರಿಗೆ ಮತ್ತು ಯುದ್ಧದಲ್ಲಿರುವವನಿಗೆ ಸೂತಕವಿಲ್ಲ. ವೈಶ್ಯ

ಅಶೌಚಂ ಚಾಽನುಪೂರ್ವ್ಯೇಣ ಯತೀನಾಂ ನೈವ ವಿದ್ಯತೇ ।
ತ್ರೇತಾಪ್ರಭೃತಿ ನಾರೀಣಾಂ ಮಾಸಿ ಮಾಸ್ಯಾರ್ತವಂ ದ್ವಿಜಾಃ ॥೯೩॥

ಕೃತೇ ಸಕೃದ್ಯುಗವಶಾ ಜ್ಜಾಯಂತೇ ವೈ ಸಹೈವ ತು ।
ಪ್ರಯಾಂತಿ ಚ ಮಹಾಭಾಗಾ ಭಾರ್ಯಾಭಿಃ ಕುರವೋ ಯಥಾ ॥೯೪॥

ವರ್ಣಾಶ್ರಮ ವ್ಯವಸ್ಥಾ ಚ ತ್ರೇತಾಪ್ರಭೃತಿ ಸುವ್ರತಾಃ ।
ಭಾರತೇ ದಕ್ಷಿಣೇ ವರ್ಷೇ ವ್ಯವಸ್ಥಾ ನೇತರೇಷ್ವಥೋ ॥೯೫॥

ಮಹಾವೀತೇ ಸುವೀತೇ ಚ ಜಂಬೂದ್ವೀಪೇ ತಥಾಽಷ್ಟಸು ।
ಶಾಕದ್ವೀಪಾದಿಷು ಪ್ರೋಕ್ತೋ ಧರ್ಮೋ ವೈ ಭಾರತೇ ಯಥಾ ॥

ನಿಗೆ ಹದಿದೈದು ದಿವಸ ಸೂತಕವೂ, ಶೂದ್ರನಿಗೆ ಒಂದು ತಿಂಗಳು ಸೂತಕವೂ, ವಿಧಿಸಲ್ಪಟ್ಟಿದೆ. ಹೀಗೆ ಶ್ರೇಷ್ಠವಾದ ಶುದ್ಧಿ ಕ್ರಮವು ತ್ರೇತಾಯುಗದಿಂದ ಆರಂಭಮಾಡಿ ಸಂಕ್ಷೇಪವಾಗಿ ಹೇಳಲ್ಪಟ್ಟಿದೆ. ಸಂನ್ಯಾಸಿಗಳಿಗೆ ಯಾವ ಕ್ರಮದಲ್ಲೂ ಸೂತಕವಿಲ್ಲ. ಸ್ತ್ರೀಯರು ತಿಂಗಳು ತಿಂಗಳಿಗೆ ಮುಟ್ಟಾಗುವುದರಿಂದ ಅವರಿಗೆ ಶುದ್ಧಿ ಕ್ರಮವೂ ರಜಸ್ವಲೆ ಯಾದವಳಿಗೆ ವಿಹಿತವಾಗುವ ಧರ್ಮಗಳೂ ಹೀಗೆ ಹೇಳಲ್ಪಟ್ಟಿವೆ.

೯೪–೯೬. ಶಾಸ್ತ್ರದಲ್ಲಿಯುಗಾನುಸಾರವಾಗಿ ಧರ್ಮಗಳ ಈ ನಿಯಮವು ಮಾಡಲ್ಪಟ್ಟಿದೆ. ಯುಗಗಳು ಕಳೆದರೂ ಸ್ತ್ರೀಪುರುಷರಿಬ್ಬರಿಗೂ ಒಟ್ಟಿಗೇ ಉಂಟಾದ ಈ ನಿಯಮಗಳನ್ನು ಪಾಲಿಸುತ್ತಾ ಬರುತ್ತಿರುವರು. ಪುಣ್ಯಶೀಲರಾದ ಈ ಜನರು ಮತ್ತು ಕುರುದೇಶದ ಜನರು ತಮ್ಮ ಸ್ತ್ರೀಯರೊಂದಿಗೆ ಹೇಗೋ ಹಾಗೆ ಒಟ್ಟಿಗೇ ಈ ಧರ್ಮಕರ್ಮಗಳನ್ನು ಮಾಡುತ್ತಾ ಬಂದಿದಾರೆ. ತ್ರೇತಾಯುಗದಿಂದಲೇ ಆರಂಭವಾಗಿ, ವರ್ಣಾಶ್ರಮ ಧರ್ಮಗಳು ವ್ಯವಸ್ಥೆಮಾಡಲ್ಪಟ್ಟವು. ಭಾರತ ಭೂಮಿಯಲ್ಲಿ ಮತ್ತು ದಕ್ಷಿಣ ಭಾಗದ ದೇಶಗಳಲ್ಲಿಯೂ, ಈ ವ್ಯವಸ್ಥೆಯು ಏರ್ಪಟ್ಟಿತು. ಇತರಗಳಾದ ಕಿಂಪುರುಷ, ಮಹಾವೀತ, ಸುವೀತ ದೇಶಗಳಲ್ಲೂ, ಜಂಬೂದ್ವೀಪ, ಹಾಗೆಯೇ ಶಾಕ, ಪ್ಲಕ್ಷ, ಮುಂತಾದ ಇನ್ನೆಂಟು ದ್ವೀಪಗಳಲ್ಲಿಯೂ, ಈ ಧರ್ಮವು ಆಚರಣೆಗೆ ಬಂದಿದೆ. ಆದರೆ ಈ ವರ್ಣಾಶ್ರಮಗಳ ಧರ್ಮಕರ್ಮಗಳ

ರಸೋಲ್ಲಾಸಾ ಕೃತೇ ವೃತ್ತಿ ಸ್ತ್ರೇತಾಯಾಂ ಗೃಹವೃಕ್ಷಜಾ ।
ಸೈವಾಽರ್ತವ ಕೃತಾದ್ದೋಷಾತ್ ರಾಗದ್ವೇಷಾದಿಭಿ ರ್ನೃಣಾಂ ॥೯೭॥
ಮೈಥುನಾತ್ಕಾಮತೋ ವಿಪ್ರಾಸ್ತಥೈವ ಪುರುಷಾದಿಭಿಃ ।
ಯವಾಽದ್ಯಾಃ ಸಂಪ್ರಜಾಯಂತೇ ಗ್ರಾಮ್ಯಾಽರಣ್ಯಾಶ್ಚತುರ್ದಶ ॥
ಓಷಧ್ಯಶ್ಚ ರಜೋದೋಷಾಃ ಸ್ತ್ರೀಣಾಂ ರಾಗಾದಿಭಿ ರ್ನೃಣಾಂ ।
ಅಕಾಲಕೃಷ್ಟಾ ವಿಧ್ವಸ್ತಾಃ ಪುನರುತ್ಪಾದಿತಾ ಸ್ತಥಾ ॥೯೯॥
ತಸ್ಮಾತ್ಸರ್ವಪ್ರಯತ್ನೇನ ನ ಸಂಭಾಷ್ಯಾ ರಜಸ್ವಲಾ ।
ಪ್ರಥಮೇಽಹನಿ ಚಾಂಡಾಲೀ ಯಥಾವರ್ಜ್ಯಾ ತಥಾಽಂಗನಾ॥೧೦೦॥

---

ಏರ್ಪಾಡು ಬೇರೇ ದೇಶಗಳಲ್ಲಿಲ್ಲ. ಈ ಅಂಶವನ್ನು ಹಿಂದೆ ೪೬ ನೆಯ ಅಧ್ಯಾಯದಲ್ಲೂ ವಿವರಗಳೊಡನೆ ಹೇಳಲಾಗಿದೆ.

೯೭. ತ್ರೇತಾಯುಗದಲ್ಲಿ ಮಳೆ ಬೆಳೆಗಳಿಂದ ಭೂಮಿಯು ರಜಸ್ವಲೆಯಾಗುತ್ತದೆ. ತ್ರೇತಾಯುಗದಲ್ಲಿ ಮನೆಯಲ್ಲಿರ ಬಹುದಾದ ಗಿಡಮರಗಳಲ್ಲಿ ಹೂವುಹಣ್ಣುಗಳಿಂದ ರಜೋ ದೋಷವು ಸಂಭವಿಸುತ್ತದೆ. ಆ ದೋಷವೇ ಮಾನವರ ರಾಗ ದ್ವೇಷಗಳಿಂದಲೂ, ಸ್ತ್ರೀಯರ ರಜಸ್ಸಿನಿಂದಲೂ ಸಂಭವಿಸುತ್ತದೆ.

೯೮-೧೦೦. ಎಲೈ ಬ್ರಾಹ್ಮಣರೇ, ಪುರುಷರಿಗೆ ಅಧಾರ್ಮಿಕವಾದ ಕಾಮದಿಂದ ಉಂಟಾಗುವ ಸ್ತ್ರೀಸಂಪರ್ಕವೂ ದೋಷವಾಗುತ್ತದೆ. ಅರಣ್ಯದಲ್ಲಿ ಅಥವಾ ಹಳ್ಳಿಯಲ್ಲಿ ಬೆಳೆಯುವ ಜವೇ ಗೋಧಿಯೇ ಮೊದಲಾದ ಹದಿನಾಲ್ಕು ಬಗೆಯ ಧಾನ್ಯಗಳೂ, ಅನೇಕ ಬಗೆಯ ವನಸ್ಪತಿಗಳೂ ಮಾನವರ ಅತ್ಯಾಶೆಯಿಂದ ಅಕಾಲದಲ್ಲಿ ಉಂಟಾದರೆ ದೋಷವಾಗುತ್ತವೆ. ಸ್ತ್ರೀಯರು ಮುಟ್ಟಾಗುವ ದೋಷದಿಂದಲೂ, ಪುರುಷರು ಅಕಾಲದಲ್ಲಿ ಕಾಮೇಚ್ಛೆಯನ್ನು ಮನಸ್ಸಿಗೆತೋರಿದಂತೆ ಪೂರೈಸುವುದರಿಂದಲೂ, ಅಕಾಲದಲ್ಲಿ ಭೂಮಿಯ ಉಳುಮೆಗಳೂ, ಅಕಾಲದಲ್ಲಿ ಹುಟ್ಟುವ ಬೆಳೆಗಳೂ ದೋಷಕರಗಳು. ಆದ್ದರಿಂದ ಮನುಷ್ಯನು ಮುಟ್ಟಾದವಳೊಂದಿಗೆ ಸಂಭಾಷಣೆ ಮಾಡದಿರಲು ಸರ್ವಪ್ರಯತ್ನವನ್ನೂ ಮಾಡಬೇಕು. ಮುಟ್ಟಾಗಿರುವ ಹೆಂಗಸು ಮೊದಲನೆಯ ದಿವಸದಲ್ಲಿ ಶೌಚಧರ್ಮ

ದ್ವಿತೀಯೇಽಹನಿ ವಿಪ್ರಾ ಹಿ ಯಥಾ ವೈ ಬ್ರಹ್ಮಘಾತಿನೀ ।
ತೃತೀಯೇ ಹಿ ತದರ್ಧೇನ ಚತುರ್ಥೇಽಹನಿ ಸುವ್ರತಾ ॥೧೦೧॥

ಸ್ನಾತ್ವಾಽರ್ಧಮಾಸಾ ತ್ಸಂಶುದ್ಧಾ ತತಃ ಶುದ್ಧಿರ್ಭವಿಷ್ಯತಿ ।
ಆಷೋಡಶಾತ್ತತಃ ಸ್ತ್ರೀಣಾಂ ಮೂತ್ರವಚ್ಚೌಚ ಚ ವಿಷ್ಯತೇ॥೧೦೨॥

ಪಂಚರಾತ್ರಂ ತಥಾಽಸ್ಪೃಶ್ಯಾ ರಜಸಾ ವರ್ತತೇ ಯದಿ ।
ಸಾ ವಿಂಶದ್ದಿವಸಾದೂರ್ಧ್ವಂ ರಜಸಾ ಪೂರ್ವವತ್ತಥಾ ॥೧೦೩॥

ಸ್ನಾನೇ ಶೌಚಂ ತಥಾ ಗಾನಂ ರೋದನಂ ಹಸನಂ ತಥಾ ।
ಯಾನ ಮಭ್ಯಂಜನಂ ನಾರೀ ದ್ಯೂತಂ ಚೈವಾಽನುಲೇಪನಂ ॥೧೦೪॥

ದಿವಾ ಸ್ವಪ್ನಂ ವಿಶೇಷೇಣ ತಥಾ ವೈ ದಂತಧಾವನಂ ।
ಮೈಥುನಂ ಮಾನಸಂ ವಾಽಪಿ ವಾಚಿಕಂ ದೇವತಾರ್ಚನಂ ॥೧೦೫॥

---

ದೃಷ್ಟಿಯಿಂದ ಚಂಡಾಲಿಯಾಗಿರುವುದರಿಂದ ಅವಳೊಂದಿಗೆ ಸಂಭಾಷಣೆ ಮುಂತಾದುವನ್ನು ನಡೆಸಬಾರದು.

೧೦೧–೧೦೩. ಎಲೈಬ್ರಾಹ್ಮಣರೇ, ಮುಟ್ಟಾದವಳು ಎರಡನೆಯ ದಿವಸದಲ್ಲಿ ಬ್ರಹ್ಮಹತ್ಯಾ ಪಾಪವುಳ್ಳವಳಂತಿರುತ್ತಾಳೆ. ಮೂರನೆಯ ದಿವಸ ಬ್ರಹ್ಮಹತ್ಯಾ ದೋಷದ ಅರ್ಧಭಾಗ ದೋಷವುಳ್ಳವಳಂತಿರುತ್ತಾಳೆ. ನಾಲ್ಕನೆಯ ದಿನದಲ್ಲಿ ದೋಷವಿಲ್ಲದೆ ಶುದ್ಧಳಾಗುತ್ತಾಳೆ. ಅರ್ಧ ತಿಂಗಳಾದ ಮೇಲೆ ರಜೋದೋಷವಿದ್ದರೆ ಸ್ನಾನದಿಂದಪರಿಶುದ್ಧಳಾಗು ತ್ತಾಳೆ. ಆದ್ದರಿಂದ ಐದನೆಯದಿನದಿಂದ ಪ್ರಾರಂಭಿಸಿ, ಹದಿನಾರುದಿನಗಳ ವರೆಗೆ ಸ್ತ್ರೀಯು ರಜೋದೋಷದಿಂದ ಅಪರಿಶುದ್ಧಳಾಗಿಯೇ ಇರುವು ದುಂಟು. ಐದು ದಿವಸದವರೆವಿಗೂ ಅವಳು ರಜೋವತಿಯಾಗಿದ್ದರೆ ಮುಟ್ಟಲು ಯೋಗ್ಯಳೇ ಅಲ್ಲ. ಅವಳು ಇಪ್ಪತ್ತುದಿವಸಗಳಾದ ಮೇಲೆ ಪುನಃ ರಜಸ್ವಲೆಯಾಗುವುದುಂಟು.

೧೦೪–೧೦೬. ಆಗ ಸ್ನಾನ ಮಾಡಿದಮೇಲೆ ಶುದ್ಧಿಯಾಗುತ್ತದೆ. ರಜ ಸ್ವಿನ ಕಾಲದಲ್ಲಿ ಸ್ನಾನ ಮಾಡಿ, ಹಾಡುವುದು, ನಗುವುದು, ಎಲ್ಲಿಗಾದರೂ

ವರ್ಜಯೇತ್ಸರ್ವಯತ್ನೇನ ನಮಸ್ಕಾರಂ ರಜಸ್ವಲಾ ।
ರಜಸ್ವಲಾಽಂಗನಾ ಸ್ಪರ್ಶ ಸಂಭಾಷೇ ಚ ರಜಸ್ವಲಾ ॥೧೦೬॥
ಸಂತ್ಯಾಗಂ ಚೈವ ವಸ್ತ್ರಾಣಾಂ ವರ್ಜಯೇತ್ಸರ್ವಯತ್ನತಃ ।
ಸ್ನಾತ್ವಾಽನ್ಯ ಪುರುಷಂ ನಾರೀ ನ ಸ್ಪೃಶೇತ್ತು ರಜಸ್ವಲಾ ॥೧೦೭॥
ಈಕ್ಷಯೇದ್ಭಾಸ್ಕರಂ ದೇವಂ ಬ್ರಹ್ಮಕೂರ್ಚಂ ತತಃ ಪಿಬೇತ್ ।
ಕೇವಲಂ ಪಂಚಗವ್ಯಂ ವಾ ಕ್ಷೀರಂ ವಾ ಚಾಽತ್ಮಶುದ್ಧಯೇ ॥೧೦೮॥
ಚತುರ್ಥ್ಯಾಂ ಸ್ತ್ರೀ ನ ಗಮ್ಯಾ ತು ಗತೋಽಲ್ಪಾಯುಃಪ್ರಸೂಯತೇ ।
ವಿದ್ಯಾಹೀನಂ ವ್ರತಭ್ರಷ್ಟಂ ಪತಿತಂ ಪಾರದಾರಿಕಂ ॥೧೦೯॥

---

ಹೋಗುವುದು, ಎಣ್ಣೇನೀರು ಹಾಕಿಕೊಳ್ಳುವುದು, ಜೂಜಾಡುವುದು, ಗಂಧಾದಿಗಳನ್ನು ಹಚ್ಚಿಕೊಳ್ಳುವುದು, ಹಗಲುಹೊತ್ತಿನಲ್ಲೇ ಮಲಗುವುದು, ಹಲ್ಲುಜ್ಜುವುದು, ಪುರುಷ ಸಂಪರ್ಕಮಾಡುವುದು, ಮಾತಿನಲ್ಲಿ ಅಥವಾ ಮನಸ್ಸಿನಲ್ಲಿ ಸಂಪರ್ಕದ ಅಭಿಲಾಷೆಯನ್ನು ತೋರಿಸುವುದು, ದೇವರಿಗೆ ನಮಸ್ಕಾರ ಮಾಡುವುದು, ಇವೆಲ್ಲವೂ ಸರ್ವಥಾ ನಿಷೇಧಿಸಲ್ಪಟ್ಟಿವೆ. ಮುಟ್ಟಾದ ಹೆಂಗುಸನ್ನು ಮುಟ್ಟಿದರೂ ಅಥವಾ ಅವಳೊಂದಿಗೆ ಮಾತನಾಡಿದರೂ, ಶುದ್ಧಳಾದ ಹೆಂಗುಸೂ ಮುಟ್ಟಾದವಳಂತೆ ಭಾವಿಸಲ್ಪಡಬೇಕು.

೧೦೭–೧೦೯. ಮುಟ್ಟಾದವಳ ಬಟ್ಟೆಗಳನ್ನೂ ಮುಟ್ಟಬಾರದು. ಮುಟ್ಟಾದ ಹೆಂಗುಸು ಸ್ನಾನಮಾಡಿ ಬೇರೊಬ್ಬ ಪುರುಷನನ್ನು ಮುಟ್ಟಬಾರದು. ಮೊದಲು ಸೂರ್ಯದೇವನನ್ನು ನೋಡಿ, ದರ್ಭೆಯ ಹುಲ್ಲು ಹಾಕಿದ ಪಾತ್ರೆಯಲ್ಲಿ ನೀರನ್ನು ಪಾನಮಾಡಬೇಕು. ಅಥವಾ ಹಸುವಿನ ಗಂಜಲ, ಅಥವಾ ಹಾಲನ್ನಾದರೂ, ದೇಹಶುದ್ಧಿಗೋಸ್ಕರ ತೆಗೆದುಕೊಳ್ಳಬೇಕು. ಪುರಷನು ತನ್ನ ಹೆಂಗಸು ಮುಟ್ಟಾದ ನಾಲ್ಕನೇಯ ದಿನ ಅವಳ ಸಂಪರ್ಕವನ್ನು ಮಾಡಬಾರದು. ಹಾಗೇನಾದರೂ ಮಾಡಿದ್ದೇ ಆದರೆ ಅಲ್ಪಾಯುಸ್ಸುಳ್ಳ ಮಕ್ಕಳು ಹುಟ್ಟುತ್ತಾರೆ. ಮತ್ತು ವಿದ್ಯೆಯಿಲ್ಲದ, ಒಳ್ಳೇಕೆಲಸಗಳನ್ನು ಮಾಡದ, ದುರಾಚಾರಿಯಾದ, ಇತರ ಹೆಂಗುಸಿನ ಸಂಪರ್ಕವನ್ನು ಇಚ್ಛಿಸುವ, ಮಕ್ಕಳನ್ನು ಅವಳು ಹೆರುವಳು.

ದಾರಿದ್ರ್ಯಾರ್ಣವ ಮಗ್ನಂ ಚ ತನಯಂ ಸಾ ಪ್ರಸೂಯತೇ ।
ಕನ್ಯಾರ್ಥಿನ್ಯೈವ ಗಂತವ್ಯಾ ಪಂಚಮ್ಯಾಂ ವಿಧಿವತ್ಪುನಃ ॥೧೧೦॥
ರಕ್ತಾಧಿಕ್ಯಾದ್ಭವೇನ್ನಾರೀ ಶುಕ್ರಾಧಿಕ್ಯೇ ಭವೇತ್ಪುಮಾನ್ ।
ಸಮೇ ನಪುಂಸಕಂ ಚೈವ ಪಂಚಮ್ಯಾಂ ಕನ್ಯಕಾ ಭವೇತ್ ॥೧೧೧॥
ಷಷ್ಠ್ಯಾಂ ಗಮ್ಯಾ ಮಹಾಭಾಗಾ ಸತ್ಪುತ್ರಜನನೀ ಭವೇತ್ ।
ಪುತ್ರತ್ವಂ ವ್ಯಂಜಯೇತ್ತಸ್ಯ ಜಾತ ಪುತ್ರೋ ಮಹಾದ್ಯುತಿಃ ॥೧೧೨॥
ಪುಮಿತಿ ನರಕಸ್ಯಾಖ್ಯಾ ದುಃಖಂ ಚ ನರಕಂ ವಿದುಃ ।
ಪುಂಸಸ್ತ್ರಾಣಾನ್ವಿತಂ ಪುತ್ರಂ ತಥಾಭೂತಂ ಪ್ರಸೂಯತೇ ॥೧೧೩॥
ಸಪ್ತಮ್ಯಾಂ ಚೈವ ಕನ್ಯಾರ್ಥೀ ಗಚ್ಛೇತ್ಸೈವ ಪ್ರಸೂಯತೇ ।
ಅಷ್ಟಮ್ಯಾಂ ಸರ್ವಸಂಪನ್ನಂ ತನಯಂ ಸಂಪ್ರಸೂಯತೇ ॥೧೧೪॥

---

೧೧೦–೧೧೨. ಅಲ್ಲದೆ ಅವಳು ಬಡತನವೆಂಬ ಸಮುದ್ರದಲ್ಲಿ ಮುಳುಗಿರುವ ಮಗನನ್ನು ಹೆರುವಳು. ಪುರುಷನು ಮಗಳನ್ನು ಪಡೆಯಲು ಅಪೇಕ್ಷಿಸಿದರೆ, ತನ್ನ ಸ್ತ್ರೀಯೊಂದಿಗೆ ಐದನೆಯ ದಿವಸ ಸಂಪರ್ಕಮಾಡಬೇಕು. ರಕ್ತ ಹೆಚ್ಚಾಗಿದ್ದರೆ ಹೆಂಗುಸೂ, ವೀರ್ಯ ಹೆಚ್ಚಾಗಿದ್ದರೆ, ಗಂಡಸೂ, ರಕ್ತವೀರ್ಯಗಳೆರಡೂ ಸಮನಾಗಿದ್ದರೆ ನಪುಂಸಕನೂ, ಐದನೆಯ ದಿನದಲ್ಲಿ ಸಂಪರ್ಕಮಾಡಿದರೆ ಹೆಣ್ಣುಮಗಳೂ, ಕ್ರಮವಾಗಿ ಹುಟ್ಟುವರು. ಆರನೆಯ ದಿನ ಸಂಪರ್ಕಮಾಡಿದರೆ ಸುಪುತ್ರನ ಜನನವಾಗುವುದು. ಅವನು ಬಹಳ ತೇಜಸ್ವಿಯಾಗಿಯೂ, ಶ್ರೇಷ್ಠ ಪುತ್ರನೂ ಆಗುವನು.

೧೧೩–೧೧೪. ಪುಮ್, ಎಂದು ಒಂದು ನರಕದ ಹೆಸರು. ನರಕವೆಂಬುದು ದುಃಖವೇ ಆಗಿದೆ. ಇಂತಹ ನರಕದಿಂದ ತಂದೆಯನ್ನೂ, ತಾಯಿಯನ್ನೂ ಪಾರುಮಾಡುವುದರಿಂದಲೇ ಪುತ್ರನೆಂದು ಹೆಸರು ಬಂದಿದೆ. ಇಂತಹ ಪುತ್ರನನ್ನು ಆ ಸ್ತ್ರೀಯು ಪ್ರಸವಿಸುವಳು. ಪುರುಷನು ಮಗಳನ್ನು ಅಪೇಕ್ಷಿಸುವವನಾಗಿದ್ದರೆ ಏಳನೆಯ ದಿವಸ ಸ್ತ್ರೀಸಂಪರ್ಕಮಾಡಬೇಕು. ಎಂಟನೆಯ ದಿನ ಸಂಪರ್ಕಮಾಡಿದರೆ ಎಲ್ಲಾ ಲಕ್ಷಣಗಳಿಂದ ಕೂಡಿದ ಮಗನನ್ನು ಪಡೆಯುತ್ತಾನೆ. ಒಂಬತ್ತನೆಯ ದಿವಸ ಸಂಪರ್ಕ

ನವಮ್ಯಾಂ ದಾರಿಕಾಂ ಯೋಽರ್ಥೀ ದಶಮ್ಯಾಂ ಪಂಡಿತೋ ಭವೇತ್ ।
ಏಕಾದಶ್ಯಾಂ ತಥಾ ನಾರೀ ಜನಯೇತ್ಸೈವ ಪೂರ್ವವತ್ ॥೧೧೫॥
ದ್ವಾದಶ್ಯಾಂ ಧರ್ಮತತ್ತ್ವಜ್ಞಂ ಶ್ರೌತಸ್ಮಾರ್ತಪ್ರವರ್ತಕಂ ।
ತ್ರಯೋದಶ್ಯಾಂ ಜಡಾಂ ನಾರೀಂ ಸರ್ವ ಸಂಕರ ಕಾರಿಣೀಂ ॥೧೧೬॥
ಜನಯತ್ಯಂಗನಾ ಯಸ್ಮಾನ್ನ ಗಚ್ಛೇತ್ಸರ್ವಯತ್ನತಃ ।
ಚತುರ್ದಶ್ಯಾಂ ಯದಾ ಗಚ್ಛೇತ್ಸಾ ಪುತ್ರಜನನೀ ಭವೇತ್ ॥೧೧೭॥
ಪಂಚದಶ್ಯಾಂ ಚ ಧರ್ಮಿಷ್ಠಾಂ ಷೋಡಶ್ಯಾಂ ಜ್ಞಾನಪಾರಗಂ ।
ಸ್ತ್ರೀಣಾಂ ವೈ ಮೈಥುನೇ ಕಾಲೇ ವಾಮಪಾರ್ಶ್ವೇ ಪ್ರಭಂಜನಃ ॥
ಚರೇದ್ಯದಿ ಭವೇನ್ನಾರೀ ಪುಮಾಂಸಂ ದಕ್ಷಿಣೇ ಲಭೇತ್ ।
ಸ್ತ್ರೀಣಾಂ ಮೈಥುನಕಾಲೇ ತು ಪಾಪಗ್ರಹವಿವರ್ಜಿತೇ ॥೧೧೯॥

---

ಮಾಡಿದರೆ ಒಳ್ಳೆಯ ಹೆಣ್ಣುಮಗಳೂ, ಹತ್ತನೆಯ ದಿವಸ ಸಂಪರ್ಕಮಾಡಿದರೆ ವಿದ್ಯಾವಂತನಾದ ಮಗನೂ ಹುಟ್ಟುವನು. ಹನ್ನೊಂದನೆಯ ದಿವಸ ಸಂಪರ್ಕಮಾಡಿದರೆ ಒಳ್ಳೆಯ ಹುಡುಗಿಯು ಹುಟ್ಟುವಳು.

೧೧೬-೧೧೮. ಹನ್ನೆರಡನೆಯ ದಿವಸ ಸಂಪರ್ಕಮಾಡಿದರೆ, ಧರ್ಮದ ತತ್ವವನ್ನು ತಿಳಿದಿರುವ ಶ್ರೌತಸ್ಮಾರ್ತ ಕರ್ಮಗಳನ್ನು ಮಾಡುವ ಮಗನು ಹುಟ್ಟುವನು. ಹದಿಮೂರನೆಯ ದಿವಸ ಸಂಪರ್ಕಮಾಡಿದರೆ, ಜಾತಿಸಾಂಕರ್ಯವನ್ನು ಮಾಡುವ, ಅಜ್ಞಾನಿಯಾದ ಮಗಳು ಹುಟ್ಟುವಳು. ಆದ್ದರಿಂದ ಆ ದಿವಸ ಖಂಡಿತವಾಗಿ ಸಂಪರ್ಕಮಾಡಬಾರದು. ಹದಿನಾಲ್ಕನೆಯ ದಿನ ಸಂಪರ್ಕಮಾಡಿದರೆ ಒಳ್ಳೆಯ ಮಗನು ಹುಟ್ಟುವನು. ಹದಿನೈದನೆಯ ದಿನ ಸಂಪರ್ಕಮಾಡಿದರೆ ಧರ್ಮಪರಾಯಣಳಾದ ಮಗಳೂ, ಹದಿನಾರನೆಯ ದಿವಸ ಸಂಪರ್ಕಮಾಡಿದರೆ ವಿದ್ಯಾವಂತನಾದ ಮಗನೂ ಹುಟ್ಟುವರು. ಹೆಂಗುಸರೊಂದಿಗೆ ಸಂಪರ್ಕಮಾಡುವಾಗ ಅವರ ಎಡಗಡೆಯಲ್ಲಿ ವಾಯು ಸಂಚರಿಸುತ್ತಿದ್ದರೆ,

೧೧೯-೧೨೧. ಹೆಣ್ಣುಮಗಳೂ, ಬಲಭಾಗದಲ್ಲಿ ಸಂಚರಿಸುತ್ತಿದ್ದರೆ ಗಂಡುಮಗನೂ ಹುಟ್ಟುವರು. ಪಾಪಗ್ರಹಗಳೊಂದೂ ಇಲ್ಲದ ಕಾಲ

**ಉಕ್ತಕಾಲೇ ಶುಚಿರ್ಭೂತ್ವಾ ಶುದ್ಧಾಂ ಗಚ್ಛೇಚ್ಛುಚಿಸ್ಮಿತಾಂ ।**
**ಇತ್ಯೇವಂ ಸಂಪ್ರಸಂಗೇನ ಯತೀನಾಂ ಧರ್ಮಸಂಗ್ರಹೇ ॥೧೨೦॥**
**ಸರ್ವೇಷಾಮೇವ ಭೂತಾನಾಂ ಸದಾಽಚಾರಃ ಪ್ರಕೀರ್ತಿತಃ ।**
**ಯಃ ಪಠೇಚ್ಛೃಣುಯಾದ್ವಾಽಪಿ ಸದಾಽಚಾರಂ ಶುಚಿರ್ನರಃ ॥**
**ಶ್ರಾವಯೇದ್ವಾ ಯಥಾನ್ಯಾಯಂ ಬ್ರಾಹ್ಮಣಾನ್ದಗ್ಧ ಕಿಲ್ಬಿಷಾನ್ ।**
**ಬ್ರಹ್ಮಲೋಕ ಮನುಪ್ರಾಪ್ಯ ಬ್ರಹ್ಮಣಾ ಸಹ ಮೋದತೇ ॥೧೨೨॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸದಾಚಾರ ವಿಚಾರ ವಿವರಣಂ ನಾಮ ಏಕೋನನವತಿ ತಮೋಽಧ್ಯಾಯಃ**

---

ದಲ್ಲಿ, ಶಾಸ್ತ್ರೋಕ್ತರೀತಿಯಲ್ಲಿ, ಶುದ್ಧಳೂ ಮತ್ತು ಮುಗುಳು ನಗೆ ನಗುತ್ತಿರುವವಳೂ, ಆದ ತನ್ನ ಪತ್ನಿಯನ್ನು ಪುರುಷನು ಶುದ್ಧನಾಗಿ ಸಂಪರ್ಕಮಾಡಬೇಕು. ಹೀಗೆ ಪ್ರಸಂಗ ಬಂದದ್ದರಿಂದ ಯತಿಗಳ ಧರ್ಮವನ್ನು ಹೇಳುತ್ತಾ ಎಲ್ಲಾ ಜೀವರ, ಒಳ್ಳೆಯ ಆಚಾರ ವಿಚಾರ ವನ್ನೂ, ಹೇಳಿದ್ದೇವೆ. ಪರಿಶುದ್ಧನಾದ ಮನುಷ್ಯನು ಇದನ್ನು ಓದಿ ದರೂ, ಕೇಳಿದರೂ, ಬ್ರಹ್ಮಲೋಕವು ಸಿಕ್ಕಿ ಬ್ರಹ್ಮನ ಜೊತೆಯಲ್ಲಿ ಸುಖ ಪಡುವನು.

೧೨೨. ಅಥವಾ ಶಾಸ್ತ್ರಕ್ಕೆ ಅನುಸಾರವಾಗಿ ಪಾಪವಿಲ್ಲದ ಬ್ರಾಹ್ಮಣ ರಿಗೆ ಇದನ್ನು ಹೇಳಿದರೂ, ಅಂತಹ ಬ್ರಾಹ್ಮಣನು ಬ್ರಹ್ಮಲೋಕವನ್ನು ಹೊಂದಿ ಬ್ರಹ್ಮನೊಂದಿಗೆ ಸುಖಪಡುವನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ "ಸದಾಚಾರ ವಿಚಾರ" ವನ್ನು ವಿವರಿಸಿರುವ ಎಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ಲಿಂಗಮಹಾಪುರಾಣೇ ಪೂರ್ವಭಾಗೇ
## ನವತಿತಮೋಽಧ್ಯಾಯಃ

॥ ಸೂತ ಉವಾಚ ॥

ಅತ ಊರ್ಧ್ವಂ ಪ್ರವಕ್ಷ್ಯಾಮಿ ಯತೀನಾಮಿಹ ನಿಶ್ಚಿತಂ ।
ಪ್ರಾಯಶ್ಚಿತ್ತಂ ಶಿವಪ್ರೋಕ್ತಂ ಯತೀನಾಂ ಪಾಪಶೋಧನಂ ॥ ೧ ॥

ಪಾಪಂ ಹಿ ತ್ರಿವಿಧಂ ಜ್ಞೇಯಂ ವಾಙ್ಮನಃ ಕಾಯಸಂಭವಂ ।
ಸತತಂ ಹಿ ದಿವಾರಾತ್ರೌ ಯೇನೇದಂ ವೇಷ್ಟ್ಯತೇ ಜಗತ್ ॥ ೨ ॥

ತತ್ಕರ್ಮಣಾ ವಿನಾಽಪ್ಯೇಷ ತಿಷ್ಠತೀತಿ ಪರಾ ಶ್ರುತಿಃ ।
ಕ್ಷಣಮೇವಂ ಪ್ರಯೋಜ್ಯಂ ತು ಆಯುಷ್ಯಂ ತು ವಿಧಾರಣಂ ॥ ೩ ॥

ಭವೇದ್ಯೋಗೋಽಪ್ರಮತ್ತಸ್ಯ ಯೋಗೋ ಹಿ ಪರಮಂ ಬಲಂ ।
ನ ಹಿ ಯೋಗಾತ್ಪರಂ ಕಿಂಚಿನ್ನರಾಣಾಂ ದೃಶ್ಯತೇ ಶುಭಂ ॥ ೪ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತನೆಯ ಅಧ್ಯಾಯವು.

೧-೩. ಸೂತನು ಹೇಳಿದನು— ಇನ್ನುಮುಂದೆ ಶಿವನಿಂದ ನಿಶ್ಚಯಿಸಲ್ಪಟ್ಟ, ಯತಿಗಳ ಪಾಪವನ್ನು ಹೋಗಲಾಡಿಸುವ, ಪ್ರಾಯಶ್ಚಿತ್ತವನ್ನು ವಿವರಿಸುವೆನು. ಮಾತು, ಮನಸ್ಸು, ಶರೀರ, ಈ ಮೂರರಿಂದಲೂ ಮಾಡಿರಬಹುದಾದ ಪಾಪವು ಮೂರು ಬಗೆಯಾಗಿರುವುದೆಂದು ತಿಳಿಯಬೇಕು. ಈ ಬಗೆಯ ಪಾಪವು ಪ್ರಪಂಚವೆಲ್ಲವನ್ನೂ ವ್ಯಾಪಿಸಿರುತ್ತದೆ. ಆದುದರಿಂದ ಹಗಲಿನಲ್ಲೂ ರಾತ್ರಿಯಲ್ಲಿಯೂ, ಯಾವಾಗಲೂ ಈ ಜಗತ್ತಿನಲ್ಲಿ ನಡೆಯುತ್ತಿರುವ ಇಂತಹ ಕರ್ಮವನ್ನು ಸನ್ಯಾಸಿಯು ಮಾಡುವುದಿಲ್ಲವೆಂದು ಉಪನಿಷತ್ತುಗಳು ಹೇಳುತ್ತವೆ. ಆಯುಸ್ಸು ಕಡಿಮೆಯಾಗುತ್ತಿರುವುದರಿಂದ ಅದರ ವೃದ್ಧಿಗಾಗಿ ಯೋಗಾಭ್ಯಾಸವನ್ನು ಮಾಡಬೇಕು.

೪-೬. ಜಾಗರೂಕನಾದ ಬ್ರಾಹ್ಮಣನಿಗೆ ಯೋಗ ಸಿದ್ಧಿಯಾಗು

ತಸ್ಮಾದ್ಯೋಗಂ ಪ್ರಶಂಸಂತಿ ಧರ್ಮಯುಕ್ತಾ ಮನೀಷಿಣಃ ।
ಅವಿದ್ಯಾಂ ವಿದ್ಯಯಾ ಜಿತ್ವಾ ಪ್ರಾಪ್ಯೈಶ್ವರ್ಯ ಮನುತ್ತಮಂ ॥ ೫ ॥
ದೃಷ್ಟ್ವಾ ಪರಾಽವರಂ ಧೀರಾಃ ಪರಂ ಗಚ್ಛಂತಿ ತತ್ಪದಂ ।
ವ್ರತಾನಿ ಯಾನಿ ಭಿಕ್ಷೂಣಾಂ ತಥೈವೋಪವ್ರತಾನಿ ಚ ॥ ೬ ॥
ಏಕೈಕಾಽತಿಕ್ರಮೇ ತೇಷಾಂ ಪ್ರಾಯಶ್ಚಿತ್ತಂ ವಿಧೀಯತೇ ।
ಉಪೇತ್ಯ ತು ಸ್ತ್ರಿಯಂ ಕಾಮಾತ್ಪ್ರಾಯಶ್ಚಿತ್ತಂ ವಿನಿರ್ದಿಶೇತ್ ॥ ೭ ॥
ಪ್ರಾಣಾಯಾಮ ಸಮಾಯುಕ್ತಂ ಚರೇತ್ಸಾಂತಪನಂ ವ್ರತಂ ।
ತತಶ್ಚರತಿ ನಿರ್ದೇಶಾತ್ಕೃಚ್ಛ್ರಂ ಚಾಂತೇ ಸಮಾಹಿತಃ ॥ ೮ ॥

---

ವುದು. ಯೋಗವೇ ಶ್ರೇಷ್ಠವಾದ ಶಕ್ತಿಯು. ಮನುಷ್ಯನಿಗೆ ಯೋಗಕ್ಕಿಂತಲೂ ಹೆಚ್ಚು ಮಂಗಳಕರವಾದುದು ಇನ್ನು ಯಾವುದೂ ಇಲ್ಲ. ಧರ್ಮಜ್ಞರಾದ ವಿದ್ವಾಂಸರು ಆದ್ದರಿಂದಲೇ ಯೋಗವನ್ನು ಪ್ರಶಂಸೆ ಮಾಡುತ್ತಾರೆ. ಧೀರರಾದ ಜ್ಞಾನಿಗಳು ಜ್ಞಾನದಿಂದ ಮಾಯೆಯನ್ನು ಜಯಿಸಿ ಶ್ರೇಷ್ಠವಾದ ಈಶ್ವರನ ಸ್ವರೂಪವನ್ನೇ ಹೊಂದಿ, ಪರಮಾತ್ಮನನ್ನು ಸಾಕ್ಷಾತ್ಕರಿಸಿ ಬ್ರಹ್ಮಾತ್ಮೈಕ್ಯದ ಅಪರೋಕ್ಷಾನುಭವರೂಪವಾದ ಮೋಕ್ಷವನ್ನು ಪಡೆಯುತ್ತಾರೆ. ಸನ್ಯಾಸಿಗಳಿಗೆ ಕೆಲವು ದೊಡ್ಡವ್ರತಗಳೂ, ಮತ್ತು ಕೆಲವು ಚಿಕ್ಕವ್ರತಗಳೂ ಗೊತ್ತುಮಾಡಲ್ಪಟ್ಟವೆ.

೭–೮. ಆ ವ್ರತಗಳ ಪೈಕಿ ಯಾವುದೊಂದನ್ನು ಮಾಡುವುದನ್ನು ಬಿಟ್ಟರೂ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿದೆ. ಯತಿಯು ಕಾಮಕ್ಕೆ ಒಳಗಾಗಿ ಸ್ತ್ರೀಸಂಪರ್ಕ ಮಾಡಿದರೆ ಪ್ರಾಯಶ್ಚಿತ್ತವು ಹೀಗೆ ಹೇಳಲ್ಪಟ್ಟಿದೆ. ಅವನು ಪ್ರಾಣಾಯಾಮವನ್ನು ಮಾಡಿ, ಸಾಂತಪನವೆಂಬ ವ್ರತವನ್ನು ಮಾಡಬೇಕು. ಈ ವ್ರತವನ್ನು ನಡೆಸಿದಮೇಲೆ ಕೊನೆಯಲ್ಲಿ ಅವನ ಮನಸ್ಸಿಗೆ ಶಾಂತಿಯುಂಟಾಗುವುದಕ್ಕಾಗಿ ಸೋಮಾರಿಯಾಗದೇ ತಿರುಗಿ ಆಶ್ರಮಕ್ಕೆ ಬಂದು ಧರ್ಮಗಳನ್ನು ಆಚರಿಸಬೇಕು. ವಿದ್ವಾಂಸರು ಧರ್ಮಕಾರ್ಯದ ನಿರ್ವಾಹಕ್ಕಾಗಿ ಅವಶ್ಯಕವಾಗಿ ಸುಳ್ಳನ್ನು ಹೇಳಬೇಕಾಗಿ ಬಂದು ಹಾಗೆಮಾಡಿದರೆ ಆ ಪಾಪವು ಉಂಟಾಗದೆಂದು ಹೇಳಿರುತ್ತಾರೆ. ಸಾಂತ

ಪುನರಾಶ್ರಮಮಾಗತ್ಯ ಚರೇದ್ಭಿಕ್ಷುರತಂದ್ರಿತಃ ।
ನ ಧರ್ಮಯುಕ್ತ ಮನೃತಂ ಹಿನಸ್ತೀತಿ ಮನೀಷಿಣಃ ॥ ೯ ॥

ತಥಾಽಪಿ ನ ಚ ಕರ್ತವ್ಯಂ ಪ್ರಸಂಗೋ ಹ್ಯೇಷ ದಾರುಣಃ ।
ಅಹೋರಾತ್ರೋಪವಾಸಶ್ಚ ಪ್ರಾಣಾಯಾಮಶತಂ ತಥಾ ॥೧೦॥

ಅಸದ್ವಾದೋ ನ ಕರ್ತವ್ಯೋ ಯತಿನಾ ಧರ್ಮಲಿಪ್ಸುನಾ ।
ಪರಮಾಪದ್ಗತೇನಾಽಪಿ ನ ಕಾರ್ಯಂ ಸ್ತೇಯಮಪ್ಯುತ ॥೧೧॥

ಸ್ತೇಯಾದಭ್ಯಧಿಕಃ ಕಶ್ಚಿನ್ನಾಸ್ತ್ಯಧರ್ಮ ಇತಿ ಶ್ರುತಿಃ ।
ಹಿಂಸಾ ಹ್ಯೇಷಾ ಪರಾ ಸೃಷ್ಟಾ ಸ್ತೈನ್ಯಂ ವೈ ಕಥಿತಂ ತಥಾ ॥೧೨॥

ಯದೇತದ್ದ್ರವಿಣಂ ನಾಮ ಪ್ರಾಣಾ ಹ್ಯೇತೇ ಬಹಿಶ್ಚರಾಃ ।
ಸ ತಸ್ಯ ಹರತೇ ಪ್ರಾಣಾನ್ಯೋ ಯಸ್ಯ ಹರತೇ ಧನಂ ॥೧೩॥

---

ಪನ, ಚಾಂದ್ರಾಯಣ ಕೃಚ್ಛ್ರ, ಮುಂತಾದ ಪ್ರಾಯಶ್ಚಿತ್ತಗಳ ಸ್ವರೂಪ ವನ್ನು ಮನುಸ್ಮೃತಿ ಅ. ೧೧. ಶ್ಲೋ ೧೧೫. ಮುಂತಾದ ಧರ್ಮಶಾಸ್ತ್ರ ಗಳಲ್ಲಿ ವಿವರಿಸಿದೆ.

೧೦–೧೨. ಹಾಗಿದ್ದರೂ ಸುಳ್ಳು ಹೇಳುವುದು ಬಹಳ ಭಯಂಕರ ವಾದ ಪಾಪವೇ ಸರಿ. ಸುಳ್ಳು ಹೇಳಿದ ಪಾಪ ಪರಿಹಾರಕ್ಕಾಗಿ ಹಗಲು ರಾತ್ರಿಗಳು ಉಪವಾಸ, ಮತ್ತು ನೂರುಸಲ ಪ್ರಾಣಾಯಾಮಗಳನ್ನು ಮಾಡುವಿಕೆಯೂ ವಿಧಿಸಲ್ಪಟ್ಟಿದೆ. ಧರ್ಮವನ್ನು ಅಪೇಕ್ಷಿಸುವ ಸಂನ್ಯಾಸಿಯು, ಕೆಟ್ಟಮಾತನ್ನು ಆಡಬಾರದು. ಎಂಥಾ ದೊಡ್ಡಕಷ್ಟದಲ್ಲಿ ಸಿಕ್ಕಿಬಿದ್ದಾಗ್ಯೂ ಸಂನ್ಯಾಸಿಯು ಕಳ್ಳತನ ಮಾಡಬಾರದು. ಕಳ್ಳತನ ಕ್ಕಿಂತಲೂ ದೊಡ್ಡದಾದ ಅಧರ್ಮವು ಮತ್ತೊಂದಿಲ್ಲವೆಂದು ವೇದಗಳು ಹೇಳುತ್ತವೆ. ಕಳ್ಳತನವೆಂಬುದು ಬಹು ದೊಡ್ಡದಾದ ಹಿಂಸೆಯ ಕೆಲಸ ವೆಂದೇ ಹೇಳಲ್ಪಟ್ಟಿದೆ. ಏಕೆಂದರೆ,

೧೩–೧೫. ದುಡ್ಡೆಂಬುದು ಮನುಷ್ಯನ ಹೊರಗಡೆಯಲ್ಲಿರುತ್ತಾ, ಸಂಚರಿಸುವ ಪ್ರಾಣಗಳೇ ಎಂದು ತಿಳಿಯಬೇಕು. ಹೀಗಿರಲಾಗಿ ಯಾವನು ಇನ್ನೊಬ್ಬನ ದುಡ್ಡನ್ನು ಕದಿಯುತ್ತಾನೆಯೋ ಅವನು ಇನ್ನೊ

ಏವಂ ಕೃತ್ವಾ ಸುದುಷ್ಕಾತ್ಮಾ ಭಿನ್ನವೃತ್ತೋ ವ್ರತಾಚ್ಚ್ಯುತಃ ।
ಭೂಯೋ ನಿರ್ವೇದಮಾಪನ್ನಃ ಚರೇಚ್ಚಾಂದ್ರಾಯಣಂ ವ್ರತಂ ॥
ವಿಧಿನಾ ಶಾಸ್ತ್ರದೃಷ್ಟೇನ ಸಂವತ್ಸರಮಿತಿ ಶ್ರುತಿಃ ।
ತತಃ ಸಂವತ್ಸರಸ್ಯಾಂತೇ ಭೂಯಃ ಪ್ರಕ್ಷೀಣಕಲ್ಮಷಃ ॥
ಪುನರ್ನಿರ್ವೇದಮಾಪನ್ನ ಶ್ಚರೇದ್ಭಿಕ್ಷು ರತಂದ್ರಿತಃ ॥೧೫॥

ಅಹಿಂಸಾ ಸರ್ವಭೂತಾನಾಂ ಕರ್ಮಣಾ ಮನಸಾ ಗಿರಾ ।
ಅಕಾಮಾದಪಿ ಹಿಂಸೇತ ಯದಿ ಭಿಕ್ಷುಃ ಪಶೂನ್ ಕೃಮೀನ್ ॥೧೬॥
ಕೃಚ್ಛ್ರಾತಿಕೃಚ್ಛ್ರಂ ಕುರ್ವೀತ ಚಾಂದ್ರಾಯಣ ಮಥಾಪಿ ವಾ ।
ಸ್ಕಂದೇದಿಂದ್ರಿಯ ದೌರ್ಬಲ್ಯಾತ್ ಸ್ತ್ರಿಯಂ ದೃಷ್ಟ್ವಾ ಯತಿರ್ಯದಿ ॥
ತೇನ ಧಾರಯಿತವ್ಯಾ ವೈ ಪ್ರಾಣಾಯಾಮಾಸ್ತು ಷೋಡಶ ।
ದಿವಾ ಸ್ಕನ್ನಸ್ಯ ವಿಪ್ರಸ್ಯ ಪ್ರಾಯಶ್ಚಿತ್ತಂ ವಿಧೀಯತೇ ॥೧೮॥

---

ಬ್ಬನ ಪ್ರಾಣವನ್ನೇ ಕಿತ್ತುಕೊಂಡ ಹಾಗಾಯಿತು. ಹೀಗೆ ಕೆಟ್ಟ ನಡತೆಯುಳ್ಳ ಯತಿಯು ತನ್ನ ಯತಿಧರ್ಮವನ್ನು ಹಾಳುಮಾಡಿಕೊಂಡಂತಾಯಿತು. ಆದರೂ ಹೆಚ್ಚಾಗಿ ಪಶ್ಚಾತ್ತಾಪಪಟ್ಟು ಚಾಂದ್ರಾಯಣ ವ್ರತವನ್ನು ಮಾಡಬೇಕು. ಶಾಸ್ತ್ರಯುಕ್ತಕ್ರಮದಲ್ಲಿ ಒಂದುವರ್ಷಕಾಲ ಈ ವ್ರತವನ್ನು ಮಾಡಬೇಕು. ಒಂದುವರ್ಷದ ಅನಂತರದಲ್ಲಿ ಅವನ ಪಾಪವೆಲ್ಲವೂ ಕಳೆದು ಹೋದ ಮೇಲೆ ಸೋಮಾರಿಯಾಗಿಲ್ಲದೇ ತನ್ನ ಯತಿಧರ್ಮವನ್ನು ನಡೆಸಬೇಕು.

೧೬—೧೮. ಕೆಲಸದಿಂದಲೂ, ಮಾತಿನಿಂದಲೂ, ಮನಸ್ಸಿನಿಂದಲೂ, ಅಹಿಂಸೆಯನ್ನು ಪಾಲಿಸಬೇಕು. ಸಂನ್ಯಾಸಿಯು ಇಷ್ಟವಿಲ್ಲದೆಯೂ ಆಕಸ್ಮಾತ್ ಪಶುಗಳು, ಹುಳುಗಳು, ಮುಂತಾದುವುಗಳ ಹಿಂಸೆಗೆ ಕಾರಣನಾಗಬಾರದು. ಅಂತಹ ಸಂದರ್ಭದಲ್ಲಿ ಕೃಚ್ಛ್ರಾತಿಕೃಚ್ಛ್ರಗಳೆಂಬ ವ್ರತಗಳನ್ನಾಗಲೀ ಆಚರಿಸಿ ಅಥವಾ ಚಾಂದ್ರಾಯಣ ವ್ರತವನ್ನಾಗಲೀ ಆಚರಿಸಿ ಶುದ್ಧನಾಗಬೇಕು. ಸಂನ್ಯಾಸಿಯ ಮನಸ್ಸು ದುರ್ಬಲವಾಗಿದ್ದುದರಿಂದ ಹೆಂಗುಸನ್ನು ನೋಡಿ ವಿಕಾರವನ್ನು ಹೊಂದಿದರೆ ಹದಿನಾರು ಪ್ರಾಣಾಯಾಮವನ್ನು ಮಾಡಬೇಕು. ಹಗಲಿನಲ್ಲಿ ವಿಕಾರಹೊಂದಿದ ಬ್ರಾಹ್ಮಣನಿಗೆ ಈ ಪ್ರಾಯಶ್ಚಿತ್ತವೂ ಹೇಳಲ್ಪಟ್ಟದೆ.

ತ್ರಿರಾತ್ರ ಮುಪವಾಸಾಶ್ಚ ಪ್ರಾಣಾಯಾಮಶತಂ ತಥಾ ।
ರಾತ್ರೌ ಸ್ಕನ್ನಃ ಶುಚಿಃ ಸ್ನಾತ್ವಾ ದ್ವಾದಶೈವ ತು ಧಾರಣಾಃ ॥೧೯॥
ಪ್ರಾಣಾಯಾಮೇನ ಶುದ್ಧಾತ್ಮಾ ವಿರಜಾ ಜಾಯತೇ ದ್ವಿಜಾಃ ।
ಏಕಾನ್ನಂ ಮಧು ಮಾಂಸಂ ವಾ ಅಶೃತಾಽನ್ನಂ ತಥೈವ ಚ ॥೨೦॥
ಅಭೋಜ್ಯಾನಿ ಯತೀನಾಂ ತು ಪ್ರತ್ಯಕ್ಷಲವಣಾನಿ ಚ ।
ಏಕೈಕಾಽತಿಕ್ರಮಾತ್ತೇಷಾಂ ಪ್ರಾಯಶ್ಚಿತ್ತಂ ವಿಧೀಯತೇ ॥೨೧॥
ಪ್ರಾಜಾಪತ್ಯೇನ ಕೃಚ್ಛ್ರೇಣ ತತಃ ಪಾಪಾತ್ಪ್ರಮುಚ್ಯತೇ ।
ವ್ಯತಿಕ್ರಮಾಶ್ಚ ಯೇ ಕೇಚಿದ್ವಾಙ್ಮನಃ ಕಾಯಸಂ ಭವಾಃ ॥೨೨॥
ಸದ್ಭಿಃ ಸಹ ವಿನಿಶ್ಚಿತ್ಯ ಯದ್ಬ್ರೂಯು ಸ್ತತ್ಸಮಾಚರೇತ್ ॥೨೩॥

---

೧೯–೨೧. ಹಾಗೆ ವಿಕಾರಹೊಂದಿದ ಬ್ರಾಹ್ಮಣನಿಗೆ ಮೂರುದಿವಸ ಉಪವಾಸವೂ, ನೂರು ಪ್ರಾಣಾಯಾಮಗಳೂ, ವಿಧಾನ ಮಾಲ್ಪಟ್ಟಿವೆ. ವಿಕಾರಹೊಂದಿದ ಬ್ರಾಹ್ಮಣನು ರಾತ್ರಿಯಲ್ಲಾ ಸ್ನಾನಮಾಡಿ, ಪರಿಶುದ್ಧನಾಗಿ ಹನ್ನೆರಡು ಪ್ರಾಣಾಯಾಮಗಳನ್ನು ಮಾಡಿದರೆ ಪಾಪವನ್ನು ಕಳೆದುಕೊಂಡು ಶುದ್ಧನಾಗುತ್ತಾನೆ. ಪ್ರತಿನಿತ್ಯವೂ ಒಬ್ಬನ ಮನೆಯ ಅನ್ನವನ್ನಾಗಲಿ, ಮದ್ಯವನ್ನಾಗಲಿ, ಮಾಂಸವನ್ನಾಗಲಿ, ಬೆಂದಿಲ್ಲದ ಅನ್ನವನ್ನಾಗಲಿ, ಸಂನ್ಯಾಸಿಯು ಭೋಜನಮಾಡಬಾರದು. ಮತ್ತು ವಿಶೇಷ ಉಪ್ಪನ್ನು ಪ್ರತ್ಯೇಕವಾಗಿ ಸೇವಿಸಬಾರದು. ಇವುಗಳಲ್ಲಿ ಯಾವ ನಿಯಮಗಳನ್ನು ಮೀರಿದರೂ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿದೆ.

೨೨–೨೩. ಅಲ್ಲದೇ ಪ್ರಾಜಾಪತ್ಯವೆಂಬ ವ್ರತವನ್ನು ಮಾಡೋಣದರಿಂದ, ಯತಿಯು ಆ ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾನೆ. ಇವುಗಳಲ್ಲದೇ, ಮಾತು, ಮನಸ್ಸು, ಶರೀರಗಳಿಂದ ಉಂಟಾಗುವ ಬೇರೇ ವಿಧವಾದ ಪಾಪಗಳನ್ನು ಮಾಡಿದರೆ ಸತ್ಪುರುಷರೊಡನೆ ವಿಚಾರಮಾಡಿ, ಅವರು ಹೇಳುವ ಪ್ರಾಯಶ್ಚಿತ್ತವನ್ನು ನಡೆಸಿ ಪಾಪವನ್ನು ಕಳೆದುಕೊಳ್ಳಬಹುದು. ಸಂನ್ಯಾಸಿಯು ಎಲ್ಲಾ ಪ್ರಾಣಿಗಳಲ್ಲಿಯೂ ಸಮಾನವಾದ ಉಪಕಾರ, ದಯಾಭಾವವುಳ್ಳವನಾಗಿಯೂ, ಮಣ್ಣಿನ ಹೆಂಟೆ ಮತ್ತು ಚಿನ್ನಗಳ

ಚರೇದ್ಧಿ ಶುದ್ಧಃ ಸಮಲೋಷ್ಟಕಾಂಚನಃ ।
ಸಮಸ್ತಭೂತೇಷು ಚ ಸತ್ಸಮಾಹಿತಃ ॥
ಸ್ಥಾನಂ ಧ್ರುವಂ ಶಾಶ್ವತಮವ್ಯಯಂ ತು ।
ಪರಂ ಹಿ ಗತ್ವಾ ನ ಪುನರ್ಹಿ ಜಾಯತೇ ॥೨೪॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಯತಿಪ್ರಾಯಶ್ಚಿತ್ತವಿಚಾರ ವರ್ಣನಂ ನಾಮ ನವತಿತಮೋಽಧ್ಯಾಯಃ

---

ಲ್ಲಿಯೂ ಸಮನಾದ ಆಶಾರಾಹಿತ್ಯದ ಭಾವವುಳ್ಳವನಾಗಿಯೂ, ಯೋಗಾಭ್ಯಾಸದಿಂದ ಸಮಾಧಾನವನ್ನು ಪಡೆದಿರುವ ಚಿತ್ತದಿಂದ ತನ್ನ ಧರ್ಮಗಳನ್ನು ನಡೆಸುತ್ತಿದ್ದರೆ, ಅತ್ಯಂತ ಶ್ರೇಷ್ಠವಾದ, ಸ್ಥಿರವಾದ ಬ್ರಹ್ಮಾತ್ಮೈಕ್ಯ ರೂಪವಾದ ಮೋಕ್ಷದ ನಿತ್ಯಾನಂದವನ್ನು ಹೊಂದಿ, ಪುನಃ ಹುಟ್ಟುಸಾವುಗಳಿಲ್ಲದೆ ಪ್ರಪಂಚದಲ್ಲಿ ಸಂಸಾರದುಃಖಕ್ಕೆ ಹಿಂತಿರುಗುವುದಿಲ್ಲ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ "ಯತಿಗಳ ಪ್ರಾಯಶ್ಚಿತ್ತ ವಿಚಾರವನ್ನು ತಿಳಿಸಿರುವ ತೊಂಬತ್ತನೆಯ ಅಧ್ಯಾಯವು" ಮುಗಿದುದು.

अथ श्री लिंगमहापुराणे पूर्वभागे
एकनवतितमोऽध्यायः

॥ सूत उवाच ॥

अत ऊर्ध्वं प्रवक्ष्यामि अरिष्टानि निबोधत ।
येन ज्ञानविशेषेण मृत्युं पश्यंति योगिनः ॥ १ ॥

अरुंधतीं ध्रुवं चैव सोमच्छायां महापथं ।
यो न पश्येन्न जीवेत्स नरः संवत्सरात्परं ॥ २ ॥

अरश्मिवंत मादित्यं रश्मिवंतं च पावकं ।
यः पश्यति न जीवेद्वै मासादेकादशात्परं ॥ ३ ॥

वमेन्मूत्रं पुरीषं च सुवर्णं रजतं तथा ।
प्रत्यक्षमथवा स्वप्ने दशमासान्न जीवति ॥ ४ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತೊಂದನೆಯ ಅಧ್ಯಾಯವು.

೧-೩. ಸೂತನು ಹೇಳಿದನು:—ಇನ್ನು ಮುಂದೆ ಮಾನವರಿಗೆ ಸಮೀಪವಾಗಿರಬಹುದಾದ ಸಾವಿನ ಗುರುತುಗಳನ್ನು ಹೇಳುವೆನು, ಕೇಳಿರಿ. ಯೋಗಿಗಳು ತಮ್ಮ ಜ್ಞಾನ ವಿಶೇಷದಿಂದ ಜನಗಳ ಸಾವಿನ ಸೂಚನೆಯನ್ನು ಮುಂಚೆಯೇ ಗೊತ್ತುಮಾಡುತ್ತಾರೆ. ಯಾವ ಮನುಷ್ಯನು ಅರುಂಧತೀ ನಕ್ಷತ್ರ, ಧ್ರುವನಕ್ಷತ್ರ, ಛಾಯಾಪುರುಷ, ಆಕಾಶ ಗಂಗೆಯ ಮಾರ್ಗಗಳನ್ನು ನೋಡುವುದಿಲ್ಲವೋ ಅವನು ಒಂದು ವರ್ಷದ ಮೇಲೆ ಬದುಕಲಾರನು. ಕಿರಣಗಳಿಲ್ಲದ ಸೂರ್ಯನನ್ನು, ಬಹಳ ಪ್ರಕಾಶ ಮಾನವಾದ ಬೆಂಕಿಯನ್ನೂ, ಯಾವನು ನೋಡುವನೋ ಅವನು ಹನ್ನೊಂದು ತಿಂಗಳಮೇಲೆ ಬದುಕಲಾರನು.

೪-೬. ಮಲಮೂತ್ರಗಳನ್ನು ಕಾರುವವನು, ಚಿನ್ನ, ಬೆಳ್ಳಿಗಳನ್ನು ಕಾರುವವನು, ಪ್ರತ್ಯಕ್ಷದಲ್ಲಿಯಾಗಲಿ, ಅಥವಾ ಸ್ವಪ್ನದಲ್ಲಿಯಾಗಲಿ

ರುಕ್ಮವರ್ಣಂ ದ್ರುಮಂ ಪಶ್ಯೇದ್ಗಂಧರ್ವನಗರಾಣಿ ಚ ।
ಪಶ್ಯೇತ್ಪ್ರೇತ ಪಿಶಾಚಾಂಶ್ಚ ನವಮಾಸಾನ್ನ ಜೀವತಿ ॥ ೫ ॥

ಅಕಸ್ಮಾಚ್ಚ ಭವೇತ್ಸ್ಥೂಲೋ ಹ್ಯಕಸ್ಮಾಚ್ಚ ಕೃಶೋ ಭವೇತ್ ।
ಪ್ರಕೃತೇಶ್ಚ ನಿವರ್ತೇತ ಚಾಽಷ್ಟೌ ಮಾಸಾಂಶ್ಚ ಜೀವತಿ ॥ ೬ ॥

ಅಗ್ರತಃ ಪೃಷ್ಠತೋ ವಾಽಪಿ ಖಂಡಂ ಯಸ್ಯ ಪದಂ ಭವೇತ್ ।
ಪಾಂಸುಕೇ ಕರ್ದಮೇ ವಾಽಪಿ ಸಪ್ತಮಾಸಾನ್ನ ಜೀವತಿ ॥ ೭ ॥

ಕಾಕಃ ಕಪೋತೋ ಗೃಧ್ರೋ ವಾ ನಿಲೀಯೇದ್ಯಸ್ಯ ಮೂರ್ಧನಿ ।
ಕ್ರವ್ಯಾದೋ ವಾ ಖಗೋ ಯಸ್ಯ ಷಣ್ಮಾಸಾ ನ್ನಾತಿವರ್ತತೇ ॥ ೮ ॥

ಗಚ್ಛೇದ್ವಾಯಸ ಪಂಕ್ತಿಭಿಃ ಪಾಂಸುವರ್ಷೇಣ ವಾ ಪುನಃ ।
ಸ್ವಚ್ಛಾಯಾಂ ವಿಕೃತಾಂ ಪಶ್ಯೇಚ್ಚತುಃ ಪಂಚ ಸ ಜೀವತಿ ॥ ೯ ॥

---

ಹಾಗೆ ಆದುದನ್ನು ಕಂಡರೆ ಹತ್ತುತಿಂಗಳಮೇಲೆ ಬದುಕಲಾರನು. ಚಿನ್ನದ ಬಣ್ಣದ ಮರವನ್ನಾಗಲೀ, ಗಂಧರ್ವ ನಗರಗಳನ್ನಾಗಲಿ, ಪ್ರೇತ, ಪಿಶಾಚಗಳನ್ನಾಗಲಿ, ನೋಡಿದರೆ ಒಂಬತ್ತು ತಿಂಗಳಮೇಲೆ ಬದುಕಲಾರನು. ಇದ್ದಕ್ಕಿದ್ದ ಹಾಗೆಯೇ ದಪ್ಪನಾದರೂ, ಅಥವಾ ಸಣ್ಣಗಾದರೂ, ಹೀಗೆ ಶರೀರ ವ್ಯತ್ಯಾಸವಾದರೆ ಅವನು ಎಂಟು ತಿಂಗಳು ಮಾತ್ರ ಬದುಕುವನು.

೭–೯. ಯಾವನ ಕಾಲಿನ ಮುಂಭಾಗದಲ್ಲಾಗಲಿ, ಅಥವಾ ಹಿಂಭಾಗದಲ್ಲಾಗಲಿ, ದೂಳಿನಲ್ಲಾಗಲಿ, ಕೆಸರಿನಲ್ಲಾಗಲಿ, ಶೀಳಿದಂತೆ ಕಂಡರೆ ಅವನು ಕೇವಲ ಏಳು ತಿಂಗಳು ಮಾತ್ರ ಜೀವಿಸುತ್ತಾನೆ. ಯಾವನ ತಲೆಯಮೇಲೆ ಕಾಗೆ, ಪಾರಿವಾಳ, ಹದ್ದು, ಅಥವಾ ಮಾಂಸಭಕ್ಷಣ ಮಾಡುವ ಹಕ್ಕಿ, ಇವುಗಳಲ್ಲಿ ಯಾವುದಾದರೂ ಅಡಗಿಕೊಂಡರೆ, ಅವನು ಆರು ತಿಂಗಳಿಗಿಂತಲೂ ಹೆಚ್ಚಾಗಿ ಬದುಕಲಾರನು. ಯಾವನ ಪಕ್ಕದಲ್ಲಿ ಕಾಗೆಗಳು ಸಾಲುಸಾಲಾಗಿ ಹಾರುವುವೋ, ಧೂಳಿನ ಮಳೆಗರೆಯುವುದೋ ವಿಕಾರವಾದ ಆಕಾರದ ತನ್ನ ನೆರಳನ್ನು ನೋಡುವನೋ, ಅವನು ನಾಲ್ಕೈದು ತಿಂಗಳು ಕಾಲ ಮಾತ್ರ ಜೀವಿಸುವನು.

ಅನಭ್ರೇ ವಿದ್ಯುತಂ ಪಶ್ಯೇದ್ದಕ್ಷಿಣಾಂ ದಿಶಮಾಸ್ಥಿತಾಂ ।
ಉದಕೇ ಧನುರೈಂದ್ರಂ ವಾ ತ್ರೀಣಿ ದ್ವೌ ವಾ ಸ ಜೀವತಿ ॥೧೦॥

ಅಪ್ಸು ವಾ ಯದಿ ವಾಽದರ್ಶೇ ಯೋ ಹ್ಯಾತ್ಮಾನಂ ನ ಪಶ್ಯತಿ ।
ಅಶಿರಸ್ಕಂ ತಥಾ ಪಶ್ಯೇನ್ಮಾಸಾದೂರ್ಧ್ವಂ ನ ಜೀವತಿ ॥೧೧॥

ಶವಗಂಧಿ ಭವೇದ್ಗಾತ್ರಂ ವಸಾಗಂಧಮಥಾಪಿ ವಾ ।
ಮೃತ್ಯುರ್ಹ್ಯುಪಾಗತಸ್ತಸ್ಯ ಅರ್ಧಮಾಸಾನ್ನ ಜೀವತಿ ॥೧೨॥

ಯಸ್ಯ ವೈ ಸ್ನಾತಮಾತ್ರಸ್ಯ ಹೃದಯಂ ಪರಿಶುಷ್ಯತಿ ।
ಧೂಮಂ ವಾ ಮಸ್ತಕಾತ್ಪಶ್ಯೇದ್ದಶಾಹಾನ್ನ ಸ ಜೀವತಿ ॥೧೩॥

ಸಂಭಿನ್ನೋ ಮಾರುತೋ ಯಸ್ಯ ಮರ್ಮಸ್ಥಾನಾನಿ ಕೃಂತತಿ ।
ಅದ್ಭಿಃ ಸ್ಪೃಷ್ಟೋ ನ ಹೃಷ್ಯೇತ ತಸ್ಯ ಮೃತ್ಯುರುಪಸ್ಥಿತಃ ॥೧೪॥

---

೧೦–೧೨. ಯಾವನು ದಕ್ಷಿಣ ದಿಕ್ಕಿನಲ್ಲಿ ಮೇಘವಿಲ್ಲದೆ ಮಿಂಚನ್ನು ನೋಡುವನೋ, ನೀರಿನಲ್ಲಿ ಕಾಮನಬಿಲ್ಲನ್ನು ನೋಡುವನೋ, ಅವನು ಕೇವಲ ಎರಡು ಮೂರು ತಿಂಗಳು ಮಾತ್ರ ಬದುಕಿರುತ್ತಾನೆ. ಯಾವನು ನೀರಿನಲ್ಲಾಗಲಿ, ಕನ್ನಡಿಯಲ್ಲಾಗಲಿ, ತನ್ನ ದೇಹವನ್ನು ಕಾಣುವುದಿಲ್ಲವೋ, ಅಥವಾ ತಲೆಯು ಮಾತ್ರ ಕಾಣಿಸದೇ ದೇಹವು ಕಂಡರೆ, ಅವನು ಒಂದು ತಿಂಗಳು ಮೇಲೆ ಬದುಕುವುದಿಲ್ಲ. ಯಾವನ ಶರೀರವು ಶವದ ಅಥವಾ ವಸೆಯ ವಾಸನೆಯುಳ್ಳದ್ದಾಗಿರುವುದೋ ಅವನಿಗೆ ಅರ್ಧ ತಿಂಗಳೊಳಗೆ ಸಾವು ಖಂಡಿತವಾಗಿ ಸಂಭವಿಸುವುದು.

೧೩–೧೪. ಯಾವನಿಗೆ ಸ್ನಾನಮಾಡಿದ ಕೂಡಲೇ ಎದೆಯು ಒಣಗುವುದೋ, ತಲೆಯಿಂದ ಹೊಗೆ ಹೊರಡುವುದನ್ನು ಯಾವನು ಕಾಣುವನೋ, ಅವನು ಹತ್ತು ದಿನದ ಮೇಲೆ ಬದುಕಿರಲಾರನು. ಯಾವನ ಕರುಳುಗಳನ್ನು ವಾಯುಗಳು ತುಂಬಿ ನೋಯಿಸುತ್ತಿದೆಯೋ, ನೀರನ್ನು ಮುಟ್ಟಿದರೆ ಯಾರಿಗೆ ನೋವಾಗುವುದೋ ಅವನಿಗೆ ಸಾವು ಸಮೀಪದಲ್ಲೇ ಇದೆಯೆಂದು ತಿಳಿಯಬೇಕು. ಕರಡಿ, ಕೋತಿ, ಇವುಗಳನ್ನು ಜೋಡಿಸಿರುವ

ಋಕ್ಷವಾನರಯುಕ್ತೇನ ರಥೇನಾಽಶಾಂ ಚ ದಕ್ಷಿಣಾಂ ।
ಗಾಯನ್ನೃತ್ಯನ್ವ್ರಜೇತ್ಸ್ವಪ್ನೇ ವಿದ್ಯಾನ್ಮೃತ್ಯುರುಪಸ್ಥಿತಃ ॥೧೫॥

ಕೃಷ್ಣಾಂಽಬರಧರಾ ಶ್ಯಾಮಾ ಗಾಯಂತೀ ವಾಽಪ್ಯಥಾಽಂಗನಾ ।
ಯನ್ನಯೇದ್ದಕ್ಷಿಣಾಮಾಶಾಂ ಸ್ವಪ್ನೇ ಸೋಽಪಿ ನ ಜೀವತಿ ॥೧೬॥

ಛಿದ್ರಂ ವಾ ಸ್ವಸ್ಯ ಕಂಠಸ್ಯ ಸ್ವಪ್ನೇ ಯೋ ವೀಕ್ಷತೇ ನರಃ ।
ನಗ್ನಂ ವಾ ಶ್ರಮಣಂ ದೃಷ್ಟ್ವಾ ವಿದ್ಯಾನ್ಮೃತ್ಯುಮುಪಸ್ಥಿತಂ ॥೧೭॥

ಆಮಸ್ತಕತಲಾದ್ಯಸ್ತು ನಿಮಜ್ಜೇತ್ಪಂಕ ಸಾಗರೇ ।
ದೃಷ್ಟ್ವಾ ತು ತಾದೃಶಂ ಸ್ವಪ್ನಂ ಸದ್ಯ ಏವ ನ ಜೀವತಿ ॥೧೮॥

ಭಸ್ಮಾಂಗಾರಾಂಶ್ಚ ಕೇಶಾಂಶ್ಚ ನದೀಂ ಶುಷ್ಕಾಂ ಭುಜಂಗಮಾನ್ ।
ಪಶ್ಯೇದ್ಯೋ ದಶರಾತ್ರಂ ತು ನ ಸ ಜೀವತಿ ತಾದೃಶಃ ॥೧೯॥

---

ರಥದಿಂದ ದಕ್ಷಿಣ ದಿಕ್ಕಿಗೆ ಗಾನಮಾಡುತ್ತಾ, ನಾಟ್ಯಮಾಡುತ್ತಾ ಸ್ವಪ್ನದಲ್ಲಿ ಹೋದಹಾಗೆ ಯಾವನು ಕಾಣುವನೋ ಅವನಿಗೆ ಸಾವು ಸಮೀಪದಲ್ಲಿಯೇ ಇದೆಯೆಂದು ತಿಳಿಯಬೇಕು.

೧೬. ಕಪ್ಪುಬಟ್ಟೆಯುಟ್ಟಿರುವ, ಕಪ್ಪಗಿರುವ, ಗಾನಮಾಡುತ್ತಿರುವ, ಹೆಂಗುಸು ದಕ್ಷಿಣ ದಿಕ್ಕಿಗೆ ಕರೆದುಕೊಂಡು ಹೋದಹಾಗೆ ಸ್ವಪ್ನದಲ್ಲಿ ಕಂಡರೆ, ಅಂತಹ ಮನುಷ್ಯನಿಗೆ ಸಾವು ಸಮೀಪಿಸಿದೆಯೆಂದು ತಿಳಿಯಬೇಕು.

೧೭–೧೯. ಯಾವ ಮನುಷ್ಯನು ತನ್ನ ಕತ್ತಿನಲ್ಲಿ ರಂಧ್ರವನ್ನು ನೋಡುತ್ತಾನೋ, ಅಥವಾ ಬರಿಯ ಬೆತ್ತಲೆಯಲ್ಲಿರುವ ಬೌದ್ಧಸಂನ್ಯಾಸಿಯನ್ನು ನೋಡುತ್ತಾನೋ, ಅವನಿಗೆ ಸಾವು ಸಮೀಪದಲ್ಲಿದೆಯೆಂದು ತಿಳಿಯಬೇಕು. ಯಾವನು ಕೆಸರಿನ ಗುಂಡಿಯಲ್ಲಿ ಕಾಲಿನಿಂದ ತಲೆಯವರೆಗೂ ತಾನು ಮುಳುಗಿರುವುದನ್ನು ಸ್ವಪ್ನದಲ್ಲಿ ಕಾಣುವನೋ, ಅವನಿಗೆ ಸಾವು ಸಮೀಪದಲ್ಲಿಯೇ ಇದೆಯೆಂದು ತಿಳಿಯಬೇಕು. ಯಾವನು ಬೂದಿ, ಬೆಂಕಿಗಳನ್ನೂ, ಕೂದಲು ಮತ್ತು ಒಣಗಿದ ನದಿಯನ್ನೂ ಮತ್ತು ಹಾವುಗಳನ್ನೂ ಸ್ವಪ್ನದಲ್ಲಿ ಕಾಣುವನೋ, ಅವನಿಗೆ ಹತ್ತು ದಿವಸಗಳಲ್ಲೇ ಸಾವು ಬರುವುದು ನಿಶ್ಚಯ.

ಕೃಷ್ಣೈರ್ಲಕ್ಷ್ಯ ವಿಕಸ್ಯೈಶ್ಚೈವ ಪುರುಷೈ ರುದ್ಯತಾಽಯುಧೈಃ ।
ಪಾಷಾಣೈಸ್ತಾಡ್ಯತೇ ಸ್ವಪ್ನೇ ಯಃ ಸದ್ಯೋ ನ ಸ ಜೀವತಿ ॥೨೦॥
ಸೂರ್ಯೋದಯೇ ಪ್ರತ್ಯುಷಸಿ ಪ್ರತ್ಯಕ್ಷಂ ಯಸ್ಯ ವೈ ಶಿವಾಃ ।
ಕ್ರೋಶಂತ್ಯಭಿಮುಖಂ ಪ್ರೇತ್ಯ ಸ ಗತಾಯುರ್ಭವೇನ್ನರಃ ॥೨೧॥
ಯಸ್ಯ ವಾ ಸ್ನಾತಮಾತ್ರಸ್ಯ ಹೃದಯಂ ತಾಡ್ಯತೇ ಭೃಶಂ ।
ಜಾಯತೇ ದಂತಹರ್ಷಶ್ಚ ತಂ ಗತಾಽಯುಷಮಾದಿಶೇತ್ ॥೨೨॥
ಭೂಯೋ ಭೂಯಸ್ತ್ರಸೇದ್ಯಸ್ತು ರಾತ್ರೌ ವಾ ಯದಿ ವಾ ದಿವಾ
ದೀಪಗಂಧಂ ಚ ನಾಽಘ್ರಾತಿ ವಿದ್ಯಾನ್ಮೃತ್ಯುಮುಪಸ್ಥಿತಂ ॥೨೩॥
ರಾತ್ರೌ ಚೇಂದ್ರಧನುಃ ಪಶ್ಯೇದ್ದಿವಾ ನಕ್ಷತ್ರಮಂಡಲಂ ।
ಪರನೇತ್ರೇಷು ಚಾಽತ್ಮಾನಂ ನ ಪಶ್ಯೇನ್ನ ಸ ಜೀವತಿ ॥೨೪॥

---

೨೦-೨೨. ಯಾವನು ಕಪ್ಪಗಿರುವ, ಭಯಂಕರವಾದ ಆಕಾರವುಳ್ಳ, ಆಯುಧಗಳನ್ನು ಎತ್ತಿ ಹಿಡಿದಿರುವ ಪುರುಷರಿಂದ, ಕಲ್ಲುಗಳಿಂದ ಸ್ವಪ್ನದಲ್ಲಿ ಹೊಡೆಯಲ್ಪಡುತ್ತಿರುವಂತೆ ಕಾಣುತ್ತಾನೋ, ಅವನು ತಕ್ಷಣ ಸಾಯುವನು. ಸ್ನಾನಮಾಡಿದ ಕೂಡಲೇ ಯಾವನ ಎದೆಯು ಬಡಿದುಕೊಳ್ಳುವುದೋ, ಹಲ್ಲು ಅಲ್ಲಾಡುವುದೋ, ಅವನಿಗೆ ಆಯುಸ್ಸು ಮುಗಿದಿದೆಯೆಂದು ತಿಳಿಯಬೇಕು.

೨೩-೨೬. ಯಾವನು ರಾತ್ರಿಯಲ್ಲಾಗಲಿ, ಹಗಲಿನಲ್ಲಾಗಲಿ, ಪದೇಪದೇ ನಡುಗುವನೋ, ದೀಪ ಆರಿಸಿದ ಮೇಲೆ ಬರುವ ವಾಸನೆಯನ್ನು ಆಘ್ರಾಣಿಸಲಾರನೋ ಅವನಿಗೆ ಸಾವು ಸನ್ನಿಹಿತವಾಗಿರುತ್ತದೆ. ಯಾವನು ರಾತ್ರಿಯಲ್ಲಿ ಕಾಮನಬಿಲ್ಲನ್ನೂ, ಹಗಲಿನಲ್ಲಿ ನಕ್ಷತ್ರ ಸಮೂಹವನ್ನೂ, ಇತರರ ಕಣ್ಣಿನಲ್ಲಿ ತನ್ನ ಶರೀರವನ್ನೂ, ನೋಡುವನೋ ಅವನು ಆಕ್ಷಣದಲ್ಲಿ ಸಾಯುವನು. ಯಾವನ ಒಂದು ಕಣ್ಣು ದ್ರವವನ್ನು ಸುರಿಸುವುದೋ, ಕಿವಿಗಳು ತಮ್ಮ ಸ್ಥಾನದಿಂದ ಕಳಚುವುವೋ, ಮೂಗು ವಕ್ರವಾಗಾಗುವುದೋ, ಅವನಿಗೆ ಸಾವು ಸನ್ನಿಹಿತವಾಗಿರುತ್ತದೆ.

ನೇತ್ರಮೇಕಂ ಸ್ರವೇದ್ಯಸ್ಯ ಕರ್ಣೌ ಸ್ಥಾನಾಚ್ಚ ಭ್ರಶ್ಯತಃ ।
ವಕ್ರಾ ಚ ನಾಸಾ ಭವತಿ ವಿಜ್ಞೇಯೋ ಗತಜೀವಿತಃ ॥೨೫॥

ಯಸ್ಯ ಕೃಷ್ಣಾ ಖರಾ ಜಿಹ್ವಾ ಪದ್ಮಾಽಭಾಸಂ ಚ ವೈ ಮುಖಂ ।
ಗಂಡೇ ವಾ ಪಿಂಡಿಕಾರಕ್ತೇ ತಸ್ಯ ಮೃತ್ಯುರುಪಸ್ಥಿತಃ ॥೨೬॥

ಮುಕ್ತಕೇಶೋ ಹಸಂಶ್ಚೈವ ಗಾಯನ್ನೃತ್ಯಂಶ್ಚ ಯೋ ನರಃ ।
ಯಾಮ್ಯಾ ಮಭಿಮುಖಂ ಗಚ್ಛೇತ್ತದಂತಂ ತಸ್ಯ ಜೀವಿತಂ ॥೨೭॥

ಯಸ್ಯ ಶ್ವೇತಘನಾಭಾಸಾ ಶ್ವೇತಸರ್ಷಪಸನ್ನಿಭಾ ।
ಶ್ವೇತಾ ಚ ಮೂರ್ತಿರ್ಹ್ಯಸಕೃತ್ತಸ್ಯ ಮೃತ್ಯುರುಪಸ್ಥಿತಃ ॥೨೮॥

ಉಷ್ಟ್ರಾ ವಾ ರಾಸಭಾ ವಾಽಭಿಯುಕ್ತಾ ಸ್ವಪ್ನೇ ರಥೇಽಶುಭಾಃ ।
ಯಸ್ಯ ಸೋಽಪಿ ನ ಜೀವೇತ್ತು ದಕ್ಷಿಣಾಽಭಿಮುಖೋ ಗತಃ ॥೨೯॥

---

ಯಾವನ ನಾಲಿಗೆಯು ಕಪ್ಪಾಗಿಯೂ, ಕಠಿಣವಾಗಿಯೂ ಇರುತ್ತದೆಯೋ, ಕಮಲದಂತೆ ಬಿಳಿಚಿಕೊಂಡಿರುತ್ತದೆಯೋ, ಕಪೋಲಗಳು ಖರ್ಜೂರದ ಹಣ್ಣಿನಂತೆ ಕೆಂಪಗಾಗಿದೆಯೋ, ಅವನಿಗೆ ಸಾವು ಸಮೀಪಿಸಿದೆ ಯೆಂದು ತಿಳಿಯಬೇಕು.

೨೭–೨೯. ಯಾವ ಮನುಷ್ಯನು ತಲೆಯ ಕೂದಲನ್ನು ಬಿಚ್ಚಿಕೊಂಡು ನಗುತ್ತಾ, ಹಾಡುತ್ತಾ, ನಾಟ್ಯವಾಡುತ್ತಾ ದಕ್ಷಿಣದಿಕ್ಕಿಗೆ ಎದುರಾಗಿ ಸ್ವಪ್ನದಲ್ಲಿ ಹೋಗುವನೋ, ಅವನಿಗೆ ಸಾವು ಸಮೀಪಿಸಿರುತ್ತದೆ. ಎಂದು ತಿಳಿಯಬೇಕು. ಯಾವನಿಗೆ ಬೆಳ್ಳಗಿರುವ ಮೋಡಕ್ಕೆ ಸಮಾನವಾದ, ಬಿಳಿಯ ಸಾಸುವೆಗೆ ಸಮಾನವಾದ, ಬೆಳ್ಳಗಿರುವ ಆಕಾರವು ತನ್ನ ಸ್ವಪ್ನ ದಲ್ಲಿ ಪದೇಪದೇ ಕಾಣಿಸುವುದೋ ಅವನಿಗೆ ಸಾವು ಸನ್ನಿಹಿತವಾಗಿದೆ ಯೆಂದು ತಿಳಿಯಬೇಕು. ಒಂಟೆಗಳನ್ನಾಗಲಿ, ಅಥವಾ ಕತ್ತೆಗಳನ್ನಾಗಲಿ, ಕಟ್ಟಿದ ಅಮಂಗಳಕರವಾದ ರಥದಲ್ಲಿ ದಕ್ಷಿಣದಿಕ್ಕಿಗೆ ತಾನು ಹೋದ ಹಾಗೆ ಸ್ವಪ್ನದಲ್ಲಿಕಾಣಿಸಿದರೆ ಅಂಥವನಿಗೆ ಆಕ್ಷಣದಲ್ಲಿ ಮರಣವು ಸಿದ್ಧ ವಾಗಿ ಉಂಟಾಗುತ್ತದೆ.

ದ್ವೇ ವಾಽಥ ಪರಮೋಽರಿಷ್ಟೇ ಏಕೀಭೂತಃ ಪರಂ ಭವೇತ್ ।
ಘೋಷಂ ನ ಶೃಣುಯಾತ್ಕರ್ಣೇ ಜ್ಯೋತಿರ್ನೇತ್ರೇ ನ ಪಶ್ಯತಿ ॥೩೦॥

ಶ್ವಭ್ರೇ ಯೋ ನಿಪತೇ ತ್ಸ್ವಪ್ನೇ ದ್ವಾರಂ ಚಾಽಪಿ ಪಿಧೀಯತೇ ।
ನ ಚೋತ್ತಿಷ್ಠತಿ ಯಃ ಶ್ವಭ್ರಾತ್ತದಂತಂ ತಸ್ಯ ಜೀವಿತಂ ॥೩೧॥

ಊರ್ಧ್ವಾ ಚ ದೃಷ್ಟಿರ್ನ ಚ ಸಂಪ್ರತಿಷ್ಠಾ ।
ರಕ್ತಾ ಪುನಃ ಸಂಪರಿವರ್ತಮಾನಾ ॥
ಮುಖಸ್ಯ ಶೋಷಃ ಸುಷಿರಾ ಚ ನಾಭಿ ।
ರತ್ಯುಷ್ಣಮೂತ್ರೋ ವಿಷಮಸ್ಥ ಏವ ॥೩೨॥

ದಿವಾ ವಾ ಯದಿ ವಾ ರಾತ್ರೌ ಪ್ರತ್ಯಕ್ಷಂ ಯೋ ನಿಹನ್ಯತೇ ।
ಹಂತಾರಂ ನ ಚ ಪಶ್ಯೇಚ್ಚ ಸ ಗತಾಯು ರ್ನ ಜೀವತಿ ॥೩೩॥

---

೩೦-೩೨. ಯಾವನು ಶಬ್ದವನ್ನು ಕಿವಿಯಿಂದ ಕೇಳಲಾರನೋ, ರೂಪವನ್ನು ಕಣ್ಣಿನಿಂದ ನೋಡಲಾರನೋ, ಅವನಿಗೆ ಇವೆರಡೂ ಅನಿಷ್ಟ ಸೂಚನೆಗಳೆಂದು ತಿಳಿಯಬೇಕು. ಯಾವನು ಸ್ವಪ್ನದಲ್ಲಿ ಹಳ್ಳದಲ್ಲಿ ಬೀಳುವನೋ ಮತ್ತು ಹಳ್ಳದ ಮೇಲಿನ ಬಾಗಿಲು ಮುಚ್ಚಲ್ಪಡುವುದೋ, ಮತ್ತು ಮೇಲಕ್ಕೆ ಏಳಲಾರದೇ ಹೋಗುವನೋ, ಅದು ಅವನ ಕೊನೆಗಾಲವನ್ನು ಸೂಚಿಸುತ್ತದೆ. ಯಾವನಿಗೆ ಸ್ವಪ್ನದಲ್ಲಿ ಕಣ್ಣು ಮೇಲ್ಮುಖವಾಗುವುದೋ, ಪುನಃ ಮುಂಚಿನ ಸ್ಥಿತಿಗೆ ಬರುವುದಿಲ್ಲವೋ, ಪುನಃ ಸುತ್ತತಕ್ಕದ್ದಾಗಿ ಕೆಂಪಗಾಗುವುದೋ, ಮುಖವು ಒಣಗುವುದೋ, ಹೊಕ್ಕುಳು ಗುಳಿಬೀಳುವುದೋ, ಮೂತ್ರವು ಬಹಳ ಬಿಸಿಯಾಗುವುದೋ, ಹೀಗೆ ವ್ಯತ್ಯಾಸ ಪರಿಸ್ಥಿತಿಯುಂಟಾಗುವುದೋ, ಅಂಥವನ ಆಯುಸ್ಸು ಮುಗಿದಿದೆ ಎಂದು ತಿಳಿಯಬೇಕು.

೩೩-೩೪. ಸ್ವಪ್ನದಲ್ಲಿ ಹಗಲಿನಲ್ಲಿಯಾಗಲಿ, ರಾತ್ರಿಯಲ್ಲಿಯಾಗಲಿ, ಪ್ರತ್ಯಕ್ಷವಾಗಿ, ಯಾವನು ಕೊಲ್ಲಲ್ಪಡುತ್ತಾನೋ, ಮತ್ತು ಕೊಂದವನನ್ನು ನೋಡುವುದಿಲ್ಲವೋ, ಅವನ ಆಯುಸ್ಸು ಮುಗಿದಿದೆಯೆಂದು ತಿಳಿಯಿರಿ. ಯಾವನು ಸ್ವಪ್ನದ ಕೊನೆಯ ಭಾಗದಲ್ಲಿ ಅಗ್ನಿಪ್ರವೇಶವನ್ನು

ಅಗ್ನಿಪ್ರವೇಶಂ ಕುರುತೇ ಸ್ವಪ್ನಾಂತೇ ಯಸ್ತು ಮಾನವಃ ।
ಸ್ಮೃತಿಂ ನೋಪಲಭೇಚ್ಚಾಪಿ ತದಂತಂ ತಸ್ಯ ಜೀವಿತಂ ॥೩೪॥
ಯಸ್ತು ಪ್ರಾವರಣಂ ಶುಕ್ಲಂ ಸ್ವಕಂ ಪಶ್ಯತಿ ಮಾನವಃ ।
ಕೃಷ್ಣಂ ರಕ್ತಮಪಿ ಸ್ವಪ್ನೇ ತಸ್ಯ ಮೃತ್ಯುರುಪಸ್ಥಿತಃ ॥೩೫॥
ಅರಿಷ್ಟೇ ಸೂಚಿತೇ ದೇಹೇ ತಸ್ಮಿನ್ಕಾಲೇ ಉಪಸ್ಥಿತೇ ।
ತ್ಯಕ್ತ್ವಾ ಖೇದಂ ವಿಷಾದಂ ಚ ಉಪೇಕ್ಷೇದ್ಬುದ್ಧಿಮಾನ್ನರಃ ॥೩೬॥
ಪ್ರಾಚೀಂ ವಾ ಯದಿ ವೋದೀಚೀಂ ದಿಶಂ ನಿಷ್ಕ್ರಮ್ಯ ವೈ ಶುಚಿಃ ।
ಸಮೇಽತಿ ಸ್ಥಾವರೇ ದೇಶೇ ವಿವಿಕ್ತೇ ಜಂತುವರ್ಜಿತೇ ॥೩೭॥
ಉದಙ್ಮುಖಃ ಪ್ರಾಙ್ಮುಖೋ ವಾ ಸ್ವಸ್ಥಶ್ಚಾಽಚಾಂತ ಏವಚ ।
ಸ್ವಸ್ತಿಕೇನೋಪವಿಷ್ಟಸ್ತು ನಮಸ್ಕೃತ್ವಾ ಮಹೇಶ್ವರಂ ॥೩೮॥

---

ಮಾಡಿದಹಾಗೆ ಕಾಣುತ್ತಾನೋ, ಜ್ಞಾಪಕಶಕ್ತಿಯನ್ನು ಕಳೆದು ಕೊಂಡ ಹಾಗೆ ಭಾವಿಸುವನೋ, ಅವನಿಗೆ ಆಯುಸ್ಸು ಮುಗಿದಿದೆಯೆಂದು ತಿಳಿಯಬೇಕು. ಯಾವನು ತಾನು ಹೊದ್ದುಕೊಂಡಿರುವ ಬಟ್ಟೆಯನ್ನು ಬಿಳ್ಳಗೆ, ಕಪ್ಪಗೆ, ಕೆಂಪಗೆಭಿಸ್ಸಿಸುವುದನ್ನು ಕಾಣುವನೋ ಅವನಿಗೆ ಸಾವು ಸಮೀಪಿಸಿದೆಯೆಂದು ತಿಳಿಯಬೇಕು.

೩೬–೩೯. ಇಂತಹ ಅನಿಷ್ಟಸೂಚನೆಗಳು ಹೊರಗೂ, ದೇಹದಲ್ಲಿಯೂ, ಕಂಡು ಬಂದಾಗ್ಯೂ ಇದರ ವಿಷಯವಾಗಿ ದುಃಖವನ್ನು ಮನಸ್ಸಿಗೆ ತಂದುಕೊಳ್ಳದೆ, ಬುದ್ಧಿವಂತನಾದ ಮನುಷ್ಯನು ಈ ವಿಚಾರಗಳನ್ನು ಉದಾಸೀನ ಮಾಡಬೇಕು. ಅಲ್ಲದೆ ಆಗ ಆ ಮನುಷ್ಯನು ಪರಿಶುದ್ಧನಾಗಿ ಪೂರ್ವದಿಕ್ಕನ್ನೋ ಅಥವಾ ಉತ್ತರದಿಕ್ಕನ್ನೋ ಕುರಿತು ಹೋಗಿ, ಪ್ರಾಣಿಗಳಿಲ್ಲದಿರುವ ನಿರ್ಜನವಾದ ಪ್ರದೇಶದಲ್ಲಿ ಕುಳಿತುಕೊಂಡು ಉತ್ತರದಿಕ್ಕು ಅಥವಾ ಪೂರ್ವದಿಕ್ಕಿಗೆ ತಿರುಗಿಕೊಂಡು ಶಾಂತನಾಗಿ, ಆಚಮನವನ್ನು ಮಾಡಿ, ಮಂಗಳಕರವಾದ ಮಂತ್ರಗಳಿಂದ ಮಹೇಶ್ವರನಿಗೆ ನಮಸ್ಕಾರವನ್ನು ಮಾಡಿ, ತಲೆ, ಕತ್ತು ಮತ್ತು ದೇಹಗಳನ್ನು ಸಮನಾಗಿರಿಸಿ

ಸಮಂ ಕಾಯಶಿರೋಗ್ರೀವಂ ಧಾರಯನ್ನಾವಲೋಕಯನ್ ।
ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ॥

ಪ್ರಾಗುದಕ್ಪ್ರವಣೇ ದೇಶೇ ತಥಾ ಯುಂಜೀತ ಶಾಸ್ತ್ರವಿತ್ ।
ಕಾಮಂ ವಿತರ್ಕಂ ಪ್ರೀತಿಂ ಚ ಸುಖದುಃಖೇ ಉಭೇ ತಥಾ ॥೪೦॥

ನಿಗೃಹ್ಯ ಮನಸಾ ಸರ್ವಂ ಶುಕ್ಲಂ ಧ್ಯಾನಮನುಸ್ಮರೇತ್ ।
ಘ್ರಾಣೇ ಚ ರಸನೇ ನಿತ್ಯಂ ಚಕ್ಷುಷೀ ಸ್ಪರ್ಶನೇ ತಥಾ ॥೪೧॥

ಶ್ರೋತ್ರೇ ಮನಸಿ ಬುದ್ಧೌ ಚ ತತ್ರ ವಕ್ಷಸಿ ಧಾರಯೇತ್ ।
ಕಾಲ ಕರ್ಮಾಣಿ ವಿಜ್ಞಾಯ ಸಮೂಹೇಷ್ವೇವ ನಿತ್ಯಶಃ ॥೪೨॥

ದ್ವಾದಶಾ ಧ್ಯಾತ್ಮ ಮಿತ್ಯೇವಂ ಯೋಗಧಾರಣ ಮುಚ್ಯತೇ .
ಶತಮರ್ಧ ಶತಂ ವಾಽಪಿ ಧಾರಣಾಂ ಮೂರ್ಧ್ನಿ ಧಾರಯೇತ್ ॥

---

ಕೊಂಡು, ಜಿತೇಂದ್ರಿಯನಾಗಿ, ದೀಪವು ಗಾಳಿಯಿಲ್ಲದಿರುವಾಗ ಅಲ್ಲಾಡದಿರುವಂತೆ, ಅಲುಗಾಡದೇ ಇರುತ್ತಾ ಶಿವಧ್ಯಾನವನ್ನುಮಾಡಬೇಕು.

೪೦–೪೨. ಶಾಸ್ತ್ರಜ್ಞಾನಿಯಾದ ಮನುಷ್ಯನು, ನೀರುತುಂಬಿರುವ ಕೆರೆ, ನದಿ, ಮುಂತಾದುದರ ಹತ್ತಿರದಲ್ಲಿ ಪೂರ್ವ ಅಥವಾ ಉತ್ತರ ದಿಕ್ಕಿಗೆ ತಿರುಗಿಕೊಂಡು ಇಳಿಜಾರಾಗಿ ವಿಶಾಲವಾಗಿರುವ ಸ್ಥಳದಲ್ಲಿ ಆಸನದಲ್ಲಿ ಕುಳಿತು ಯೋಗಾಭ್ಯಾಸವನ್ನು ಮಾಡಬೇಕು ಆಸೆ, ಸಂಶಯ, ಪ್ರೀತಿ, ಸುಖ, ದುಃಖ, ಇವೆಲ್ಲವನ್ನೂ ಮನಸ್ಸಿನಲ್ಲಿ ನಿಗ್ರಹಮಾಡಿಕೊಂಡು, ಶ್ರೇಷ್ಠವಾದ ಸಾತ್ವಿಕವಾದ ಧ್ಯಾನವನ್ನು ಮಾಡಬೇಕು. ಆ ಧ್ಯಾನಧಾರಣಾ ಸ್ಥಾನಗಳು ಯಾವುವೆಂದರೆ, ಮೂಗು, ನಾಲಿಗೆ, ಕಣ್ಣುಗಳು, ಚರ್ಮ, ಕಿವಿಗಳು, ಮನಸ್ಸು, ಬುದ್ಧಿ, ಇವೆಲ್ಲವನ್ನೂ, ಆತ್ಮನ ಸ್ಥಾನವಾದ ವಕ್ಷಸ್ಥಳದಲ್ಲಿ ಲಿಂಗ ಶರೀರದಲ್ಲಿ ಧಾರಣೆಮಾಡಿ, ತಕ್ಕ ಕಾಲ ಮತ್ತು ಕರ್ತವ್ಯ ಕರ್ಮಗಳನ್ನು ತಿಳಿದು ಯೋಗಾಭ್ಯಾಸವನ್ನು ನಡೆಸಬೇಕು.

೪೩–೪೫. ಹನ್ನೆರಡು ವಿಧವಾದ, ಆತ್ಮಕ್ಕೆ ಸಂಬಂಧಪಟ್ಟ, ಈ ಶರೀರ ಸ್ಥಾನಗಳಲ್ಲಿ ಯೋಗದಿಂದ, ಶರೀರವನ್ನು ಹತೋಟಿಗೆ ತೆಗೆದುಕೊಳ್ಳುವ ಕ್ರಮವು ಹೇಳಲ್ಪಟ್ಟಿದೆ. ನೂರು, ಅಥವಾ ಐವತ್ತು ಸಲ ಯೋಗದ

**ಛಿನ್ನಸ್ಯ ಧಾರಣಾ ಯೋಗಾದ್ವಾಯುರೂರ್ಧ್ವಂ ಪ್ರವರ್ತತೇ ।
ತತಶ್ಚಾಽಪೂರಯೇದ್ದೇಹ ಮೋಂಕಾರೇಣ ಸಮನ್ವಿತಃ ॥೪೪॥
ತಥೋಂಕಾರಮಯೋ ಯೋಗೀ ಅಕ್ಷರೇ ತ್ವಕ್ಷರೀ ಭವೇತ್ ।
ಅತ ಊರ್ಧ್ವಂ ಪ್ರವಕ್ಷ್ಯಾಮಿ ಓಂಕಾರ ಪ್ರಾಪ್ತಿ ಲಕ್ಷಣಂ ॥೪೫॥
ಏಷ ತ್ರಿಮಾತ್ರೋ ವಿಜ್ಞೇಯೋ ವ್ಯಂಜನಂ ಚಾಽತ್ರ ಚೇಶ್ವರಃ ।
ಪ್ರಥಮಾ ವಿದ್ಯುತೀ ಮಾತ್ರಾ ದ್ವಿತೀಯಾ ತಾಮಸೀ ಸ್ಮೃತಾ ॥೪೬॥
ತೃತೀಯಾಂ ನಿರ್ಗುಣಾಂ ಚೈವ ಮಾತ್ರಾಮಕ್ಷರ ಗಾಮಿನೀಂ ।
ಗಾಂಧಾರೀ ಚೈವ ವಿಜ್ಞೇಯಾ ಗಾಂಧಾರ ಸ್ವರ ಸಂಭವಾ ॥೪೭॥**

---

ಅಭ್ಯಾಸದಿಂದ ತಲೆಯಲ್ಲಿ ಸಹಸ್ರಾರ ಚಕ್ರದಲ್ಲಿ ಮನೋಲಯ ಮಾಡುವುದನ್ನು ಅಭ್ಯಾಸಮಾಡಬೇಕು. ದುಃಖಪಡುವ ಮನುಷ್ಯನಿಗೆ ಶರೀರ, ಮನಸ್ಸು, ಇವುಗಳನ್ನು ಏಕಾಗ್ರವಾಗುವಂತೆ ಹಿಡಿಯುವ ಯೋಗಕ್ರಮದಿಂದ ಗಾಳಿಯು ಮೇಲಕ್ಕೆ ಏಳಲು ಸಂಚರಿಸುತ್ತದೆ. ಅನಂತರದಲ್ಲಿ ಓಂಕಾರ ಜಪಧ್ಯಾನದಿಂದ ಆ ಉದಾನವಾಯುನಿಂದ ಶರೀರವೆಲ್ಲವನ್ನೂ ತುಂಬಿರಬೇಕು. ಹೀಗೆ ವಾಯುವನ್ನು ಓಂಕಾರದಲ್ಲಿ ಲಯ ಹೊಂದುವಂತೆ ತುಂಬಿದ ಯೋಗಿಯು ಓಂಕಾರ ರೂಪನೇ ಆಗಿ, ಓಂಕಾರದ ಅರ್ಥವಾದ ಬ್ರಹ್ಮತತ್ವದಲ್ಲಿ ಸಾಯುಜ್ಯವನ್ನು ಪಡೆದು ನಾಶರಹಿತನಾಗುತ್ತಾನೆ. ಇನ್ನು ಮುಂದೆ ಓಂಕಾರ, ಸಿದ್ಧಿಸುವ ಕ್ರಮವನ್ನು ಹೇಳುವೆನು. ಓಂಕಾರದ ಪ್ರಾಪ್ತಿಗಾಗಿ ಪ್ರಣವಜ್ಞಾನದ ಸ್ವರೂಪವನ್ನೂ ಲಕ್ಷಣವನ್ನೂ ವಿವರಿಸುವೆನು.

೪೬–೪೮. ಈ ಓಂಕಾರವು ಮೂರು ಮಾತ್ರಾಕಾಲದಲ್ಲಿ ಉಚ್ಚರಿಸಲ್ಪಡತಕ್ಕದ್ದಾಗಿದೆ. ಇದರಿಂದ ತಿಳಿಯಲ್ಪಡುವ ವಸ್ತುವು ಪರಮೇಶ್ವರನೇ ಆಗಿದ್ದಾನೆ. ಓಂಕಾರದಲ್ಲಿರುವ ಅಕಾರ ಉಕಾರ ಮಕಾರಗಳಲ್ಲಿ ಮೊದಲನೆಯದು. "ವಿದ್ಯುತೀ" ಎಂಬ ಮಾತ್ರೆ. ಇದು ಮಿಂಚಿನ ಬಣ್ಣವುಳ್ಳ ರಾಜಸಮಾತ್ರೆಯಾಗಿದೆ. ಎರಡನೆಯದು ತಾಮಸೀ; ಕಪ್ಪು ಬಣ್ಣವುಳ್ಳ ಮಾತ್ರೆಯಾಗಿದೆ. ಮೂರನೆಯದು ಸಾತ್ವಿಕವಾಗಿ ಶುಕ್ಲವರ್ಣವುಳ್ಳ ನಿರ್ಗುಣಾ, ಎಂಬ ಮಾತ್ರೆಯಾಗಿದೆ. ಇದರಲ್ಲಿ ರಜಸ್ತಮೋ

**ಪಿಪೀಲಿಕಾ ಗತಿಸ್ಪರ್ಶಾ ಪ್ರಯುಕ್ತಾ ಮೂರ್ಧ್ನಿ ಲಕ್ಷ್ಯತೇ ।**
**ಯಥಾ ಪ್ರಯುಕ್ತ ಓಂಕಾರಃ ಪ್ರತಿನಿರ್ಯಾತಿ ಮೂರ್ಧನಿ ॥೪೮॥**
**ತಥೌಂಕಾರ ಮಯೋ ಯೋಗೀ ತ್ವಕ್ಷರೋಽತ್ವಕ್ಷರೀ ಭವೇತ್ ।**
**ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮ ಲಕ್ಷಣ ಮುಚ್ಯತೇ ॥೪೯॥**
**ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ।**
**ಓಮಿತ್ಯೇಕಾಕ್ಷರಂ ಹ್ಯೇತದ್ಗುಹಾಯಾಂ ನಿಹಿತಂ ಪದಂ ॥೫೦॥**

---

ಗುಣಗಳು ಇರುವುದಿಲ್ಲವಾದುದರಿಂದ ನಿರ್ಗುಣಾ ಎಂದು ಇದಕ್ಕೆ ವ್ಯವಹಾರವಿದೆ. ಇದು ಗಾಂಧಾರೀ ಎಂಬುದು. ಎಂದರೆ ಗಾಂಧಾರ ಎಂಬ ಸ್ವರದಿಂದ ಹುಟ್ಟಿದ್ದು, ಇರುವೆಯ ಹಾಗೆ ಗಮನ ಮತ್ತು ಮುಟ್ಟುವಿಕೆಯುಳ್ಳದ್ದು, ಇದರ ಅಭ್ಯಾಸ ಪ್ರಯೋಗವು ನಡೆದಾಗ ಯೋಗಿಯು ತನ್ನ ತಲೆಯಲ್ಲಿ ಇದರ ಸ್ಥಿತಿಯನ್ನು ಮನಗಾಣುತ್ತಾನೆ. ಈ ಓಂಕಾರವನ್ನು ನಾವು ಹೇಗೆ ಪ್ರಯೋಗಿಸಿದರೆ ಇದು ಹಾಗೆ ಫಲಕಾರಿಯಾಗಿ ಬರುತ್ತದೆ.

೪೯–೫೧. ಹಾಗೆಯೇ ಯೋಗಿಯು ಓಂಕಾರ ಸ್ವರೂಪನೂ, ಈ ಓಂಕಾರಾರ್ಥದಲ್ಲಿ ಲೀನನಾಗಿ ನಾಶವಿಲ್ಲದವನೂ ಆಗಿರುತ್ತಾನೆ. ಈ ಪ್ರಣವೋಪಾಸನೆಯ ವಿವರವನ್ನು ಅಲಂಕಾರ ರೀತಿಯಿಂದ ತಿಳಿಸುತ್ತಾನೆ. ಓಂಕಾರವೇ ಧನುಸ್ಸು, ಆತ್ಮವೇ ಬಾಣ, ಪರಬ್ರಹ್ಮಭಾವ ಪ್ರಾಪ್ತಿಯೇ ಗುರಿಯ ಸ್ವರೂಪವೆಂದು ತಿಳಿಯಬೇಕು. ಬಿಲ್ಲಿನಲ್ಲಿ ತೊಟ್ಟ ಬಾಣವು ಲಕ್ಷ್ಯಕ್ಕೆ ಹೋಗಿಸೇರಲು ಬಿಲ್ಲು ಹೇಗೆ ಕಾರಣವಾಗುತ್ತದೋ ಹಾಗೆಯೇ ನಮ್ಮ ಜೀವಾತ್ಮವೆಂಬ ಬಾಣವು ಗುರಿಯಾದ ಬ್ರಹ್ಮಭಾವವನ್ನು ಪಡೆಯುವುದಕ್ಕೆ ಓಂಕಾರವೆಂಬ ಬಿಲ್ಲು ಉತ್ತಮವಾದ ಸಾಧನವಾಗಿದೆ. ಏಕೆಂದರೆ ಓಂಕಾರದ ಜಪಧ್ಯಾನದ ಆವೃತ್ತಿಯಿಂದ ಬುದ್ಧಿಗೆ ಸಂಸ್ಕಾರವಾಗಿ ಯಾವ ಅಡ್ಡಿಯೂ ಇಲ್ಲದಂತೆ, ಬಿಲ್ಲಿನಿಂದ ಬಿಟ್ಟ ಬಾಣವು ಗುರಿಯನ್ನು ಸೇರುವಂತೆ, ಜೀವಾತ್ಮನು ಪರಮಾತ್ಮಭಾವವನ್ನು ಪಡೆಯುತ್ತಾನೆ. ಹೀಗೆ ಮಾಡುವುದು ಸಾಧ್ಯವೂ ಆಗಿದೆ. ಬಾಣವು ಹೇಗೆ ಗುರಿಯಲ್ಲಿ ಅಡಗುತ್ತದೋ ಹಾಗೆ ಉಪಾಸಕನ ಆತ್ಮವೂ ಪರಮಾತ್ಮನಲ್ಲಿ ಲೀನವಾಗುತ್ತದೆ, ಎಂದು ಭಾವವು. ಬಾಣವನ್ನು

ಓಮಿತ್ಯೇತತ್ತ್ರಯೋ ಲೋಕಾ ಸ್ತ್ರಯೋವೇದಾ ಸ್ತ್ರಯೋಽಗ್ನಯಃ ।
ವಿಷ್ಣುಕ್ರಮಾ ಸ್ತ್ರಯಸ್ತ್ವೇತೇ ಋಕ್ಸಾಮಾನಿ ಯಜೂಂಷಿ ಚ ॥
ಮಾತ್ರಾಶ್ಚಾರ್ಧಂ ಚ ತಿಸ್ರಸ್ತು ವಿಜ್ಞೇಯಾಃ ಪರಮಾರ್ಥತಃ ।
ತತ್ಪ್ರಯುಕ್ತಸ್ತು ಯೋ ಯೋಗೀ ತಸ್ಯ ಸಾಲೋಕ್ಯ ಮಾಪ್ನು
ಯಾತ್ ॥೫೨॥

ಅಕಾರೋ ಹ್ಯಕ್ಷರೋ ಜ್ಞೇಯ ಉಕಾರಃ ಸಹಿತಃ ಸ್ಮೃತಃ ।
ಮಕಾರಸಹಿತೋಂ ಕಾರ ಸ್ತ್ರಿಮಾತ್ರ ಇತಿ ಸಂಜ್ಞಿತಃ ॥೫೩॥

---

ಬಿಡುವಾಗ ಬಿಲ್ಲುಗಾರನು ಹೇಗೋ ಹಾಗೆ, ಯೋಗಿಯು ಓಂಕಾರವನ್ನು ಉಪಾಸನೆಯ ಮೂಲಕವಾಗಿ ಪ್ರಯೋಗಿಸುವಾಗ ಅಲಸನಾಗದೆ, ಹೊರಗಿನ ವಿಷಯಗಳನ್ನು ಅರಿತು ಬಯಸುವುದೆಂಬ ಪ್ರಮಾದವನ್ನೂ ಬಿಟ್ಟು, ಬಹು ಜಾಗರೂಕನಾಗಿರಬೇಕು. ಓಂ, ಎಂಬ ಒಂದಕ್ಷರದ ಮಂತ್ರವು ಯೋಗಿಗಳ ಬುದ್ಧಿ ಎಂಬ ಗುಹೆಯಲ್ಲಿ ರಹಸ್ಯವಾಗಿ ಇರುವಂಥಾದ್ದು. ಓಂ, ಎಂಬುದೇ ಮೂರು ಲೋಕಗಳಾಗಿಯೂ, ಮೂರು ವೇದಗಳಿಗೆ ಮೂಲಕಾರಣ ಮತ್ತು ಸಾರವಾಗಿಯೂ, ಮೂರು ಅಗ್ನಿಗಳಾಗಿಯೂ, ವಿಷ್ಣುವಿನ ಮೂರು ಪಾದ ಕ್ರಮಣಗಳಾಗಿಯೂ, ಋಗ್ವೇದ, ಯಜುರ್ವೇದ, ಸಾಮವೇದಗಳ ಸ್ವರೂಪವಾಗಿಯೂ, ಇದೆಯೆಂದು ತಿಳಿಯಬೇಕು.

೫೨–೫೪. ಹೀಗೆ ಮೂರೂವರೆ ಮಾತ್ರೆಗಳುಳ್ಳ ಈ ಓಂಕಾರದಲ್ಲಿ ವ್ಯಂಜನವಾದ ಮಕಾರದ ಮುಂದೆ ಇರುವ ನಾದರೂಪವಾದ ಮೂರು ಮಾತ್ರಾಸಹಿತವಾದ ಪ್ರಣವದ ಉಪಾಸನೆಯಿಂದ ಯೋಗಿಯು ಶಿವನ ದರ್ಶನವನ್ನು ಹೊಂದಿ ಶಿವಲೋಕದಲ್ಲಿ ವಾಸವನ್ನೂ ಪಡೆಯುವನು. ಅಕಾರವು ಅಕ್ಷರವೆಂಬ ಹೆಸರುಳ್ಳದ್ದಾಗಿದೆ. ಉಕಾರವೂ ಅದರೊಡನೆ ಸಂಧಿಕಾರ್ಯದಿಂದ ಬೆರೆದಿದೆ. ಮುಂದಿನ ಅನುಸ್ವಾರದಿಂದ ಕೂಡಿರುವ, ಓಕಾರವು ಮೂರು ಮಾತ್ರಾಕಾಲವುಳ್ಳದ್ದಾಗಿದೆ. ಅಕಾರವು ಭೂಲೋಕವೆಂಬುದಾಗಿಯೂ, ಉಕಾರವು ಭುವರ್ಲೋಕವೆಂಬುದಾಗಿಯೂ, ವ್ಯಂಜ

ಅಕಾರಸ್ತ್ವೇಷ ಭೂರ್ಲೋಕ ಉಕಾರೋ ಭುವ ಉಚ್ಯತೇ ।
ಸವ್ಯಂಜನೋ ಮಕಾರಸ್ತು ಸ್ವರ್ಲೋಕ ಇತಿ ಗೀಯತೇ ॥೫೪॥

ಓಂಕಾರಸ್ತು ತ್ರಯೋ ಲೋಕಾಃ ಶಿರಸ್ತಸ್ಯ ತ್ರಿವಿಷ್ಟಪಂ ।
ಭುವನಾಂಗಂ ಚ ತತ್ಸರ್ವಂ ಬ್ರಾಹ್ಮಂ ತತ್ಪದ ಮುಚ್ಯತೇ ॥೫೫॥

ಮಾತ್ರಾ ಪಾದೋ ರುದ್ರಲೋಕೋ ಹ್ಯಮಾತ್ರಂ ತು ಶಿವಂ ಪದಂ ।
ಏವಂ ಜ್ಞಾನ ವಿಶೇಷೇಣ ತತ್ಪದಂ ಸಮುಪಾಸ್ಯತೇ ॥೫೬॥

ತಸ್ಮಾದ್ಧ್ಯಾನ ರತಿರ್ನಿತ್ಯಂ ಅಮಾತ್ರಂ ಹಿ ತದಕ್ಷರಂ ।
ಉಪಾಸ್ಯಂ ಹಿ ಪ್ರಯತ್ನೇನ ಶಾಶ್ವತಂ ಸುಖಮಿಚ್ಛತಾ ॥೫೭॥

ಹ್ರಸ್ವಾ ತು ಪ್ರಥಮಾ ಮಾತ್ರಾ ತತೋ ದೀರ್ಘಾ ತ್ವನಂತರಂ ।
ತತಃ ಪ್ಲುತವತೀ ಚೈವ ತೃತೀಯಾ ಚೋಪದಿಶ್ಯತೇ ॥೫೮॥

---

ನಾಕ್ಷರವಾಗಿರುವ ಮಕಾರವು ಸ್ವರ್ಗಲೋಕವೆಂಬುದಾಗಿಯೂ ಹೇಳಲ್ಪಟ್ಟಿದೆ.

೫೫–೫೭. ಓಂಕಾರವೇ ಮೂರು ಲೋಕಗಳಾಗಿಯೂ, ಅದರ ಅಗ್ರಭಾಗವು ಸ್ವರ್ಗಲೋಕವಾಗಿಯೂ ಇದೆ. ಪ್ರಪಂಚದ ಅಂಗಗಳೆಲ್ಲವೂ ಅವೇ ಆಗಿವೆ. ಕೊನೆಯದು ಬ್ರಹ್ಮಲೋಕವೆಂದು ಹೇಳಲ್ಪಟ್ಟಿದೆ. ಓಂಕಾರದ ಕಡೆಯ ಮಾತ್ರೆಯು ರುದ್ರಲೋಕವೆಂದೂ, ಮಾತ್ರೆಯ ಭಾಗವಿಲ್ಲದ್ದು ಶಿವಲೋಕವೆಂದೂ ಹೇಳಲ್ಪಟ್ಟಿದೆ. ಈ ರೀತಿಯಾಗಿ ವಿಶೇಷ ಜ್ಞಾನದಿಂದ ಕೂಡಿದ ಉಪಾಸನೆಯಿಂದ ಶಿವನ ಲೋಕವು ಪೂಜಿಸಲ್ಪಡುತ್ತದೆ. ಆದ್ದರಿಂದ ಧ್ಯಾನಾಸಕ್ತನಾದ ಬ್ರಾಹ್ಮಣನು ಯಾವಾಗಲೂ, ಮಾತ್ರೆಯ ಸ್ವರೂಪವಲ್ಲದ, ವಿಕಾರ ರಹಿತವಾದ ಶಿವನ ಸ್ವರೂಪವನ್ನು ತಿಳಿದು ನಿತ್ಯವಾದ ಸುಖವನ್ನು ಪಡೆಯುವುದಕ್ಕಾಗಿ, ಪ್ರಯತ್ನ ಪೂರ್ವಕವಾಗಿ ಆರಾಧನೆ, ಜಪ, ಅರ್ಥಧ್ಯಾನ, ಉಪಾಸನೆಗಳನ್ನು ಮಾಡಬೇಕು.

೫೮–೬೦. ಮೊದಲನೆಯ ಮಾತ್ರೆಯು ಹ್ರಸ್ವಕಾಲವಾಗಿಯೂ, ಎರಡನೆಯ ಮಾತ್ರೆಯು ದೀರ್ಘಕಾಲವಾಗಿಯೂ, ಮೂರನೆಯದು ಮೂರು ಮಾತ್ರಾಕಾಲವುಳ್ಳ ಪ್ಲುತವಾಗಿಯೂ, ಇದೆ. ಹೀಗೆ ಕ್ರಮ

ಏತಾಸ್ತು ಮಾತ್ರಾ ವಿಜ್ಞೇಯಾ ಯಥಾವದನುಪೂರ್ವಶಃ ।
ಯಾವದೇವ ತು ಶಕ್ಯಂತೇ ಧಾರ್ಯಂತೇ ತಾವದೇವ ಹಿ ॥೫೯॥

ಇಂದ್ರಿಯಾಣಿ ಮನೋ ಬುದ್ಧಿಂ ಧ್ಯಾಯನ್ನಾತ್ಮನಿ ಯಃ ಸದಾ ।
ಅರ್ಧಂ ತನ್ಮಾತ್ರಮಪಿಚೇತ್ ಶೃಣು ಯತ್ಫಲಮಾಪ್ನುಯಾತ್ ॥

ಮಾಸೇ ಮಾಸೇಽಶ್ವಮೇಧೇನ ಯೋ ಯಜೇತ ಶತಂ ಸಮಾಃ ।
ತೇನ ಯತ್ಪ್ರಾಪ್ಯತೇ ಪುಣ್ಯಂ ಮಾತ್ರಯಾ ತದವಾಪ್ನುಯಾತ್ ॥೬೧॥

ನ ತಥಾ ತಪಸೋಗ್ರೇಣ ನ ಯಜ್ಞೈರ್ಭೂರಿ ದಕ್ಷಿಣೈಃ ।
ಯತ್ಫಲಂ ಪ್ರಾಪ್ಯತೇ ಸಮ್ಯಕ್ ಮಾತ್ರಯಾ ತದವಾಪ್ನುಯಾತ್ ॥

ತತ್ರ ಚೈಷಾ ತು ಯಾ ಮಾತ್ರಾ ಪ್ಲುತಾ ನಾಮೋಪದಿಶ್ಯತೇ ।
ಏಷಾ ಏವ ಭವೇತ್ಕಾರ್ಯಾ ಗೃಹಸ್ಥಾನಾಂ ತು ಯೋಗಿನಾಂ ॥೬೩॥

---

ವಾಗಿ ಇವುಗಳ ಮಾತ್ರಾಕಾಲವನ್ನು ತಿಳಿಯಬೇಕು. ಅವರವರ ಶಕ್ತ್ಯನುಸಾರವಾಗಿ ವಿದ್ವಾಂಸರು ಈ ಮಾತ್ರಾಕಾಲವನ್ನು ಕಂಡು ಹಿಡಿಯುವರು. ಯಾವ ಮನುಷ್ಯನು, ಇಂದ್ರಿಯಗಳು, ಮನಸ್ಸು, ಬುದ್ಧಿಗಳನ್ನು ಆತ್ಮನಲ್ಲಿ ಕೇಂದ್ರೀಕರಿಸಿ ಧ್ಯಾನಮಾಡುತ್ತಾ, ಅರ್ಧ ಮಾತ್ರಾಕಾಲದಷ್ಟಾದರೂ ಮನಗಂಡು ಹಿಡಿದರೆ ಅತ್ಯಂತ ಶ್ರೇಷ್ಠವಾದ ಫಲವು ದೊರಕುವುದು.

೬೧-೬೩. ನೂರು ವರ್ಷಕಾಲ ಪ್ರತಿ ತಿಂಗಳಲ್ಲಿಯೂ ಅಶ್ವಮೇಧಯಾಗವನ್ನು ಮಾಡಿದರೆ ಯಾವ ಪುಣ್ಯವು ಲಭಿಸುವುದೋ, ಅದೇ ಫಲವು ಒಂದು ಮಾತ್ರಾಕಾಲ ಪರಿಮಾಣದ ಓಂಕಾರದ ಭಾಗದ ಉಚ್ಚಾರಣೆಯಿಂದ ಲಭಿಸುವುದು. ಓಂಕಾರದ ಭಾಗವಾದ ಈ ಒಂದು ದೀರ್ಘ ಮಾತ್ರಾಕಾಲದ ಉಚ್ಚಾರಣೆಯಿಂದ ಯಾವ ಫಲವು ಲಭಿಸುವುದೋ ಅಷ್ಟು ಫಲವು ಉಗ್ರವಾದ ತಪಸ್ಸನ್ನು ಮಾಡಿದರೂ, ಯಾಗಗಳನ್ನು ಮಾಡಿ, ಹೆಚ್ಚಾಗಿ ದಕ್ಷಿಣೆಗಳನ್ನು ಕೊಟ್ಟರೂ, ಬರಲಾರದು. ಓಂಕಾರದ ಭಾಗವಾದ ಪ್ಲುತ, ಎಂಬ ಮಾತ್ರೆಯನ್ನು ಉಚ್ಚರಿಸುವುದು, ಗೃಹಸ್ಥರಾದವರಿಗೂ ಮತ್ತು ಯೋಗಿಗಳಿಗೂ, ಶ್ರೇಯಸ್ಕರವಾದುದು.

ಏಷಾ ಚೈವ ವಿಶೇಷೇಣ ಐಶ್ವರ್ಯೇ ಹ್ಯಷ್ಟ ಲಕ್ಷಣೇ ।
ಅಣಿಮಾದ್ಯೇ ತು ವಿಜ್ಞೇಯಾ ತಸ್ಮಾದ್ಯುಂಜೀತ ತಾಂ ದ್ವಿಜಾಃ॥೬೪॥
ಏವಂ ಹಿ ಯೋಗ ಸಂಯುಕ್ತಃ ಶುಚಿರ್ದಾಂತೋ ಜಿತೇಂದ್ರಿಯಃ ।
ಆತ್ಮಾನಂ ವಿಂದತೇ ಯಸ್ತು ಸ ಸರ್ವಂ ವಿಂದತೇ ದ್ವಿಜಾಃ ॥೬೫॥
ತಸ್ಮಾತ್ಪಾಶುಪತೈರ್ಯೋಗೈ ರಾತ್ಮಾನಂ ಚಿಂತಯೇದ್ಬುಧಃ ।
ಆತ್ಮಾನಂ ಜಾನತೇ ಯೇ ತು ಶುಚಯಸ್ತೇ ನ ಸಂಶಯಃ ॥೬೬॥
ಋಚೋ ಯಜೂಂಷಿ ಸಾಮಾನಿ ವೇದೋಪನಿಷದಸ್ತಥಾ ।
ಯೋಗಜ್ಞಾನಾದವಾಪ್ನೋತಿ ಬ್ರಾಹ್ಮಣೋಽಧ್ಯಾತ್ಮ ಚಿಂತಕಃ ॥
ಸರ್ವ ದೇವಮಯೋ ಭೂತ್ವಾ ಅಭೂತಃ ಸ ತು ಜಾಯತೇ ।
ಯೋನಿಸಂಕ್ರಮಣಂ ತ್ಯಕ್ತ್ವಾ ಯಾತಿ ವೈ ಶಾಶ್ವತಂ ಪದಂ ॥೬೮॥

---

೬೪-೬೬. ಈ ಮಾತ್ರಾಕಾಲದ ಉಚ್ಚಾರಣೆಯಿಂದಲೇ ವಿಶೇಷವಾದ, ಅಣಿಮಾ ಮುಂತಾದ ಎಂಟು ವಿಧವಾದ, ಮಹಾ ಸಿದ್ಧಿಗಳು ಉಂಟಾಗುವುವು. ಎಲೈ ಬ್ರಾಹ್ಮಣರೇ, ಆದ್ದರಿಂದ ಈ ಮಾತ್ರಾಕಾಲವನ್ನು ಯೋಗಾಭ್ಯಾಸ ಮೂಲಕವಾಗಿ ಅವಲಂಬಿಸಬೇಕು. ಹೀಗೆ ಯೋಗಾಭ್ಯಾಸಮಾಡುವ, ಪರಿಶುದ್ಧನೂ, ಇಂದ್ರಿಯ ನಿಗ್ರಹವುಳ್ಳವನೂ, ಆಗಿರುವ ಯಾವನು ಆತ್ಮಸ್ವರೂಪವನ್ನು ತಿಳಿಯುವನೋ ಅವನು ಎಲ್ಲಾ ಸಿದ್ಧಿಗಳನ್ನೂ ಪಡೆಯುವನು. ಆದ್ದರಿಂದ ವಿದ್ವಾಂಸನು ಪಶುಪತಿಯಾದ ಶಿವನಿಗೆ ಸಂಬಂಧಪಟ್ಟ ಈ ಯೋಗಾಭ್ಯಾಸ ಮಾಡೋಣದರಿಂದ ಆತ್ಮಸ್ವರೂಪವನ್ನು ಕುರಿತು ಧ್ಯಾನಮಾಡಬೇಕು. ಯಾರು ಆತ್ಮಜ್ಞಾನಿಗಳೋ ಅವರು ಯಾವಾಗಲೂ ಪರಿಶುದ್ಧರೆಂಬುದರಲ್ಲಿ ಸಂದೇಹವಿಲ್ಲ.

೬೭-೬೮. ಋಗ್ವೇದ, ಯಜುರ್ವೇದ, ಸಾಮವೇದ, ಆಯಾಯ ವೇದಕ್ಕೆ ಸಂಬಂಧಪಟ್ಟ ಉಪನಿಷತ್ತು ಇವುಗಳಲ್ಲಿ ಹೇಳಿರುವ ತತ್ವವನ್ನು ಆತ್ಮಜ್ಞಾನಿಯಾದ ಬ್ರಾಹ್ಮಣನು ತನ್ನ ಯೋಗ ಜ್ಞಾನದಿಂದಲೇ ತಿಳಿಯುವನು. ಅನಂತರದಲ್ಲಿ ಆ ಯೋಗಿಯು ಲಿಂಗ ದೇಹವನ್ನು ಬಿಟ್ಟು ಎಲ್ಲಾ ದೇವತೆಗಳ ಸ್ವರೂಪನೂ ತಾನೇ ಆಗಿ ಹುಟ್ಟು ನಾವುಗಳಿಲ್ಲದಿರು

ಯಥಾ ವೃಕ್ಷಾತ್ಫಲಂ ಪಕ್ವಂ ಪವನೇನ ಸಮೀರಿತಂ ।
ನಮಸ್ಕಾರೇಣ ರುದ್ರಸ್ಯ ತಥಾ ಪಾಪಂ ಪ್ರಣಶ್ಯತಿ ॥೬೯॥

ಯತ್ರರುದ್ರ ನಮಸ್ಕಾರಃ ಸರ್ವ ಕರ್ಮ ಫಲೋ ಧ್ರುವಃ ।
ಅನ್ಯದೇವ ನಮಸ್ಕಾರಾನ್ನ ತತ್ಫಲ ಮವಾಪ್ನುಯಾತ್ ॥೭೦॥

ತಸ್ಮಾತ್ತ್ರಿಃ ಪ್ರಣವಂ ಯೋಗೀ ಉಪಾಸೀತ ಮಹೇಶ್ವರಂ ।
ದಶ ವಿಸ್ತಾರಕಂ ಬ್ರಹ್ಮ ತಥಾ ಚ ಬ್ರಹ್ಮವಿಸ್ತರೈಃ ॥೭೧॥

ಏವಂ ಧ್ಯಾನ ಸಮಾಯುಕ್ತಃ ಸ್ವದೇಹಂ ಯಃ ಪರಿತ್ಯಜೇತ್ ।
ಸ ಯಾತಿ ಶಿವಸಾಯುಜ್ಯಂ ಸಮುದ್ಧೃತ್ಯ ಕುಲತ್ರಯಂ ॥೭೨॥

---

ವಿಕೆಯನ್ನು ಪಡೆಯುತ್ತಾನೆ. ಯಾವ ಗರ್ಭಕ್ಕೂ ಪುನಃ ಇಳಿಯದೇ ನಿತ್ಯ ವಾದ ಮೋಕ್ಷವನ್ನು ಹೊಂದುತ್ತಾನೆ. ಚೆನ್ನಾಗಿ ಮಾಗಿರುವ ಹಣ್ಣು ಗಾಳಿ ಬೀಸಿದ ಕೂಡಲೇ ಮರದಿಂದ ಹೇಗೆ ಬೀಳುವುದೋ, ಹಾಗೆ ಶಿವ ನಿಗೆ ನಮಸ್ಕಾರ ಮಾಡಿದ ಕೂಡಲೇ ಉಪಾಸಕನ ಪಾಪವೆಲ್ಲವೂ ಆ ಕ್ಷಣ ದಲ್ಲಿಯೇ ನಾಶವಾಗುತ್ತದೆ.

೭೦–೭೨. ಉಪಾಸಕನಿಗೆ ಶಿವನ ನಮಸ್ಕಾರದಿಂದ ಎಲ್ಲಾ ಒಳ್ಳೆಯ ಕರ್ಮಗಳಫಲವೂ ನಿಶ್ಚಯವಾಗಿ ಬರುವುದು. ಇಂಥಾ ಫಲವು ಇನ್ನು ಯಾವ ದೇವತೆಗಳಿಗೆ ನಮಸ್ಕಾರಮಾಡಿದರೂ ಬರಲಾರದು. ಆದ್ದರಿಂದ ಯೋಗಿಯು ಶರೀರದ ಕರ್ಮ, ಮಾತು, ಮನಸ್ಸು, ಈ ಮೂರರಿಂದಲೂ ನಮ್ರನಾಗಿರುತ್ತಾ ಹತ್ತುವಿಧವಾದ ಮೋಹಗಳು ಮೊದಲಾದುವುಗಳಿಂದ ಎಂದರೆ ಹತ್ತು ಇಂದ್ರಿಯಗಳಿಗೂ ವಿಸ್ತಾರ ವನ್ನುಂಟುಮಾಡುವ ಕರ್ಮಗಳಿಂದ, ಪರಬ್ರಹ್ಮಸ್ವರೂಪಿಯಾದ ಶಿವ ನನ್ನು ಆರಾಧಿಸಬೇಕು. ಹೀಗೆ ಧ್ಯಾನಮಾಡುತ್ತಾ ತನ್ನ ದೇಹವನ್ನು ಬಿಟ್ಟರೆ ಅವನು ತನ್ನ ಸಂಬಂಧಪಟ್ಟ ಮೂರು ಕುಲಗಳನ್ನೂ ಉದ್ಧಾರ ಮಾಡುವುದಲ್ಲದೆ ಶಿವನೊಂದಿಗೆ ಐಕ್ಯರೂಪವಾದ ಮೋಕ್ಷವನ್ನೂ ಹೊಂದುವನು.

ಅಥವಾಽರಿಷ್ಟಮಾಲೋಕ್ಯ ಮರಣೇ ಸಮುಪಸ್ಥಿತೇ ।
ಅವಿಮುಕ್ತೇಶ್ವರಂ ಗತ್ವಾ ವಾರಾಣಸ್ಯಾಂ ತು ಶೋಧನಂ ॥೭೩॥
ಯೇನ ಕೇನಾಽಪಿ ವಾ ದೇಹಂ ಸಂತ್ಯಜೇನ್ಮುಚ್ಯತೇ ನರಃ ।
ಶ್ರೀಪರ್ವತೇ ವಾ ವಿಪ್ರೇಂದ್ರಾಃ ಸಂತ್ಯಜೇತ್ಸ್ವತನುಂ ನರಃ ॥೭೪॥
ಸ ಯಾತಿ ಶಿವಸಾಯುಜ್ಯಂ ನಾಽತ್ರ ಕಾರ್ಯಾ ವಿಚಾರಣಾ ।
ಅವಿಮುಕ್ತಂ ಪರಂ ಕ್ಷೇತ್ರಂ ಜಂತೂನಾಂ ಮುಕ್ತಿದಂ ಸದಾ ॥೭೫॥
ಸೇವೇತ ಸತತಂ ಧೀಮಾನ್ ವಿಶೇಷಾನ್ಮರಣಾಂತಿಕೇ ॥೭೬॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಅನಿಷ್ಟಸ್ವರೂಪವಿಚಾರ
ವಿವರಣಂ ನಾಮ ಏಕನವತಿತಮೋಽಧ್ಯಾಯಃ

---

೭೩–೭೬. ಹಾಗಲ್ಲದಿದ್ದರೆ ಮೇಲೆ ಹೇಳಿದ ಮರಣ ಸೂಚಕವಾದ ಗುರುತುಗಳಿಂದ ಅನಿಷ್ಟವು ಒದಗಿ ಸಾವಿನಕಾಲ ಸಮೀಪಿಸಿದರೆ, ಕಾಶಿಗೆ ಹೋಗಿ ಅವಿಮುಕ್ತೇಶ್ವರನನ್ನು ಸೇವಿಸಿ ಯಾವರೀತಿ ಮರಣ ಹೊಂದಿದರೂ ಮನುಷ್ಯನು ಮೋಕ್ಷವನ್ನು ಪಡೆಯುವನು. ಮನುಷ್ಯನು ಶ್ರೀ, ಎಂಬ ಬೆಟ್ಟದಲ್ಲಾದರೂ ಪ್ರಾಣ ಬಿಡಬಹುದು. ಅವನೂ ಕೂಡ ಶಿವನೊಂದಿಗೆ ಐಕ್ಯರೂಪವಾದ ಮೋಕ್ಷವನ್ನು ಹೊಂದುವುದರಲ್ಲಿ ಸಂದೇಹವಿಲ್ಲ. "ಅವಿಮುಕ್ತ" ಎಂಬ ಕ್ಷೇತ್ರವೂ ಪ್ರಾಣಿಗಳಿಗೆ ಯಾವಾಗಲೂ, ಮೋಕ್ಷವನ್ನು ಕೊಡುವುದೇ ಆಗಿದೆ. ಆದ್ದರಿಂದ ಬುದ್ಧಿವಂತನು ಮರಣಕಾಲ ಸಮೀಪಿಸಿದಾಗ ಈ ಕ್ಷೇತ್ರಗಳಲ್ಲಿ ಯಾವುದಾದರೊಂದನ್ನು ಹೊಂದಿ ಮೋಕ್ಷಕ್ಕೆ ಉಪಾಯನಾದ ಶಿವನನ್ನು ಆರಾಧಿಸಬೇಕು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ "ಅನಿಷ್ಟಗಳಸ್ವರೂಪ ವಿಚಾರ" ಎಂಬ ತೊಂಬತ್ತೊಂದನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ದ್ವಿನವತಿತಮೋಽಧ್ಯಾಯಃ

॥ ಋಷಯ ಊಚುಃ ॥

**ಏವಂ ವಾರಾಣಸೀ ಪುಣ್ಯಾ ಯದಿ ಸೂತ ಮಹಾಮತೇ ।**
**ವಕ್ತುಮರ್ಹಸಿ ಚಾಽಸ್ಮಾಕಂ ತತ್ಪ್ರಭಾವಂ ಹಿ ಸಾಂಪ್ರತಂ ॥ ೧ ॥**
**ಕ್ಷೇತ್ರಸ್ಯಾಽಸ್ಯ ಚ ಮಾಹಾತ್ಮ್ಯ ಮವಿ ಮುಕ್ತಸ್ಯ ಶೋಭನಂ ।**
**ವಿಸ್ತರೇಣ ಯಥಾನ್ಯಾಯಂ ಶ್ರೋತುಂ ಕೌತೂಹಲಂ ಹಿ ನಃ ॥**

॥ ಸೂತ ಉವಾಚ ॥

**ವಕ್ಷ್ಯೇ ಸಂಕ್ಷೇಪತಃ ಸಮ್ಯಕ್ ವಾರಾಣಸ್ಯಾಃ ಸು ಶೋಭನಂ ।**
**ಅವಿಮುಕ್ತಸ್ಯ ಮಾಹಾತ್ಮ್ಯಂ ಯಥಾಽಹ ಭಗವಾ ನ್ಭವಃ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತೆರಡನೆಯ ಅಧ್ಯಾಯವು.

೧–೩. ಋಷಿಗಳು ಹೇಳಿದರು:— ಓ, ಬಹಳ ಬುದ್ಧಿವಂತರಾದ ಸೂತ ಮಹರ್ಷಿಗಳೇ, ಹೀಗೆ ಕಾಶೀಕ್ಷೇತ್ರವು ಇಷ್ಟು ಪುಣ್ಯಕರವಾಗಿದ್ದರೆ ಅದರ ಮಾಹಾತ್ಮ್ಯೆಯನ್ನು ನಮಗೆ ಈಗ ತಾವು ದಯವಿಟ್ಟು ತಿಳಿಸಬೇಕು. ಈ ಅವಿಮುಕ್ತವೆಂಬ ಕ್ಷೇತ್ರದ ಮಂಗಳಕರವಾದ ಮಹಿಮೆಯನ್ನೂ, ಶಾಸ್ತ್ರೋಕ್ತ ಕ್ರಮದಲ್ಲಿ ವಿಸ್ತಾರವಾಗಿ ಹೇಳುವುದನ್ನು ಕೇಳಲು ನಮಗೆ ಕುತೂಹಲ ಉಂಟಾಗಿದೆ.

ಸೂತನು ಹೇಳಿದನು. :—ಕಾಶೀಕ್ಷೇತ್ರದ, ಬಹಳ ಮಂಗಳಕರವಾದ ಮಹಿಮೆಯನ್ನೂ, ಅವಿಮುಕ್ತ ಕ್ಷೇತ್ರದ ಮಹಿಮೆಯನ್ನೂ, ಪೂಜ್ಯನಾದ ಶಿವನು ಹೇಳಿರುವನು. ನಿಮಗೆ ನಾನು ಅದನ್ನು ಸಂಕ್ಷೇಪವಾಗಿಯೂ ಮತ್ತು ಚೆನ್ನಾಗಿಯೂ ಹೇಳುವೆನು.

ವಿಸ್ತರೇಣ ಮಯಾ ವಕ್ತುಂ ಬ್ರಹ್ಮಣಾ ಚ ಮಹಾತ್ಮನಾ ।
ಶಕ್ಯತೇ ನೈವ ವಿಪ್ರೇಂದ್ರಾ ವರ್ಷಕೋಟಿ ಶತೈರಪಿ ॥ ೪ ॥
ದೇವಃ ಪುರಾ ಕೃತೋದ್ವಾಹಃ ಶಂಕರೋ ನೀಲಲೋಹಿತಃ ।
ಹಿಮವಚ್ಛಿಖರಾದ್ದೇವ್ಯಾ ಹೈಮವತ್ಯಾ ಗಣೇಶ್ವರೈಃ ॥ ೫ ॥
ವಾರಾಣಸೀ ಮನುಪ್ರಾಪ್ಯ ದರ್ಶಯಾಮಾಸ ಶಂಕರಃ ।
ಅವಿಮುಕ್ತೇಶ್ವರಂ ಲಿಂಗಂ ವಾಸಂ ತತ್ರ ಚಕಾರ ಸಃ ॥ ೬ ॥
ವಾರಾಣಸೀ ಕುರುಕ್ಷೇತ್ರ ಶ್ರೀಪರ್ವತ ಮಹಾಲಯೇ ।
ತುಂಗೇಶ್ವರೇ ಚ ಕೇದಾರೇ ತತ್ಸ್ಥಾನೇ ಯೋ ಯತಿರ್ಭವೇತ್ ॥
ಯೋಗೇ ಪಾಶುಪತೇ ಸಮ್ಯಕ್ ದಿನನೇಕಂ ಯತಿರ್ಭವೇತ್ ।
ತಸ್ಮಾತ್ಸರ್ವಂ ಪರಿತ್ಯಜ್ಯ ಚರೇತ್ಪಾಶುಪತಂ ವ್ರತಂ ॥ ೮ ॥

---

೪–೬. ಇವುಗಳ ಮಹಿಮೆಯನ್ನು ನಾನಾಗಲಿ, ಮಹಾತ್ಮನಾದ ಬ್ರಹ್ಮನಾಗಲಿ, ನೂರು ಕೋಟಿ ವರ್ಷಗಳಾದರೂ ವಿಸ್ತಾರವಾಗಿ ಹೇಳಿ ಮುಗಿಸಲು ಆಗುವುದಿಲ್ಲ. ಹಿಂದೆ, ದೇವದೇವನಾದ, ವಿಷಪಾನದಿಂದ ಕಪ್ಪಾದ ಕತ್ತುಳ್ಳ, ಶಿವನು ಪಾರ್ವತಿಯನ್ನು ಮದುವೆ ಮಾಡಿಕೊಂಡು ಹಿಮವತ್ಪರ್ವತದ ಶಿಖರದಿಂದ, ಹಿಮವಂತನ ಮಗಳಾದ ಪಾರ್ವತಿಯೊಂದಿಗೂ, ಗಣಾಧಿಪತಿಗಳೊಡನೆಯೂ ಕಾಶಿಗೆ ಬಂದು ಅಲ್ಲಿ ವಿಶ್ವೇಶ್ವರ ಲಿಂಗದಲ್ಲಿ ತನ್ನ ಸ್ವರೂಪವನ್ನು ತೋರಿಸಿದನು. ಎಂದರೆ ಅಲ್ಲಿ ಹೀಗೆ ನೆಲೆಸಿ ವಾಸಮಾಡಲು ಪ್ರಾರಂಭಿಸಿದನು.

೭–೮. ಕಾಶೀ, ಕುರುಕ್ಷೇತ್ರ, ಶ್ರೀಪರ್ವತ, ಎಂಬ ಶ್ಲಾಘ್ಯವೂ, ದೊಡ್ಡದೂ ಆದ ಪವಿತ್ರ ಸ್ಥಳಗಳಲ್ಲಿಯೂ ತುಂಗೇಶ್ವರ ಮತ್ತು ಕೇದಾರೇಶ್ವರಗಳಲ್ಲಿಯೂ, ಯಾವನು ಸಂನ್ಯಾಸಿಯಾಗುವನೋ ಅವನು ಮುಂದಿನ ಜನ್ಮದಲ್ಲಿ, ಪಾಶುಪತ, ಎಂಬ ಯೋಗದಲ್ಲಿ, ಒಂದೇ ದಿನದಲ್ಲಿ ನಿಷ್ಣಾತನಾಗುವನು. ಆದ್ದರಿಂದ ಬೇರೆ ಎಲ್ಲಾ ವ್ರತವನ್ನೂ ಬಿಟ್ಟು, ಪಾಶುಪತ ವ್ರತವನ್ನೇ ಮಾಡಬೇಕು. ಈ ಕ್ಷೇತ್ರದಲ್ಲಿ ದೇವತೆಗಳ ಉದ್ಯಾನವನದಲ್ಲಾಗಲಿ, ಅಥವಾ ಅದಕ್ಕಿಂತಲೂ ಶ್ರೇಷ್ಠವಾದ ಶಿವನ ಉದ್ಯಾನವನದಲ್ಲಾಗಲಿ, ವಾಸಮಾಡಬೇಕು. ಇಲ್ಲಿ ಶಿವನು ಬಹಳ ಮಂಗಳ

ದೇವ್ಯೋದ್ಯಾನೇ ವಸೇತ್ತತ್ರ ಶರ್ವೋದ್ಯಾನ ಮನುತ್ತಮಂ ।
ಮನಸಾ ನಿರ್ಮಮೇ ರುದ್ರೋ ವಿಮಾನಂ ಚ ಸು ಶೋಭನಂ ॥

ದರ್ಶಯಾಮಾಸ ಚ ತದಾ ದೇವ್ಯೋದ್ಯಾನ ಮನುತ್ತಮಂ ।
ಹೈಮವತ್ಯಾಃ ಸ್ವಯಂ ದೇವಃ ಸನಂದೀ ಪರಮೇಶ್ವರಃ ॥೧೦॥

ಕ್ಷೇತ್ರಸ್ಯಾಽಸ್ಯ ಚ ಮಾಹಾತ್ಮ್ಯ ಮವಿಮುಕ್ತಸ್ಯ ಶಂಕರಃ ।
ಉಕ್ತವಾನ್ಪರಮೇಶಾನಃ ಪಾರ್ವತ್ಯಾಃ ಪ್ರೀತಯೇ ಭವಃ ॥೧೧॥

ಪ್ರಫುಲ್ಲನಾನಾವಿಧ ಗುಲ್ಮ ಶೋಭಿತಂ ।
ಲತಾ ಪ್ರತಾನಾಽದಿ ಮನೋಹರಂ ಬಹಿಃ ॥
ವಿರೂಢ ಪುಷ್ಪೈಃ ಪರಿತಃ ಪ್ರಿಯಂಗುಭಿಃ ।
ಸು ಪುಷ್ಪಿತೈಃ ಕಂಟಕಿತೈಶ್ಚ ಕೇತಕೈಃ ॥೧೨॥

ತಮಾಲಗುಲ್ಮೈ ರ್ನಿಚಿತಂ ಸುಗಂಧಿಭಿ !
ರ್ನಿಕಾಮ ಪುಷ್ಪೈ ರ್ಬಕುಲೈಶ್ಚ ಸರ್ವತಃ ॥

---

ಕರವಾದ ವಿಮಾನವನ್ನು ಮತ್ತು ದಿವ್ಯವಾದ ರಥವನ್ನು ಮನಸ್ಸಿನಿಂದಲೇ ನಿರ್ಮಾಣ ಮಾಡಿದನು.

೧೦-೧೨. ನಂದೀಶ್ವರನೊಂದಿಗೆ ಕೂಡಿದ ಶಿವನು, ತಾನಾಗಿಯೇ ಶ್ರೇಷ್ಠವಾದ ತನ್ನ ಉದ್ಯಾನವನವನ್ನು ಪಾರ್ವತಿಗೆ ತೋರಿಸಿದನು. ಶಂಕರನು ಅವಿಮುಕ್ತ ಕ್ಷೇತ್ರದ ಮಹಿಮೆಯನ್ನು ಪಾರ್ವತಿಯ ಸಂತೋಷಕ್ಕಾಗಿ ಹೇಳಿದನು. ಚಿಗುರಿದ ಅನೇಕ ವಿಧವಾದ ಪೊದರುಗಳ ಮೇಲಿರುವ, ಅರಳಿದ ಹುವ್ವುಗಳಿಂದ ಸುಂದರವಾಗಿರುವ, ಹೊರಗಡೆ ಬಳ್ಳಿಯ ಮಂಟಪಗಳಿಂದ ಮನೋಹರವಾದ, ಬೇಕಾದಷ್ಟು ಹೂಗಳನ್ನು ಬಿಟ್ಟಿರುವ, ಸುತ್ತಲೂ ಪ್ರಿಯಂಗು, ಎಂಬ ಬಳ್ಳಿಯಿಂದ, ಮುಳ್ಳುಗಳಿದ್ದರೂ ಚೆನ್ನಾಗಿರುವ ತಾಳೇ ಹುವ್ವಿನ ಗರಿಗಳಿಂದಲೂ, ಕೂಡಿರುವ ಉದ್ಯಾನವನವನ್ನು ತೋರಿಸಿದನು.

೧೩. ಹೊಂಗೆಯ ಪೊದರುಗಳಿಂದಲೂ, ಸುಗಂಧವಾಗಿ, ಹೆಚ್ಚಾಗಿ ಹೂ ಬಿಟ್ಟಿರುವ, ಬಕುಳ, ಎಂಬ ಸುರಗಿ, ಸುರಹೊನ್ನೆ ಮುಂತಾದ ಗಿಡ

ಅಶೋಕ ಪುನ್ನಾಗಶತೈಃ ಸು ಪುಷ್ಪಿತೈ ।
ದ್ವಿರೇಫ ಮಾಲಾಕುಲ ಪುಷ್ಪಸಂಚಯೈಃ ॥೧೪॥

ಕ್ವಚಿತ್ಪ್ರಫುಲ್ಲಾಂಬುಜ ರೇಣು ಭೂಷಿತೈಃ ।
ವಿ ಹಂಗಮೈಶ್ಚಾನು ಕಲಪ್ರಣಾದಿಭಿಃ ॥
ವಿನಾದಿತಂ ಸಾರಸ ಚಕ್ರ ವಾಕೈಃ ।
ಪ್ರಮತ್ತ ದಾ ತ್ಯೂಹ ವರೈಶ್ಚ ಸರ್ವತಃ ॥೧೫॥

ಕ್ವಚಿಚ್ಚ ಕೇಕಾರುತ ನಾದಿತಂ ಶುಭಂ ।
ಕ್ವಚಿಚ್ಚ ಕಾರಂಡವ ನಾದ ನಾದಿತಂ ॥
ಕ್ವಚಿಚ್ಚ ಮತ್ತಾಲಿ ಕುಲಾಕುಲೀಕೃತಂ ।
ಮದಾಕುಲಾಭಿ ರ್ಭ್ರಮರಾಂಗನಾದಿಭಿಃ ॥೧೬॥

---

ಗಳಿಂದಲೂ, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಲ್ಪಟ್ಟಿರುವ, ಅಶೋಕ, ಪುನ್ನಾಗ, ನಾಗಲಿಂಗ, ಎಂಬ ಜಾತಿಯ ನೂರಾರು ಗಿಡಗಳು, ಚೆನ್ನಾಗಿ ಹೂ ಬಿಟ್ಟಿರಲಾಗಿ, ದುಂಬಿಗಳ ಸಾಲುಗಳೇ ಅವುಗಳನ್ನು ಮುತ್ತಿರುವುದರಿಂದ ಮನೋಹರವಾದ ಉದ್ಯಾನವನವನ್ನು ಶಿವನು ಪಾರ್ವತೀ ದೇವಿಗೆ ತೋರಿಸಿದನು.

೧೫-೧೬. ಕೆಲವು ಕಡೆ ಅರಳಿದ ಕಮಲದ ಮಕರಂದದ ಧೂಳುಗಳಿಂದ ಅಲಂಕರಿಸಲ್ಪಟ್ಟು ಮಧುರವಾಗಿ ಗಾನಮಾಡುತ್ತಿರುವ ಹಕ್ಕಿಗಳಿಂದಲೂ, ಬಕ, ಚಕ್ರವಾಕ, ಕೊಬ್ಬಿದ ಧ್ವನಿಮಾಡುತ್ತಿರುವ ಕೋಗಿಲೆಗಳಿಂದಲೂ, ಕೆಲವು ಕಡೆ ನವಿಲುಗಳ ಕೇಕಾಧ್ವನಿಯಿಂದಲೂ, ಕೆಲವು ಕಡೆ ಹಂಸಗಳ ಧ್ವನಿಯಿಂದಲೂ, ಮತ್ತೊಂದು ಕಡೆ ಕೊಬ್ಬಿದ ಹೆಣ್ಣು ಮತ್ತು ಗಂಡು ದುಂಬಿಗಳ ಸಮೂಹದಿಂದಲೂ, ಶೋಭಾಯಮಾನವಾಗಿರುವ, ಇನ್ನೊಂದು ಕಡೆ ಮನೋಹರವೂ ಸುವಾಸನೆಯುಳ್ಳವೂ, ಆದ ಹೂಗಳಿಂದಲೂ, ಇನ್ನೊಂದು ಕಡೆ ಹೂವಿನಿಂದ ತುಂಬಿರುವ ಸಿಹಿ ಮಾವಿನ ಮರಗಳಿಂದಲೂ, ಬಳ್ಳಿಗಳಿಂದ ತುಂಬಿಕೊಂಡಿರುವ ತಿಲಕವೆಂಬ ಮರಗಳಿಂದಲೂ, ಹಾಡುತ್ತಿರವ, ಸಿದ್ಧ, ಚಾರಣ,

ನಿಷೇವಿತಂ ಚಾರು ಸುಗಂಧಿ ಪುಷ್ಪೈಃ ।
ಕ್ವಚಿತ್ಸು ಪುಷ್ಪೈಃ ಸಹಕಾರ ವೃಕ್ಷೈಃ ॥
ಲತೋಪ ಗೂಢೈಸ್ತಿಲ ಕೈಶ್ಚ ಗೂಢಂ ।
ಪ್ರಗೀತ ವಿದ್ಯಾಧರ ಸಿದ್ಧ ಚಾರಣಂ ॥೧೬॥

ಪ್ರವೃತ್ತನೃತ್ತಾನುಗತಾಪ್ಸರೋಗಣಂ ।
ಪ್ರಹೃಷ್ಟನಾನಾವಿಧ ಪಕ್ಷಿ ಸೇವಿತಂ ॥
ಪ್ರವೃತ್ತ ಹಾರೀತ ಕುಲೋಪನಾದಿತಂ ।
ಮೃಗೇಂದ್ರ ನಾದಾಕುಲ ಮತ್ತಮಾನಸೈಃ ॥೧೭॥

ಕ್ವಚಿತ್ಕ್ವಚಿದ್ಗಂಧ ಕದಂಬಕೈ ರ್ಮೃಗೈಃ ।
ವಿಲೂನ ದರ್ಭಾಂಕುರ ಪುಷ್ಪಸಂಚಯಂ ॥
ಪ್ರಪುಲ್ಲ ನಾನಾವಿಧಚಾರು ಪಂಕಜೈಃ ।
ಸರಸ್ತಡಾಗೈ ರುಪಶೋಭಿತಂ ಕ್ವಚಿತ್ ॥೧೮॥

---

ರೆಂಬ ದೇವತಾ ಪ್ರಭೇದಗಳಿಂದಲೂ, ಮನೋಹರವಾಗಿರುವ ಉದ್ಯಾನ ವನವನ್ನು ಶಿವನು ಉಮಾದೇವಿಗೆ ತೋರಿಸಿದನು.

೧೭–೧೯. ಪ್ರಾರಂಭಿಸಲ್ಪಟ್ಟ ನಾಟ್ಯಕ್ಕೆ ಅನುಸಾರವಾಗಿ ಕುಣಿಯುತ್ತಿರುವ ಅಪ್ಸರೆಯರ ಸಮೂಹವುಳ್ಳ, ಸಂತೋಷವುಳ್ಳ ಅನೇಕ ಬಗೆಯ ಹಕ್ಕಿಗಳಿಂದ ಕೂಡಿರುವ, ಸಿಂಹದ ಗರ್ಜನೆಗಳಿಂದ ಮೊಳಗುತ್ತಿರುವ ಕೊಬ್ಬಿದ ಮನಸ್ಸುಳ್ಳ, ಗಾನ ಮಾಡುತ್ತಿರುವ ಹಾರೀತ, ಎಂಬ ಹಕ್ಕಿಗಳಿಂದ ಕೂಡಿರುವ, ಕೆಲವು ಕಡೆ ಸುವಾಸನೆಗಾಗಿ ಮೋಹಗೊಂಡ ಮೃಗಗಳಿಂದ ಕತ್ತರಿಸಲ್ಪಟ್ಟ ದರ್ಭೆಯ ಹುಲ್ಲಿನ ಸಮೂಹಗಳುಳ್ಳ, ಅರಳಿದ ಅನೇಕ ವಿಧವಾದ, ಮನೋಹರವಾದ, ಕಮಲಗಳಿಂದ ಕೂಡಿದ, ಸರೋವರ, ಕೆರೆಗಳಿಂದ ಭೂಷಿಸಲ್ಪಟ್ಟ, ಕೊಂಬೆಗಳ ಸಮೂಹದಲ್ಲಿ ಅಡಗಿರುವ ನವಿಲುಗಳಿಂದ ಮನೋಹರವಾದ, ಮದದಿಂದ ಕೊಬ್ಬಿದ ದುಂಬಿಗಳುಳ್ಳ, ಸೊಗಸಾದ ಹಕ್ಕಿಗಳ ಗಾನದಿಂದ ಮನೋಹರವಾದ, ಅರಳಿದ ಮರಗಳ ಕೊಂಬೆಗಳಲ್ಲಿ ಅಡಗಿರುವ, ಹೊಸದಾದ ಚಿಗುರುಗಳ

ವಿಟಪ ನಿಚಯು ಲೀನಂ ನೀಲಕಂಠಾಽಭಿರಾಮಂ ।
ಮದ ಮುದಿತ ವಿಹಂಗಂ ಪ್ರಾಪ್ತನಾದಾಽಭಿರಾಮಂ ॥
ಕುಸುಮಿತತರುಶಾಖಾಲೀನ ಮತ್ತದ್ವಿರೇಫಂ ।
ನವಕಿಸಲಯಶೋಭಾ ಶೋಭಿತಂ ಪ್ರಾಂಶು ಶಾಖಂ ॥೧೯॥

ಕ್ವಚಿಚ್ಚ ದಂತಕ್ಷತ ಚಾರು ವೀರುಧಂ ।
ಕ್ವಚಿಲ್ಲತಾಽಽಲಿಂಗಿತ ಚಾರು ವೃಕ್ಷಕಂ ॥
ಕ್ವಚಿದ್ವಿಲಾಸಾಽಲಸ ಗಾಮಿನೀಭಿಃ ।
ನಿಷೇವಿತಂ ಕಿಂ ಪುರುಷಾಽಂಗನಾದಿಭಿಃ ॥೨೦॥

ಪಾರಾವತಧ್ವನಿ ವಿಕೂಜಿತ ಚಾರು ಶೃಂಗೈಃ ।
ಅಭ್ರಂಕಷೈಃ ಸಿತ ಮನೋಹರ ಚಾರು ರೂಪೈಃ ॥
ಆಕೀರ್ಣ ಪುಷ್ಪನಿಕರ ಪ್ರವಿಭಕ್ತಹಂ ಸೈಃ ।
ವಿಭ್ರಾಜಿತಂ ತ್ರಿದಶ ದಿವ್ಯ ಕುಲೈ ರನೇಕೈಃ ॥೨೧॥

---

ಕಾಂತಿಯಿಂದ ಭೂಷಿತವಾದ, ದೊಡ್ಡ ದೊಡ್ಡ ಮರದ ಕೊಂಬೆಗಳುಳ್ಳ, ಉದ್ಯಾನವನವನ್ನು ಪರಶಿವನು ಸತೀ ದೇವಿಗೆ ತೋರಿಸಿದನು.

೨೦–೨೨. ಕೆಲವು ಕಡೆ ದಂತದಿಂದ ಕಚ್ಚಿದ ಸ್ಥಳವಿರುವಂತೆ ಕೆಂಪಗೆ ಮನೋಹರವಾಗಿರುವ, ರತಿಸೂಚಕವಾದ ಬಳ್ಳಿಗಳುಳ್ಳ, ಕೆಲವು ಕಡೆ ಬಳ್ಳಿಗಳಿಂದ ಆಲಿಂಗಿಸಲ್ಪಟ್ಟ ಮನೋಹರವಾದ ಮರಗಳುಳ್ಳ, ಕೆಲವು ಕಡೆ ವಿಲಾಸದಿಂದ ಮೆಲ್ಲಗೆ ನಡೆಯುತ್ತಿರುವ ಕಿಂಪುರುಷ, ಎಂಬ ದೇವತೆಗಳಿಂದ ಕೂಡಿದ, ಧ್ವನಿಮಾಡುತ್ತಿರುವ ಪಾರಿವಾಳ ಹಕ್ಕಿಗಳು ಆಶ್ರಯಿಸಿರಲು, ಮನೋಹರವಾದ ಶಿಖರಗಳುಳ್ಳ, ಆಕಾಶವನ್ನು ಮುಟ್ಟು ವಷ್ಟು ಎತ್ತರವಾಗಿ, ಬೆಳ್ಳಗೂ, ಸುಂದರವಾಗಿಯೂ, ಇರುವ ಸ್ವರೂಪವುಳ್ಳ, ಚೆಲ್ಲಿದ ಹೂಗಳಿಂದ ವಿಭಾಗಿಸಲ್ಪಟ್ಟ ಹಂಸಗಳುಳ್ಳ, ದೇವತೆಗಳ ಮನೋಹರವಾದ ಅನೇಕ ವಾಸ ಗೃಹಗಳಿಂದಲೂ, ಪ್ರಕಾಶಮಾನವಾಗಿರುವ, ಅರಳಿದ ನೈದಿಲೆ, ಕಮಲ, ಇವುಗಳ ಸಾವಿರಾರು ಮೇಲು ಕಟ್ಟುಗಳಿಂದ ಸೇರಿದ ಛಾವಣಿಗಳಿಂದ ಕೂಡಿರುವ, ಸರೋವರಗಳಿಂದ ಶೋಭಿಸುತ್ತಿರುವ ದೇವತೆಗಳ ಮಾರ್ಗವುಳ್ಳ, ಮಧ್ಯಮಾರ್ಗದಲ್ಲಿ ಹರಡಿರುವ ಹೂಗಳ ಚಿತ್ರವಿಚಿತ್ರವಾದ ಸಾಲುಗಳಿಂದ ಕೂಡಿರುವ,

ಫುಲ್ಲೋತ್ಪಲಾಂಬುಜ ವಿತಾನ ಸಹಸ್ರ ಯುಕ್ತಂ ।
ತೋಯಾಶಯೈಃ ಸಮನು ಶೋಭಿತ ದೇವ ಮಾರ್ಗಂ ॥
ಮಾರ್ಗಾಂತ ರಾಕಲಿತ ಪುಷ್ಪ ವಿಚಿತ್ರ ಪಂಕ್ತಿ ।
ಸಂಬದ್ಧ ಗುಲ್ಮ ವಿಟಪೈ ರ್ವಿವಿಧೈ ರುಪೇತಂ ॥೨೨॥

ತುಂಗಾಗ್ರೈ ರ್ನೀಲ ಪುಷ್ಪೈಃ ಸ್ತಬಕ ಭರನತ ಪ್ರಾಂಶು ಶಾಖೈ ರಶೋಕೈಃ ।
ದೋಲಾ ಪ್ರಾಂತಾಂತಲೀನ ಶ್ರುತಿ ಸುಖ ಜನಕೈ ರ್ಭಾಸಿತಾಂತಂ ಮನೋಜ್ಞೈಃ ॥
ರಾತ್ರೌ ಚಂದ್ರಸ್ಯ ಭಾಸಾ ಕುಸುಮಿತ ತಿಲಕೈರೇಕತಾಂ ಸಂಪ್ರಯಾತಂ ।
ಛಾಯಾ ಸುಪ್ತ ಪ್ರಬುದ್ಧ ಸ್ಥಿತ ಹರಿಣಕುಲಾಲುಪ್ತ ದೂರ್ವಾಂಕುರಾಗ್ರಂ ॥೨೩॥

---

ಪೊದರುಗಳುಳ್ಳ ಮರಗಳಿಂದ ಕೂಡಿರುವ ಉದ್ಯಾನವನವನ್ನು ಪರಮೇಶ್ವರನು ಪಾರ್ವತೀ ದೇವಿಗೆ ತೋರಿಸಿದನು.

೨೩–೨೪. ಎತ್ತರವಾದ ತುದಿಗಳುಳ್ಳ, ಕಪ್ಪಾದ ಹೂಗಳುಳ್ಳ ಗೊಂಚಲಿನ ಭಾರದಿಂದ ಬಗ್ಗಿದ ಉನ್ನತವಾದ ಕೊಂಬೆಗಳುಳ್ಳ, ಮನೋಹರವಾಗಿ ತೂಗಾಡುತ್ತಿರುವ ಅಂಚಿನ ಕೊನೆಯ ಭಾಗದಲ್ಲಿ ಕೂತು ಕಿವಿಗಿಂಪಾದ ಧ್ವನಿಗಳನ್ನು ಮಾಡುತ್ತಿರುವ ಹಕ್ಕಿಗಳಿಂದ ಶೋಭಿಸುತ್ತಿರುವ, ಅಶೋಕವೆಂಬ ಮರಗಳಿಂದ ಮನೋಹರವಾಗಿರುವ, ರಾತ್ರಿಯಲ್ಲಿ ಚಂದ್ರನ ಬೆಳಕಿನಿಂದ ಅರಳಿದ ತಿಲಕವೆಂಬ ಮರಗಳೊಡನೆ ಒಂದಾಗಿ ಕಾಣುತ್ತಿರುವ, ನೆರಳಿನಲ್ಲಿ ಮಲಗಿ ವಿಶ್ರಾಂತಿಯನ್ನು ಪಡೆದ ಮೇಲೆ ಎದ್ದಿರುವ, ಜಿಂಕೆಗಳ ಸಮೂಹದಿಂದ ತಿನ್ನಲ್ಪಡುತ್ತಿರುವ. ದೂರ್ವಾ, ಎಂಬ ಗರಿಕೆಯ ಹುಲ್ಲಿನ ತುದಿಯುಳ್ಳ, ಉದ್ಯಾನವನವನು ಪರಶಿವನು ಗಿರಿಜಾ ದೇವಿಗೆ ತೋರಿಸಿದನು. ಹಂಸಗಳ ರೆಕ್ಕೆಗಳ ಗಾಳಿಯಿಂದ ಅಲ್ಲಾಡುತ್ತಿರುವ, ಕಮಲಗಳಿಂದ ಸ್ವಚ್ಛವಾಗಿಯೂ, ವಿಶಾಲವಾಗಿಯೂ, ಬೆಳಗುತ್ತಿರುವ ನೀರುಳ್ಳ, ನೀರಿನ ದಡದಲ್ಲಿ ಬೆಳೆದಿರುವ

**ಹಂಸಾನಾಂ ಪಕ್ಷವಾತ ಪ್ರಚಲಿತ ಕಮಲ ಸ್ವಚ್ಛ ವಿಸ್ತೀರ್ಣ**
**ತೋಯಂ ।**
**ತೋಯಾನಾಂ ತೀರಜಾತ ಪ್ರಚಕಿತ ಕದಲೀ ಚಾಟು ನೃತ್ಯನ್ಮ**
**ಯೂರಂ ॥**
**ಮಾಯೂರೈಃ ಪಕ್ಷಚಂದ್ರೈಃ ಕ್ವಚಿದವನಿಗತೈಃ ರಂಜಿತಕ್ಷ್ಮಾ**
**ಪ್ರದೇಶಂ ।**
**ದೇಶೇ ದೇಶೇ ವಿಲೀನ ಪ್ರಮುದಿತ ವಿಲಸನ್ಮತ್ತಹಾರೀತ ವೃಂದಂ ॥**
**ಸಾರಂಗೈಃ ಕ್ವಚಿದುಪ ಶೋಭಿತ ಪ್ರದೇಶಂ ।**
**ಪ್ರಚ್ಛನ್ನಂ ಕುಸುಮ ಚಯೈಃ ಕ್ವಚಿದ್ವಿಚಿತ್ರೈಃ ॥**
**ಹೃಷ್ಟಾಭಿಃ ಕ್ವಚಿದಪಿ ಕಿನ್ನರಾಂಗನಾಭಿಃ ।**
**ವೀಣಾಭಿಃ ಸುಮಧುರ ಗೀತನೃತ್ತಕಂಠಂ ॥೨೫॥**

---

ಬಾಳೆಯ ಗಿಡಗಳ ಕೆಳಗಡೆ ನಾಟ್ಯವಾಡುತ್ತಿರುವ ನವಿಲುಗಳುಳ್ಳ, ಕೆಲವು ಕಡೆ ಭೂಮಿಯನ್ನು ನೋಕುತ್ತಿರುವ ಚಂದ್ರನಂತಿರುವ ನವಿಲುಗಳ ಗರಿಗಳಿಂದ ಅಲಂಕರಿಸಲ್ಪಟ್ಟ ಭೂಭಾಗವುಳ್ಳ, ಅಲ್ಲಲ್ಲಿ ಅಡಗಿರುವ ಬಹಳ ಹರ್ಷದಿಂದ ಆಟವಾಡುತ್ತಿರುವ, ಕೊಬ್ಬಿದ ಹಾರೀತ, ಎಂಬ ಹಕ್ಕಿಗಳ ಸಮೂಹವುಳ್ಳ, ಉದ್ಯಾನವನವನ್ನು ಮಹಾದೇವನು ಉಮಾದೇವಿಗೆ ತೋರಿಸಿದನು.

೨೫–೨೭. ಕೆಲವು ಕಡೆ ಜಿಂಕೆಗಳಿಂದ ಶೋಭಿಸುತ್ತಿರುವ ಪ್ರದೇಶವುಳ್ಳ, ಕೆಲವು ಕಡೆ ನಾನಾ ಬಗೆಯ ಹೂವುಗಳಿಂದ ಮುಚ್ಚಲ್ಪಟ್ಟ, ಕೆಲವು ಕಡೆ ಸಂತೋಷಗೊಂಡ ಕಿನ್ನರ, ಎಂಬ ದೇವ ಸ್ತ್ರೀಯರುಗಳ ವೀಣಾನಾದದಿಂದ ಮತ್ತು ಮಧುರವಾದ ಸಂಗೀತ ನಾಟ್ಯಗಳಿಂದ ಕೂಡಿರುವ, ಕೆಲವು ಕಡೆ ಹರಡಿದ ಹೂಗಳಿಂದ ಕೂಡಿದ, ಸುತ್ತಲೂ ಇರುವ ಮರಗಳುಳ್ಳ, ಮುನಿಗಳ ಪರ್ಣಾಶ್ರಮಗಳಿಂದ ಕೂಡಿದ, ಕೆಲವುಕಡೆ ಬಹಳ ವಿಶಾಲವಾಗಿಯೂ, ಬಹು ಉನ್ನತವಾಗಿಯೂ, ಬುಡದಿಂದ ಹಿಡಿದು ಮೇಲಿನವರೆಗೂ ಹಣ್ಣುಗಳಿಂದ ತುಂಬಿದ ಹಲಸಿನ ಗಿಡಗಳಿಂದ ಕೂಡಿರುವ, ಉದ್ಯಾನವನವನ್ನು ತೋರಿಸಿದನು. ಅರಳಿದ ಮಾಧವೀ ಎಂಬ ಬಳ್ಳಿಯಿಂದ ಮಾಡಿದ ಲತಾ ಮಂಟಪಕ್ಕೆ ಬಂದಿರುವ ಸಿದ್ಧ ಸ್ತ್ರೀಯರ ಚಿನ್ನದ ಕಾಲ್ಕಡಗಗಳ ಧ್ವನಿಯಿಂದ ಮನೋಹರವಾದ,

ಸಂಸ್ಪೃಷ್ಟೈಃ ಕ್ವಚಿದುಪಲಿಪ್ತ ಕೀರ್ಣ ಪುಷ್ಪೈಃ ।
ರಾವಾಸ್ತ್ರೈಃ ಪರಿವೃತ ಪಾದಪಂ ಮುನೀನಾಂ ॥
ಆಮೂಲಾತ್ಫಲ ನಿಚಿತೈಃ ಕ್ವಚಿದ್ವಿಶಾಲೈ ।
ರುತ್ತುಂಗೈಃ ಪನಸ ಮಹೀರುಹೈ ರುಪೇತಂ ॥೨೬॥

ಪುಲ್ಲಾತಿಮುಕ್ತಕ ಲತಾಗೃಹ ನೀತಸಿದ್ಧ ।
ಸಿದ್ಧಾಂಗನಾ ಕನಕ ನೂಪುರ ರಾವ ರಮ್ಯಂ ॥
ರಮ್ಯಂ ಪ್ರಿಯಂಗು ತರು ಮಂಜರಿ ಸಕ್ತ ಭೃಂಗಂ ।
ಭೃಂಗಾವಲೀ ಕಬಲಿತಾಮ್ರ ಕದಂಬ ಪುಷ್ಪಂ ॥೨೭॥

ಪುಷ್ಪೋತ್ಕರಾನಿಲ ವಿಘೂರ್ಣಿತ ವಾರಿರಮ್ಯಂ ।
ರಮ್ಯದ್ವಿರೇಫ ವಿನಿಪಾತಿತ ಮಂಜುಗುಲ್ಮಂ ॥
ಗುಲ್ಮಾಂತರ ಪ್ರಸಭ ಭೀತ ಮೃಗೀ ಸಮೂಹಂ ।
ವಾತೇರಿತಂ ತನುಭೃತಾ ಮಪವರ್ಗ ದಾತೃ ॥೨೮॥

---

ಪ್ರಿಯಂಗು, ಎಂಬ ಮರದ ಹೂಗಳ ಗೊಂಚಲಿಗೆ ಮುತ್ತಿಕೊಂಡಿರುವ ದುಂಬಿಗಳುಳ್ಳ, ದುಂಬಿಗಳ ಸಮೂಹದಿಂದ ತಿನ್ನಲ್ಪಡುತ್ತಿರುವ ಈಚಲು ಮರದ ಹೂಗಳುಳ್ಳ, ಸುಂದರವಾದ ಉದ್ಯಾನವನವನ್ನು ಪರಮೇಶ್ವರನು ಗಿರಿಜಾದೇವಿಗೆ ತೋರಿಸಿದನು.

೨೮–೩೦. ಹುವ್ವಿನ ಎರಚುವಿಕೆಯಿಂದ ಕೂಡಿದ ಗಾಳಿಯಿಂದ ಅಲ್ಲಾಡಿಸಲ್ಪಟ್ಟ ನೀರಿನಿಂದ ಸುಂದರವಾದ, ಹಾಡುತ್ತಿರುವ ದುಂಬಿಯಿಂದ ಬೀಳುವಂತೆ ಅಲ್ಲಾಡಿಸಲ್ಪಟ್ಟ, ಮನೋಹರವಾದ ಪೊದರುಗಳುಳ್ಳ, ಪೊದರುಗಳೊಳಗೆ ಬಹಳವಾಗಿ ಹೆದರಿದ ಹೆಣ್ಣುಜಿಂಕೆಗಳ ಸಮೂಹಗಳುಳ್ಳ, ಮಂದಮಾರುತವು ಬೀಸುತ್ತಿರಲು, ಮನುಷ್ಯರಿಗೆ ಮೋಕ್ಷದಷ್ಟು ಸುಖವನ್ನು ಕೊಡುವ ಉದ್ಯಾನವನವನ್ನು ತೋರಿಸಿದನು. ಚಂದ್ರ ಕಿರಣಗಳ ಸಂಬಂಧದಿಂದ ನಾನಾ ವರ್ಣವುಳ್ಳ, ಮನೋಹರವಾದ ತಿಲಕ, ಎಂಬ ಮರಗಳಿಂದಲೂ, ಹಣೆಗೆ ಹಚ್ಚುವ ಚಂದ್ರ, ಕುಂಕುಮ, ಗೋಸಂಬಿ, ಇವುಗಳಿಗೆ ಸಮಾನವಾದ ಬಣ್ಣವುಳ್ಳ, ಅಶೋಕವೆಂಬ ಮರಗಳಿಂದಲೂ, ಚಿನ್ನಕ್ಕೆ ಸಮಾನವಾದ ಕಾಂತಿಯುಳ್ಳ

ಚಂದ್ರಾಂಶು ಜಾಲ ಶಬಲೈಸ್ತಿಲಕೈಃಮನೋಜ್ಞೈಃ ।
ಸಿಂಧೂರ ಕುಂಕುಮ ಕುಸುಂಭ ನಿಭೈ ರಶೋಕೈಃ ॥
ಚಾಮೀಕರ ದ್ಯುತಿ ಸಮೈ ರಥ ಕರ್ಣಿಕಾರೈಃ ।
ಪುಷ್ಪೋತ್ಕರೈ ರುಪಚಿತಂ ಸು ವಿಶಾಲ ಶಾಖೈಃ ॥೨೯॥

ಕ್ವಚಿ ದಂಜನ ಚೂರ್ಣಾಭೈಃ ಕ್ವಚಿ ದ್ವಿದ್ರುಮ ಸನ್ನಿಭೈಃ ।
ಕ್ವಚಿ ತ್ಕಾಂಚನ ಸಂಕಾಶೈಃ ಪುಷ್ಪೈ ರಾಚಿತ ಭೂತಲಂ ॥೩೦॥

ಪುನ್ನಾಗೇಷು ದ್ವಿಜಶತ ವಿರುತಂ ।
ರಕ್ತಾಶೋಕ ಸ್ತಬಕ ಭರನತಂ ॥
ರಮ್ಯೋಪಾಂತ ಕ್ಲಮ ಹರ ಭವನಂ ।
ಫುಲ್ಲಾಬ್ಜೇಷು ಭ್ರಮರ ವಿಲಸಿತಂ ॥೩೧॥

ಸಕಲ ಭುವನ ಭರ್ತಾ ಲೋಕನಾಥ ಸ್ತದಾನೀಂ ।
ತುಹಿನ ಶಿಖರ ಪುತ್ರ್ಯಾ ಸಾರ್ಧ ಮಿಷ್ಟೈ ರ್ಗಣೇಶೈಃ ॥
ವಿವಿಧ ತರು ವಿಶಾಲಂ ಮತ್ತ ಹೃಷ್ಟಾನ್ನ ಪುಷ್ಪೈ ।
ರುಪವನ ಮತಿರಮ್ಯಂ ದರ್ಶಯಾಮಾಸ ದೇವ್ಯಾಃ ॥೩೨॥

---

ಕಣಿಗಲೆಯ ಗಿಡಗಳಿಂದಲೂ, ಬಹಳ ವಿಶಾಲವಾದ ಕೊಂಬೆಗಳುಳ್ಳ ಹುವ್ವಿನ ಗಿಡಗಳ ಸಮೂಹದಿಂದಲೂ, ಶೋಭಿಸುತ್ತಿರುವ ಉದ್ಯಾನವನ ವನ್ನು ಶಿವನು ಸರ್ವಮಂಗಳೆಗೆ ತೋರಿಸಿದನು. ಕೆಲವುಕಡೆ ಅಂಜನದ ಚೂರ್ಣದಂತಿರುವ, ಕೆಲವುಕಡೆ ಹವಳಕ್ಕೆ ಸಮಾನವಾದ, ಕೆಲವುಕಡೆ ಚಿನ್ನಕ್ಕೆ ಸಮಾನವಾದ, ಹುವ್ವುಗಳಿಂದ ತುಂಬಿದ ಪ್ರದೇಶಗಳುಳ್ಳ, ಉದ್ಯಾನವನವನ್ನು ತೋರಿಸಿದನು.

೩೧–೩೨. ಪುನ್ನಾಗ, ಎಂಬ ಗಿಡದಲ್ಲಿ ನೂರಾರು ಹಕ್ಕಿಗಳ ಕಲ ಕಲ ಧ್ವನಿಯುಳ್ಳ, ಕೆಂಪಾಗಿರುವ ಅಶೋಕ ಪುಷ್ಪದ ಗೊಂಚಲಿನಿಂದ ಬಗ್ಗಿರುವ, ಸುಂದರವಾದ, ವಿಶ್ರಾಂತಿ ಗೃಹವಾದ, ಅರಳಿದ ಕಮಲ ಗಳಲ್ಲಿ ದುಂಬಿಗಳ ನರ್ತನವುಳ್ಳ, ಅನೇಕ ವಿಧವಾದ ಮರಗಳಿಂದ ವಿಶಾಲ ವಾದ, ಕೊಬ್ಬಿ, ಸಂತೋಷಗೊಂಡ ಕೋಗಿಲೆಗಳಿಂದ ಬಹಳ ಸುಂದರ ವಾದ, ಉದ್ಯಾನವನವನ್ನು ಎಲ್ಲಾ ಲೋಕಕ್ಕೂ ಅಧಿಪತಿಯೂ, ರಕ್ಷ

ಪುಷ್ಪೈ ರ್ವರ್ಣ್ಯೈಃ ಶುಭಶುಭ ತಮೈಃ ಕಲ್ಪಿತೈರ್ದಿವ್ಯಭೂಷೈಃ ।
ದೇವೀಂ ದಿವ್ಯಾಮುಪವನಗತಾಂ ಭೂಷಯಾಮಾಸ ಶರ್ವಃ ॥
ಸಾ ಚಾಽಪ್ಯೇನಂ ತುಹಿನ ಗಿರಿಸುತಾ ಶಂಕರಂ ದೇವದೇವಂ ।
ಪುಷ್ಪೈರ್ದಿವ್ಯೈಃ ಶುಭ ತರತಮೈ ರ್ಭೂಷಯಾಮಾಸ ಭಕ್ತ್ಯಾ ॥೩೩॥
ಸಂಪೂಜ್ಯ ಪೂಜ್ಯಂ ತ್ರಿದಶೇಶ್ವರಾಣಾಂ ।
ಸಂಪ್ರೇಕ್ಷ್ಯ ಚೋದ್ಯಾನ ಮತೀವ ರಮ್ಯಂ ॥
ಗಣೇಶ್ವರೈ ರ್ನಂದಿ ಮುಖೈಶ್ಚ ಸಾರ್ಧಂ ।
ಉವಾಚ ದೇವಂ ಪ್ರಣಿಪತ್ಯ ದೇವೀ ॥೩೪॥

॥ ಶ್ರೀ ದೇವ್ಯುವಾಚ ॥

ಉದ್ಯಾನಂ ದರ್ಶಿತಂ ದೇವ ಪ್ರಭಯಾ ಪರಯಾ ಯುತಂ ।
ಕ್ಷೇತ್ರಸ್ಯ ಚ ಗುಣಾ ನ್ಸರ್ವಾನ್ ಪುನ ರ್ಮೇ ವಕ್ತುಮರ್ಹಸಿ ॥೩೫॥

---

ಕನೂ ಆದ ಶಿವನು ಹಿಮವಂತನ ಮಗಳಾದ ಪಾರ್ವತಿಯೊಂದಿಗೂ, ತನಗೆ ಪ್ರಿಯರಾದ ಗಣಾಧಿಪತಿಗಳೊಡನೆ ಕೂಡಿದವನಾಗಿ ಪಾರ್ವತಿಗೆ ತೋರಿಸಿದನು. ಅತ್ಯಂತ ಮಂಗಳಕರಗಳಾದ, ಉದ್ಯಾನವನದ ಹೂಗಳಿಂದ ಸಿದ್ಧಪಡಿಸಿದ, ಶ್ರೇಷ್ಠವಾದ ಒಡವೆಗಳಿಂದ ಪಾರ್ವತಿಯನ್ನು ಹರನು ಅಲಂಕರಿಸಿದನು. ಹಿಮವಂತನ ಮಗಳಾದ ಪಾರ್ವತಿಯೂ ಕೂಡ ದೇವದೇವನಾದ ಶಿವನನ್ನು ತುಂಬ ಸೊಗಸಾದ, ಅತ್ಯಂತ ಮಂಗಳಕರವಾದ ಹೂಗಳಿಂದ ಭಕ್ತಿಯಿಂದ ಅಲಂಕಾರ ಮಾಡಿದಳು.

೩೪–೩೬. ಪಾರ್ವತೀ ದೇವಿಯು ದೇವೇಂದ್ರನೇ ಮೊದಲಾದವರಿಂದಲೂ ಪೂಜಿಸಲ್ಪಡುವ ಶಿವನನ್ನು ಪೂಜಿಸಿ, ಬಹಳ ಸುಂದರವಾದ ಉದ್ಯಾನವನವನ್ನು ನೋಡಿ, ಗಣಾಧಿಪತಿಗಳು, ನಂದಿ, ಇವರೇ ಮೊದಲಾದವರೊಂದಿಗೆ ಶಿವನನ್ನು ನಮಸ್ಕರಿಸಿ, ಶಿವನನ್ನು ಕುರಿತು ಈ ರೀತಿಯಲ್ಲಿ ಹೇಳಿದಳು. ಶ್ರೀ ಉಮಾದೇವಿಯು ಹೇಳಿದಳು; ಓ ಸ್ವಾಮಿಯೇ, ಅತ್ಯಂತ ಕಾಂತಿಯಿಂದ ಕೂಡಿದ, ಉದ್ಯಾನವನವನ್ನು ನನಗೆ ತೋರಿಸಿದ್ದೀರಿ. ಈಗ ತಾವು ಈ ಕ್ಷೇತ್ರದ ಎಲ್ಲಾ ಮಾಹಾತ್ಮ್ಯೆಯನ್ನೂ ದಯವಿಟ್ಟು ತಿಳಿಸಬೇಕು. ದೇವ ದೇವನಾದ, ಧರ್ಮ ರೂಪವಾದ ವೃಷಭವೇ

ಅಸ್ಯ ಕ್ಷೇತ್ರಸ್ಯ ಮಾಹಾತ್ಮ್ಯಂ ಮುವಿಮುಕ್ತಸ್ಯ ಸರ್ವಥಾ ।
ವಕ್ತು ಮರ್ಹಸಿ ದೇವೇಶ ದೇವದೇವ ವೃಷಧ್ವಜ ॥೩೬॥

॥ ಸೂತ ಉವಾಚ ॥

ದೇವ್ಯಾಸ್ತದ್ವಚನಂ ಶ್ರುತ್ವಾ ದೇವದೇವೋ ವರಪ್ರಭುಃ ।
ಆಘ್ರಾಯ ವದನಾಂಭೋಜಂ ತದಾಽಽಹ ಗಿರಿಜಾಂ ಹಸನ್ ॥೩೭॥

॥ ಶ್ರೀ ಭಗವಾನುವಾಚ ॥

ಇದಂ ಗುಹ್ಯತಮಂ ಕ್ಷೇತ್ರಂ ಸದಾ ವಾರಾಣಸೀ ಮಮ ।
ಸರ್ವೇಷಾ ಮೇವ ಜಂತೂನಾಂ ಹೇತು ರ್ಮೋಕ್ಷಸ್ಯ ಸರ್ವದಾ ॥
ಅಸ್ಮಿನ್ಸಿದ್ಧಾಃ ಸದಾ ದೇವಿ ಮದೀಯಂ ವ್ರತಮಾಸ್ಥಿತಾಃ ।
ನಾನಾ ಲಿಂಗಧರಾ ನಿತ್ಯಂ ಮಮ ಲೋಕಾಭಿ ಕಾಂಕ್ಷಿಣಃ ॥೩೯॥
ಅಭ್ಯಸ್ಯಂತಿ ಪರಂ ಯೋಗಂ ಯುಕ್ತಾಽತ್ಮಾನೋ ಜಿತೇಂದ್ರಿಯಾಃ ।
ನಾನಾ ವೃಕ್ಷಸಮಾಕೀರ್ಣೇ ನಾನಾ ವಿಹಗ ಶೋಭಿತೇ ॥೪೦॥

---

ಬಾವುಟವಾಗುಳ್ಳ, ಓ ಸ್ವಾಮಿಯೇ, ಈ ವಿಶ್ವೇಶ್ವರ ಕ್ಷೇತ್ರದ ಮಹಿಮೆಯನ್ನು ಸಂಪೂರ್ಣವಾಗಿ ನನಗೆ ತಾವು ದಯವಿಟ್ಟು ಹೇಳಿ.

೩೭-೩೯. ಸೂತನು ಹೇಳಿದನು:— ದೇವ ದೇವನೂ, ಶ್ರೇಷ್ಠನಾದ ಸ್ವಾಮಿಯೂ ಆದ ಶಿವನು ಪಾರ್ವತಿಯ ಮಾತನ್ನು ಕೇಳಿ, ಅವಳ ಮುಖ ಕಮಲವನ್ನು ಮೂಸಿ ಮುದ್ದಿಸಿ ನಗುತ್ತಾ ಅವಳನ್ನು ಕುರಿತು ಹೀಗೆ ಹೇಳಿದನು. ಶ್ರೀ ಶಿವನು ಹೇಳಿದನು— ಈ ಕಾಶೀಕ್ಷೇತ್ರವು ಅತ್ಯಂತ ರಹಸ್ಯವೂ, ಎಲ್ಲಾ ಪ್ರಾಣಿಗಳಿಗೂ ಮೋಕ್ಷವನ್ನು ಕೊಡುವ ಸ್ಥಳವೂ ಆಗಿದೆ. ಇಲ್ಲಿ ಅನೇಕ ಬಗೆಯ ಲಿಂಗಗಳನ್ನು ಧರಿಸಿಕೊಂಡು, ಮಂಗಳಕರನಾದ ನನ್ನ ಲೋಕವನ್ನು ಅಪೇಕ್ಷಿಸುವವರಾಗಿ, ಅನೇಕ ಸಿದ್ಧಪುರುಷರು ಯಾವಾಗಲೂ ನನಗೆ ಸಂಬಂಧಪಟ್ಟ ವ್ರತವನ್ನು ಮಾಡುತ್ತಿರುತ್ತಾರೆ.

೪೦-೪೨. ಯೋಗಿಗಳು ಇಂದ್ರಿಯ ನಿಗ್ರಹವನ್ನು ಮಾಡಿ, ಅನೇಕ ಬಗೆಯ ಮರಗಳಿಂದ ಅಲಂಕರಿಸಲ್ಪಟ್ಟ, ನಾನಾ ಬಗೆಯ ಹಕ್ಕಿಗಳಿಂದ

ಕಮಲೋತ್ಪಲ ಪುಷ್ಪಾಢ್ಯೈಃ ಸರೋಭಿಃ ಸಮಲಂ ಕೃತೇ ।
ಅಪ್ಸರೋಗಣ ಗಂಧರ್ವೈಃ ಸದಾ ಸಂಸೇವಿತೇ ಶುಭೇ ॥೪೧॥
ರೋಚತೇ ಮೇ ಸದಾ ವಾಸೋ ಯೇನ ಕಾರ್ಯೇಣ ತಚ್ಛೃಣು ।
ಮನ್ಮನಾ ಮಮ ಭಕ್ತಶ್ಚ ಮಯಿಃ ನಿತ್ಯಾರ್ಪಿತಕ್ರಿಯಃ ॥೪೨॥
ಯಥಾ ಮೋಕ್ಷ ಮವಾಪ್ನೋತಿ ಅನ್ಯತ್ರ ನ ತಥಾ ಕ್ವಚಿತ್ ।
ಕಾಮಂ ಹ್ಯತ್ರ ಮೃತೋ ದೇವಿ ಜಂತು ರ್ಮೋಕ್ಷಾಯ ಕಲ್ಪತೇ ॥
ಏತನ್ಮಮ ಪುರಂ ದಿವ್ಯಂ ಗುಹ್ಯಾದ್ಗುಹ್ಯತಮಂ ಮಹತ್ ।
ಬ್ರಹ್ಮಾದಯೋ ವಿಜಾನಂತಿ ಯೇ ಚ ಸಿದ್ಧಾ ಮುಮುಕ್ಷವಃ ॥೪೪॥

---

ಶೋಭಿತವಾದ ಈ ಸ್ಥಳದಲ್ಲಿ ಶ್ರೇಷ್ಠವಾದ ಯೋಗವನ್ನು ಅಭ್ಯಾಸಮಾಡು ತ್ತಾರೆ. ಕಮಲ, ನೈದಿಲೆ, ಈ ಹೂಗಳಿಂದ ತುಂಬಿರುವ ಸರೋವರ ಗಳಿಂದ ಶೋಭಿಸುತ್ತಿರುವ, ಅಪ್ಸರೆಯರು ಮತ್ತು ಗಂಧರ್ವರಿಂದ ಯಾವಾಗಲೂ ಶೋಭಿಸುತ್ತಿರುವ, ಮಂಗಳಕರವಾದ ಈ ಕ್ಷೇತ್ರದಲ್ಲಿ ವಾಸಮಾಡಲು ನನಗೆ ತುಂಬಾ ಪ್ರೀತಿ ಇದೆ. ಇಲ್ಲಿ ಜನಗಳು ಯಾವ ಕರ್ಮವನ್ನು ಮಾಡಿದರೆ ನನಗೆ ತೃಪ್ತಿಯಾಗುವುದೆಂಬುದನ್ನು ಹೇಳುವೆನು. ಮನುಷ್ಯನು ನನ್ನಲ್ಲೇ ಯಾವಾಗಲೂ ಮನಸ್ಸನ್ನಿಟ್ಟು, ನನಗೆ ಭಕ್ತ ನಾಗಿ, ಎಲ್ಲಾ ಕೆಲಸಗಳನ್ನೂ ನನಗೆ ಸಮರ್ಪಣೆ ಮಾಡಬೇಕು.

೪೩–೪೪. ಇಲ್ಲಿ ಹೀಗೆ ಕರ್ಮಮಾಡುವ ಮನುಷ್ಯನು ಮೋಕ್ಷವನ್ನು ಬೇಗ ಪಡೆಯುವಂತೆ ಇನ್ನೆಲ್ಲಿಯೂ ಪಡೆಯಲಾರನು. ಎಲೌ ಪಾರ್ವತೀ ದೇವಿಯೇ, ಇಲ್ಲಿ ಮನುಷ್ಯನು ಹೇಗೆ ಮರಣವನ್ನು ಹೊಂದಿದರೂ ಸರಿಯೇ ಅವನಿಗೆ ಮೋಕ್ಷ ಸಿಕ್ಕುವುದು ಖಂಡಿತವು. ಈ ಕ್ಷೇತ್ರವು ದಿವ್ಯ ವಾದ ಮತ್ತು ಅತ್ಯಂತ ಶ್ರೇಷ್ಠವಾದ ನನ್ನ ಪಟ್ಟಣವು. ಇದರ ಮಹಿ ಮೆಯ ಸ್ವರೂಪವನ್ನು ಬ್ರಹ್ಮನೇ ಮೊದಲಾದವರೂ, ಮೋಕ್ಷವನ್ನು ಬಯಸುವ ಮಹಾ ಸಿದ್ಧಪುರುಷರೂ, ತಿಳಿಯುತ್ತಾರೆ. ಆದ್ದರಿಂದ ಇದು ಅತ್ಯಂತ ಶ್ರೇಷ್ಠವು ಮತ್ತು ನನ್ನ ಅತ್ಯುತ್ತಮವಾದ ವಾಸಸ್ಥಾನವು.

ಅತಃ ಪರಮಿದಂ ಕ್ಷೇತ್ರಂ ಪರಾ ಚೇಯಂ ಗತಿರ್ಮಮ ।
ವಿಮುಕ್ತಂ ನ ಮಯಾ ಯಸ್ಮಾನ್ಮೋಕ್ಷ್ಯತೇ ವಾ ಕದಾಚನ ॥೪೫॥
ಮಮ ಕ್ಷೇತ್ರ ಮಿದಂ ತಸ್ಮಾದವಿಮುಕ್ತ ಮಿತಿ ಸ್ಮೃತಂ ।
ನೈಮಿಷೇ ಚ ಕುರುಕ್ಷೇತ್ರೇ ಗಂಗಾದ್ವಾರೇ ಚ ಪುಷ್ಕರೇ ॥೪೬॥
ಸ್ನಾನಾ ತ್ಸಂಸೇವನಾದ್ವಾಽಪಿ ನ ಮೋಕ್ಷಃ ಪ್ರಾಪ್ಯತೇ ಯತಃ ।
ಇಹ ಸಂಪ್ರಾಪ್ಯತೇ ಯೇನ ತತ ಏತದ್ವಿಶಿಷ್ಯತೇ ॥೪೭॥
ಪ್ರಯಾಗೇ ವಾ ಭವೇ ನ್ಮೋಕ್ಷ ಇಹ ವಾ ಮತ್ಪರಿಗ್ರಹಾತ್ ।
ಪ್ರಯಾಗಾದಪಿ ತೀರ್ಥಾಗ್ರ್ಯಾ ದವಿಮುಕ್ತ ಮಿದಂ ಶುಭಂ ॥೪೮॥
ಧರ್ಮಸ್ಯೋಪ ನಿಷತ್ಸತ್ಯಂ ಮೋಕ್ಷಸ್ಯೋಪ ನಿಷಚ್ಛಮಃ ।
ಕ್ಷೇತ್ರ ತೀರ್ಥೋಪನಿಷದಂ ನ ವಿದು ರ್ಬುಧಸತ್ತಮಾಃ ॥೪೯॥

---

ನಾನು ಯಾವಾಗಲೂ ಈ ಕ್ಷೇತ್ರವನ್ನು ಹಿಂದಿನಂತೆಯೇ ಮುಂದೆಯೂ ಬಿಡದೇ ಇರುವುದರಿಂದ ಇದಕ್ಕೆ ಅವಿಮುಕ್ತ ಕ್ಷೇತ್ರವೆಂದು ಹೆಸರು ಬಂದಿದೆ.

೪೬–೪೮. ಆದ್ದರಿಂದ ಇದನ್ನು ಜನರೂ ಅವಿಮುಕ್ತಕ್ಷೇತ್ರವೆಂದು ಕರೆಯುತ್ತಾರೆ. ನೈಮಿಷ, ಎಂಬ ಅರಣ್ಯದಲ್ಲಾಗಲಿ, ಕುರುಕ್ಷೇತ್ರದಲ್ಲಾಗಲಿ, ಗಂಗಾನದಿಯ ಮುಖದಲ್ಲಾಗಲಿ, ಪುಷ್ಕರಕ್ಷೇತ್ರದಲ್ಲಾಗಲಿ, ಸ್ನಾನ ಮಾಡಿ, ಸೇವೆ ಮಾಡಿದರೂ. ಮನುಷ್ಯನಿಗೆ ಮೋಕ್ಷವು ಶೀಘ್ರವಾಗಿ ಸಿಕ್ಕದೇ ಇರುವುದರಿಂದಲೂ, ಈ ಕ್ಷೇತ್ರದಲ್ಲಿ ಸುಲಭವಾಗಿ ಮುಕ್ತಿಯು ಶೀಘ್ರವಾಗಿ ದೊರೆಯುವುದರಿಂದಲೂ, ಇದು ಬಹಳ ಮಹಿಮೆಯುಳ್ಳದ್ದೆಂದು ತಿಳಿಯಬೇಕು. ಪ್ರಯಾಗ ಕ್ಷೇತ್ರದಲ್ಲಾಗಲಿ,ನಾನಿರುವುದರಿಂದ, ಈ ಕ್ಷೇತ್ರದಲ್ಲಾಗಲಿ, ಮನುಷ್ಯನಿಗೆ ಮೋಕ್ಷವು ಸಿಕ್ಕುವುದು. ಅದರಲ್ಲಿಯೂ, ತೀರ್ಥಗಳಲ್ಲಿ ಅತ್ಯಂತ ಶ್ರೇಷ್ಠವಾದ ಪ್ರಯಾಗ ಕ್ಷೇತ್ರಕ್ಕಿಂತಲೂ, ಈ ಕ್ಷೇತ್ರವು ಅತ್ಯಂತ ಮಂಗಳಕರವಾದುದು.

೪೯–೫೦. ಸತ್ಯವು, ಧರ್ಮಕ್ಕೆ ಅತಿ ಮುಖ್ಯವಾದ ತಿರುಳು; ಮೋಕ್ಷಕ್ಕೆ ಶಾಂತಿಯೇ ಬಹು ಮುಖ್ಯವಾದ ತಿರುಳು, ವಿದ್ವಾಂಸರಲ್ಲಿ

**ಕಾಮಂ ಭುಂಜ ನ್ಸ್ವಪರ್ ಕ್ರೀಡನ್ ಕುರ್ವನ್ವಿ ವಿವಿಧಾಃ ಕ್ರಿಯಾಃ ।**
**ಅವಿಮುಕ್ತೇ ತ್ಯಜೇ ತ್ಪ್ರಾಣಾನ್ ಜಂತುರ್ಮೋಕ್ಷಾಯ ಕಲ್ಪತೇ ॥**
**ಕೃತ್ವಾ ಪಾಪ ಸಹಸ್ರಾಣಿ ಪಿಶಾಚತ್ವಂ ವರಂ ನೃಣಾಂ ।**
**ನ ತು ಶಕ್ರ ಸಹಸ್ರತ್ವಂ ಸ್ವರ್ಗೇ ಕಾಶೀಪುರಂ ವಿನಾ ॥೫೧॥**
**ತಸ್ಮಾತ್ಸಂಸೇವನೀಯಂ ಹಿ ಅವಿಮುಕ್ತಂ ಹಿ ಮುಕ್ತಯೇ ।**
**ಜೈಗೀಷವ್ಯಃ ಪರಾಂ ಸಿದ್ಧಿಂ ಗತೋ ಯತ್ರ ಮಹಾತಪಾಃ ॥೫೨॥**
**ಅಸ್ಯ ಕ್ಷೇತ್ರಸ್ಯ ಮಾಹಾತ್ಮ್ಯ ದ್ಭಕ್ತ್ಯಾ ಚ ಮಮ ಭಾವಿತಃ ।**
**ಜೈಗೀಷವ್ಯಗುಹಾ ಶ್ರೇಷ್ಠಾ ಯೋಗಿನಾಂ ಸ್ಥಾನಮಿಷ್ಯತೇ ॥೫೩॥**
**ಧ್ಯಾಯಂತ ಸ್ತತ್ರ ಮಾಂ ನಿತ್ಯಂ ಯೋಗಾಽಗ್ನಿರ್ದೀಪ್ಯತೇ ಭೃಶಂ ।**
**ಕೈವಲ್ಯಂ ಪರಮಂ ಯಾತಿ ದೇವಾನಾ ಮಪಿ ದುರ್ಲಭಂ ॥೫೪॥**

---

ಶ್ರೇಷ್ಠರಾದವರೂ ಸಹ ಈ ತೀರ್ಥಕ್ಷೇತ್ರದ ರಹಸ್ಯವನ್ನು ತಿಳಿಯಲಾರರು. ಮನುಷ್ಯನು ಯಥೇಷ್ಟವಾಗಿ ಊಟಮಾಡುತ್ತಾ, ಮಲಗುತ್ತಾ, ಆಟವಾಡುತ್ತಾ ಹೀಗೆ ಏನನ್ನಾದರೂ ಮಾಡುತ್ತಾ ಇದ್ದರೂ, ಅವಿಮುಕ್ತ ಕ್ಷೇತ್ರಲ್ಲಿ ಪ್ರಾಣಬಿಟ್ಟರೆ ಮೋಕ್ಷವು ಸಿಕ್ಕುವುದು.

೫೧–೫೩. ಸಾವಿರಾರು ಪಾಪಗಳನ್ನು ಮಾಡಿಯಾದರೂ ಈ ಕಾಶೀ ಕ್ಷೇತ್ರದಲ್ಲಿ ವಾಸಮಾಡುವುದು, ಎಷ್ಟೋ ಶ್ರೇಷ್ಠವಾದುದು. ಕಾಶೀ ಕ್ಷೇತ್ರದಲ್ಲಿ ವಾಸಮಾಡುವ ಪುಣ್ಯವಿಲ್ಲದೇ, ಸಾವಿರಾರು ಇಂದ್ರರ ಪದವಿಯನ್ನು ಸ್ವರ್ಗಲೋಕದಲ್ಲಿ ಹೊಂದಿದರೂ, ಇದರಷ್ಟು ಪುಣ್ಯ ಸುಖರೂಪವಾದ ಪ್ರಯೋಜನವಿಲ್ಲ. ಆದ್ದರಿಂದ ಮೋಕ್ಷಕ್ಕಾಗಿ ಅವಿಮುಕ್ತ ಕ್ಷೇತ್ರವಾದ ಈ ಕಾಶಿಯನ್ನೇ ಹೊಂದಬೇಕು. ಮಹಾ ತಪಸ್ವಿಯಾದ ಜೈಗಿಷವ್ಯ, ಎಂಬುವನು ಈ ಕಾಶೀಕ್ಷೇತ್ರದಲ್ಲೇ ಹಿಂದೆ ಸಿದ್ಧಿಯನ್ನು ಪಡೆದನು. ಮತ್ತು ಈ ಕ್ಷೇತ್ರದ ಮಹಿಮೆಯನ್ನು ಚೆನ್ನಾಗಿ ತಿಳಿದನು. ನನ್ನಲ್ಲಿ ವಿಶೇಷವಾದ ಭಕ್ತಿಯಿಂದ ಯೋಗಿಗಳು, ಶ್ರೇಷ್ಠವಾದ ಜೈಗಿಷವ್ಯನ ಗುಹೆಯನ್ನು ಯೋಗಾಭ್ಯಾಸಕ್ಕಾಗಿ ಹೊಂದಬೇಕು.

೫೪–೫೬. ಇಲ್ಲಿ ನನ್ನನ್ನು ಯಾವಾಗಲೂ ಧ್ಯಾನಮಾಡುತ್ತಾ, ಇರುವ ಯೋಗಿಗಳ ಯೋಗವೆಂಬ ಅಗ್ನಿಯು ಚೆನ್ನಾಗಿ ಜ್ವಲಿಸುತ್ತದೆ.

**ಅವ್ಯಕ್ತಲಿಂಗೈ ರ್ಮುನಿಭಿಃ ಸರ್ವಸಿದ್ಧಾಂತ ವೇದಿಭಿಃ ।**
**ಇಹ ಸಂಪ್ರಾಪ್ಯತೇ ಮೋಕ್ಷೋ ದುರ್ಲಭೋಽನ್ಯತ್ರ ಕರ್ಹಿಚಿತ್ ॥**
**ತೇಭ್ಯ ಶ್ಚಾಹಂ ಪ್ರವಕ್ಷ್ಯಾಮಿ ಯೋಗೈಶ್ವರ್ಯ ಮನುತ್ತಮಂ ।**
**ಆತ್ಮನಶ್ಚೈವ ಸಾಯುಜ್ಯ ಮೀಪ್ಸಿತಂ ಸ್ಥಾನಮೇವ ಚ ॥೫೬॥**
**ಕುಬೇರೋಽತ್ರ ಮಮ ಕ್ಷೇತ್ರೇ ಮಯಿ ಸರ್ವಾಽರ್ಪಿತಕ್ರಿಯಃ ॥**
**ಕ್ಷೇತ್ರ ಸಂಸೇವನಾದೇವ ಗಣೇಶತ್ವ ಮವಾಪ ಹ ॥೫೭॥**
**ಸಂವರ್ತೋ ಭವಿತಾ ಯಶ್ಚ ಸೋಽಪಿ ಭಕ್ತೋ ಮಮೈವ ತು ।**
**ಇಹೈವಾಽರಾಧ್ಯ ಮಾಂ ದೇವಿ ಸಿದ್ಧಿಂ ಯಾಸ್ಯತ್ಯನುತ್ತಮಾಂ ॥೫೮॥**
**ಪರಾಶರಸುತೋ ಯೋಗೀ ಋಷಿ ರ್ವ್ಯಾಸೋ ಮಹಾತಪಾಃ ।**
**ಮಮ ಭಕ್ತೋ ಭವಿಷ್ಯಶ್ಚ ವೇದಸಂಸ್ಥಾ ಪ್ರವರ್ತಕಃ ॥೫೯॥**

---

ಇಂಥಾವರು ದೇವತೆಗಳಿಗೂ ಸಿಕ್ಕದಿರುವ ಶ್ರೇಷ್ಠವಾದ ಮೋಕ್ಷವನ್ನು ಪಡೆಯುತ್ತಾರೆ. ರಹಸ್ಯವಾಗಿ ಲಿಂಗವನ್ನು ಪೂಜಿಸುತ್ತಿರುವ, ಎಲ್ಲಾ ಶಾಸ್ತ್ರ ಸಿದ್ಧಾಂತಗಳನ್ನೂ ತಿಳಿದಿರುವ, ಋಷಿಗಳು ಇಲ್ಲಿ ಮೋಕ್ಷವನ್ನು ಪಡೆಯುತ್ತಾರೆ. ಇನ್ನೆಲ್ಲಿಯೂ ಇಷ್ಟು ಬೇಗನೆಯೂ ಸುಲಭವಾಗಿಯೂ ಪಡೆಯಲಾಗುವುದಿಲ್ಲ. ಅವರಿಗೆ ಶ್ರೇಷ್ಠವಾದ ಯೋಗವೆಂಬ ಸಂಪತ್ತೂ, ಆತ್ಮನೊಂದಿಗೆ ಐಕ್ಯವೂ, ಬಯಸಿದ ಸದ್ಗತಿಯೂ, ದೊರೆಯುತ್ತದೆಂದು ನಾನು ಖಂಡಿತವಾಗಿ ಹೇಳುವೆನು.

೫೭–೫೯. ಈ ನನ್ನ ಕ್ಷೇತ್ರದಲ್ಲಿ ಕುಬೇರನೂ ಕೂಡ, ನನಗೆ ಸಮರ್ಪಿಸಿದ ಎಲ್ಲಾ ಕೆಲಸಗಳುಳ್ಳವನಾಗಿ, ವಾಸಮಾಡೋಣದರಿಂದಲೇ ಗಣಾಧಿಪತ್ಯದ ಸ್ಥಾನವನ್ನು ಪೊಂದಿದನು. ಸಂವರ್ತನೆಂಬ ಋಷಿಯೂ ನನ್ನಲ್ಲಿ ವಿಶೇಷವಾಗಿ ಭಕ್ತಿಯುಳ್ಳವನಾಗಿ ಈ ಕ್ಷೇತ್ರದಲ್ಲಿ ತಪಸ್ಸನ್ನು ಮಾಡಿ, ಎಲೌ ಪಾರ್ವತೀದೇವಿಯೇ, ಆತಪಃಪೂಜಾಫಲವಾಗಿ, ಈ ಕ್ಷೇತ್ರದಲ್ಲಿ ಪೂಜಿಸಿ, ಶ್ರೇಷ್ಠವಾದ ಸಿದ್ಧಿಯನ್ನು ಹೊಂದುವುದರಲ್ಲಿ ಸಂದೇಹವಿಲ್ಲ. **ಮಹಾ ತಪಸ್ವಿಯೂ,** ಪರಾಶರನ ಮಗನೂ, ಮಹಾಯೋಗಿಯೂ, ಆದ

ರಂಸ್ಯತೇ ಸೋಽಪಿ ಪದ್ಮಾಕ್ಷಿ ಕ್ಷೇತ್ರೇಽಸ್ಮಿನ್ ಮುನಿಪುಂಗವಃ ।
ಬ್ರಹ್ಮಾ ದೇವರ್ಷಿಭಿಃ ಸಾರ್ಧಂ ವಿಷ್ಣು ರ್ನಾಽಪಿ ದಿವಾಕರಃ ॥೬೦॥
ದೇವರಾಜ ಸ್ತಥಾ ಶಕ್ರೋ ಯೇಽಪಿ ಚಾಽನ್ಯೇ ದಿವೌಕಸಃ ।
ಉಪಾಸತೇ ಮಹಾತ್ಮಾನಃ ಸರ್ವೇ ಮಾಮಿಹ ಸುವ್ರತೇ ॥೬೧॥
ಅನ್ಯೇಽಪಿ ಯೋಗಿನೋ ದಿವ್ಯಾ ಶ್ಛನ್ನರೂಪಾ ಮಹಾತ್ಮನಃ ।
ಅನನ್ಯ ಮನಸೋ ಭೂತ್ವಾ ಮಾಮಿಹೋಪಾಸತೇ ಸದಾ ॥೬೨॥
ವಿಷಯಾಽಸಕ್ತಚಿತ್ತೋಽಪಿ ತ್ಯಕ್ತಧರ್ಮರತಿ ರ್ನರಃ ।
ಇಹ ಕ್ಷೇತ್ರೇ ಮೃತಃ ಸೋಽಪಿ ಸಂಸಾರೇ ನ ಪುನರ್ಭವೇತ್ ॥೬೩॥
ಯೇ ಪುನರ್ನಿರ್ಮಮಾ ಧೀರಾಃ ಸತ್ವಸ್ಥಾ ವಿಜಿತೇಂದ್ರಿಯಾಃ ।
ವ್ರತಿನ ಶ್ಚ ನಿರಾರಂಭಾಃ ಸರ್ವೇ ತೇ ಮಯಿ ಭಾವಿತಾಃ ॥೬೪॥

---

ವ್ಯಾಸಮಹರ್ಷಿಯು, ವೇದಗಳ ಅರ್ಥವನ್ನು ನಿರ್ಧರಿಸಿ ವ್ಯವಸ್ಥೆಯನ್ನು ಮಾಡುವುದಕ್ಕಾಗಿ ಮತ್ತು ವೇದಾಂತ ಶಾಸ್ತ್ರದ ಪ್ರಚಾರವನ್ನು ಮುಂದುವರಿಯಿಸಲೂ, ಜನ್ಮವನ್ನುತಾಳಿ ನನ್ನ ಭಕ್ತನೇ ಆಗುವನು.

೬೦–೬೨. ಎಲೌ ಕಮಲದಂತೆ ಕಣ್ಣುಳ್ಳ ಪಾರ್ವತಿಯೇ, ಈ ಕ್ಷೇತ್ರದಲ್ಲಿ ಋಷಿಗಳಲ್ಲಿ ಶ್ರೇಷ್ಠನಾದ ವ್ಯಾಸಮಹರ್ಷಿಯು ನನ್ನ ಸೇವೆಯನ್ನು ಮಾಡುತ್ತಾ ಆನಂದದಿಂದಿರುವನು. ದೇವತೆಗಳೂ ಮತ್ತು ಋಷಿಗಳೊಡನೆ ಬ್ರಹ್ಮನೂ, ವಿಷ್ಣುವೂ ಮತ್ತು ಸೂರ್ಯನೂ, ದೇವತೆಗಳಿಗೆ ದೊರೆಯಾದ ಇಂದ್ರನೂ ಮತ್ತು ಇತರ ದೇವತೆಗಳೂ ಹಾಗೆಯೇ ಇತರ ದೇವರ್ಷಿಗಳಾದ ಮಹಾತ್ಮರೂ, ಎಲ್ಲರೂ ನನ್ನನ್ನು ಇಲ್ಲಿ ಸೇವಿಸುತ್ತಾರೆ. ಇತರ ಶ್ರೇಷ್ಠರಾದ ಯೋಗಿಗಳೂ, ಆಡಂಬರವಿಲ್ಲದವರಾಗಿ ಹೊರಗೆ ತೋರಿಸದ, ತಮ್ಮ ಅಪರಿಮಿತ ಶಕ್ತಿಯುಳ್ಳವರಾದ ಮಹಾತ್ಮರೂ, ನನ್ನಲ್ಲೇ ನೆಟ್ಟಮನಸ್ಸುಳ್ಳವರಾಗಿ, ನನ್ನನ್ನು ಯಾವಾಗಲೂ ಇಲ್ಲಿ ಸೇವಿಸುತ್ತಾರೆ.

೬೩–೬೫. ಧರ್ಮನಿಯಮಗಳನ್ನು ಪಾಲಿಸುವ ಪಾರ್ವತೀದೇವಿಯೇ, ಪ್ರಾಪಂಚಿಕವಾದ ಸುಖಗಳಲ್ಲೇ ಆಸಕ್ತಿಯುಳ್ಳವನಾಗಿ ಧರ್ಮಮಾರ್ಗ

**ದೇವದೇವಂ ಸಮಾಸಾದ್ಯ ಧೀಮಂತಃ ಸಂಗವರ್ಜಿತಾಃ ।**
**ಗತಾ ಇಹ ಪರಂ ಮೋಕ್ಷಂ ಪ್ರಸಾದಾನ್ಮಮ ಸುವ್ರತೇ ॥೬೫॥**

**ಜನ್ಮಾಂತರ ಸಹಸ್ರೇಷು ಯನ್ನ ಯೋಗೀ ಸಮಾಪ್ನುಯಾತ್ ।**
**ತಮಿಹೈವ ಪರಂ ಮೋಕ್ಷಂ ಪ್ರಸಾದಾನ್ಮಮ ಸುವ್ರತೇ ॥೬೬॥**

**ಗೋಪ್ರೇಕ್ಷಕ ಮಿದಂ ಕ್ಷೇತ್ರಂ ಬ್ರಹ್ಮಣಾ ಸ್ಥಾಪಿತಂ ಪುರಾ ।**
**ಕೈಲಾಸ ಭವನಂ ಚಾಽತ್ರ ಪಶ್ಯ ದಿವ್ಯಂ ವರಾನನೇ ॥೬೭॥**

**ಗೋಪ್ರೇಕ್ಷಕ ಮಥಾಽಗಮ್ಯ ದೃಷ್ಟ್ವಾ ಮಾಮತ್ರ ಮಾನವಃ ।**
**ನ ದುರ್ಗತಿ ಮವಾಪ್ನೋತಿ ಕಲ್ಮಷೈಶ್ಚ ವಿಮುಚ್ಯತೇ ॥೬೮॥**

---

ದಲ್ಲಿ ಆಸಕ್ತಿ ಇಲ್ಲದಿರುವ ಮನುಷ್ಯನೂ ಕೂಡ, ಈ ಕ್ಷೇತ್ರದಲ್ಲಿ ಮರಣಹೊಂದಿದರೆ, ಪುನಃ ಸಂಸಾರವನ್ನು ಪಡೆಯದೇ ಮೋಕ್ಷವನ್ನು ಹೊಂದುವನು. ಹೀಗಿರುವಾಗ ಸಂಸಾರದಲ್ಲಿ ಆಸಕ್ತಿಯಿಲ್ಲದಿರುವ, ಧೀರರಾದ ಸಾತ್ವಿಕರಾದ, ಇಂದ್ರಿಯಗಳನ್ನು ಜಯಿಸಿರುವ, ಕರ್ಮಮಾರ್ಗಗಳನ್ನು ಅವಲಂಬಿಸದೆ, ಸಂನ್ಯಾಸ ಧರ್ಮದಲ್ಲಿ ನಿಷ್ಠರಾಗಿರುವ, ನನ್ನಲ್ಲೇ ನಟ್ಟ ಮನಸ್ಸುಳ್ಳ, ಬುದ್ಧಿವಂತರೂ, ಸಂಸಾರದಲ್ಲಿ ಅಹಂತಾ, ಮಮತಾ ರೂಪವಾದ ಅಭಿಮಾನದ ಸಂಬಂಧವನ್ನು ಬಿಟ್ಟಿರುವವರೂ ಆದ ಸತ್ಪುರುಷರು ನನ್ನನ್ನು ಆರಾಧಿಸಿ, ನನ್ನ ಪ್ರಸಾದದಿಂದ ಮೋಕ್ಷವನ್ನು ಪಡೆಯುವರೆಂಬುದರಲ್ಲಿ ಸಂದೇಹವೇ ಇಲ್ಲ. ಹಾಗೆಯೇ ಅನೇಕರು ಮುಕ್ತರೂ ಆಗಿರುತ್ತಾರೆ.

೬೬–೬೮. ಎಲೌ ಒಳ್ಳೆಯ ನಿಯಮ ನಡತೆಯುಳ್ಳ ಪಾರ್ವತಿಯೇ, ಯೋಗಿಯೂ ಬೇರೆ ಬೇರೇ ಸಾವಿರಾರು ಜನ್ಮಗಳಲ್ಲಿ ಸಂಪಾದಿಸಲು ಅಸಾಧ್ಯವಾದ ಮೋಕ್ಷವೂ ಇಲ್ಲಿ ನನ್ನ ಅನುಗ್ರಹದಿಂದ ಒಂದೇ ಜನ್ಮದಲ್ಲಿ ದೊರೆಯುತ್ತದೆ. ಎಲೌ ಮಂಗಳಾಂಗಿಯೇ, ದಿವ್ಯವಾದ ಕೈಲಾಸ ಭವನವೆಂಬ ಮಂದಿರವೂ, ಗೋಪ್ರೇಕ್ಷಕ, ಎಂಬ ಕ್ಷೇತ್ರವೂ ಹಿಂದೆ ಬ್ರಹ್ಮನಿಂದಲೇ ನಿರ್ಮಿಸಲ್ಪಟ್ಟವು. ಈ ಗೋಪ್ರೇಕ್ಷಕ, ಎಂಬ ಕ್ಷೇತ್ರಕ್ಕೆ ಮನುಷ್ಯನು ಬಂದು, ನನ್ನ ದರ್ಶನವನ್ನು ಪಡೆದು ಸದ್ಗತಿಯನ್ನು ಹೊಂದುವುದಲ್ಲದೆ, ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

ಕಪಿಲಾ ಹ್ರದ ಮಿತ್ಯೈವಂ ತಥಾ ವೈ ಬ್ರಹ್ಮಣಾ ಕೃತಂ ।
ಗವಾಂ ಸ್ತನ್ಯಜತೋಯೇನ ತೀರ್ಥಂ ಪುಣ್ಯತಮಂ ಮಹತ್ ॥೬೯॥

ಅತ್ರಾಽಪಿ ಸ್ವಯಮೇವಾಽಹಂ ವೃಷಧ್ವಜ ಇತಿ ಸ್ಮೃತಃ ।
ಸಾನ್ನಿಧ್ಯಂ ಕೃತವಾ ನ್ದೇವಿ ಸದಾಽಹಂ ದೃಶ್ಯತೇ ತ್ವಯಾ ॥೭೦॥

ಭದ್ರತೋಯಂ ಚ ಪಶ್ಯೇಹ ಬ್ರಹ್ಮಣಾ ಚ ಕೃತಂ ಹ್ರದಂ ।
ಸರ್ವೈ ರ್ದೇವೈ ರಹಂ ದೇವಿ ಅಸ್ಮಿನ್ದೇಶೇ ಪ್ರಸಾದಿತಃ ॥೭೧॥

ಗಚ್ಛೋಪಶಮ ಮೀಶೇತಿ ಉಪಶಾಂತಃ ಶಿವಸ್ತಥಾ ।
ಅತ್ರಾಽಹಂ ಬ್ರಹ್ಮಣಾಽನೀಯ ಸ್ಥಾಪಿತಃ ಪರಮೇಷ್ಠಿನಾ ॥೭೨॥

ಬ್ರಹ್ಮಣಾ ಚಾಽಪಿ ಸಂಗೃಹ್ಯ ವಿಷ್ಣುನಾ ಸ್ಥಾಪಿತಃ ಪುನಃ ।
ಬ್ರಹ್ಮಣಾಽಪಿ ತತೋ ವಿಷ್ಣುಃಪ್ರೋಕ್ತಃ ಸಂವಿಗ್ನಚೇತಸಾ ॥೭೩॥

---

೬೯-೭೧. ಕಪಿಲಾಹ್ರದ, ಎಂಬ ಕೊಳವೂ, ಬ್ರಹ್ಮನಿಂದಲೇ ಸ್ಥಾಪಿಸಲ್ಪಟ್ಟಿತು. ಹಸುಗಳ ಹಾಲೇ ನೀರಾಗಿ ಉಳ್ಳ, ಹಸುವಿನ ಹಾಲಿನಿಂದ ಉಂಟಾದ ನೀರುಳ್ಳ, ಈ ಕೊಳವು ಬಹಳ ಪುಣ್ಯಕರವಾದುದು. ಇಲ್ಲಿಯೂ ನಾನೇ, ಧರ್ಮವೇ ಬಾವುಟವಾಗುಳ್ಳ, ವೃಷಭವೇ ಧ್ವಜದಲ್ಲಿ ಗುರುತಾಗಿ ಉಳ್ಳ, ಎಂಬ ಅರ್ಥವುಳ್ಳ, ವೃಷಧ್ವಜ, ಎಂಬ ಹೆಸರಿನಿಂದ ಕರೆಯಲ್ಪಡುತ್ತಾ ಈ ಕ್ಷೇತ್ರದಲ್ಲಿ ವಾಸವಾಗಿದೇನೆ. ಅಲ್ಲದೇ ಬ್ರಹ್ಮನಿಂದಲೇ ನಿರ್ಮಿಸಲ್ಪಟ್ಟ ಮಂಗಳಕರವಾದ ತೀರ್ಥವುಳ್ಳ, ಭದ್ರತೋಯ, ಎಂಬ ಈ ಮತ್ತೊಂದು ಸರೋವರವನ್ನೂ ನೋಡು. ಎಲೌ ದೇವಿಯೇ, ಎಲ್ಲಾ ದೇವತೆಗಳೂ ಈ ಪ್ರದೇಶದಲ್ಲಿ ನನ್ನನ್ನೇ ಆರಾಧಿಸಿ ಒಲಿಸಿಕೊಂಡರು. ಆದರಿಂದ ನನ್ನ ಭಕ್ತರನ್ನು ಅನುಗ್ರಹಿಸುತ್ತಾ ನಾನು ಇಲ್ಲಿ ನೆಲೆಸಿ ಇದ್ದೇನೆ

೭೨-೭೪. ಓ ಸ್ವಾಮಿಯಾದ ಶಿವನೇ, ನಮ್ಮ ವಿಷಯದಲ್ಲಿ ಶಾಂತಿಯನ್ನು ಹೊಂದಿ ಅನುಗ್ರಹಿಸು, ಎಂದು ಬ್ರಹ್ಮನು ಪ್ರಾರ್ಥನೆ ಮಾಡಲಾಗಿ, ಶಿವನಾದ ನಾನು ಉಪಶಾಂತಿಯನ್ನು ತೋರಿಸಿದೆನು. ಹೀಗೆ ಬ್ರಹ್ಮನಿಂದ ನನ್ನ ಉಪಾಸನೆಯಲ್ಲಿ ಪ್ರತೀಕದ ಸ್ವರೂಪವಾದ ಲಿಂಗವು ಇಲ್ಲಿಗೆ ತರಲ್ಪಟ್ಟು ಪ್ರತಿಷ್ಠಾ ಕ್ರಮದಿಂದ ಸ್ಥಾಪಿಸಲ್ಪಟ್ಟಿದೆ.

ಮಯಾಽಽನೀತ ಮಿದಂ ಲಿಂಗಂ ಕಸ್ಮಾತ್ತಾಸ್ಥಪಿತ ವಾನಸಿ ।
ತಮುವಾಚ ಪುನರ್ವಿಷ್ಣು ಬ್ರಹ್ಮಾಣಂ ಕುಪಿಶಾಽನನಂ ॥೭೪॥
ರುದ್ರೇ ದೇವೇ ಮಯಾಽತ್ಯಂತಂ ಪರಾಭಕ್ತಿ ರ್ಮಹತ್ತರಾ ।
ಮಯ್ಯೈವ ಸ್ಥಾಪಿತಂ ಲಿಂಗಂ ತವ ನಾಮ್ನಾ ಭವಿಷ್ಯತಿ ॥೭೫॥
ಹಿರಣ್ಯಗರ್ಭ ಇತ್ಯೇವಂ ತತೋಽತ್ರಾಽಹಂ ಸಮಾಸ್ಥಿತಃ ।
ದೃಷ್ಟ್ವೈನ ಮಪಿ ದೇವೇಶಂ ಮಮ ಲೋಕಂ ವ್ರಜೇನ್ನರಃ ॥೭೬॥
ತತಃ ಪುನರಪಿ ಬ್ರಹ್ಮಾ ಮಮ ಲಿಂಗ ಮಿದಂ ಶುಭಂ ।
ಸ್ಥಾಪಯಾಮಾಸ ವಿಧಿವದ್ಭಕ್ತ್ಯಾ ಪರಮಯಾ ಯುತಃ ॥೭೭॥

---

ಬ್ರಹ್ಮನಿಂದ ವಿಷ್ಣುವು ಇದನ್ನು ತೆಗೆದುಕೊಂಡು, ಅವನಿಂದಲೂ ಇದು ಸ್ಥಾಪಿಸಲ್ಪಟ್ಟಿತು. ಬ್ರಹ್ಮನು ಕೋಪವಿಷಾದದಿಂದ ಕೂಡಿದಮನುಸ್ಸುಳ್ಳವನಾಗಿ ವಿಷ್ಣುವನ್ನು ಕುರಿತು ಹೀಗೆಂದನು, ನಾನು ತಂದ ಲಿಂಗವನ್ನು ನೀನು ಸ್ಥಾಪಿಸುವುದು ಹೇಗೆ ಯುಕ್ತವು? ಆಗ ಕೋಪಗೊಂಡ ಬ್ರಹ್ಮನನ್ನು ಕುರಿತು ವಿಷ್ಣುವು ಹೀಗೆ ಹೇಳಿದನು.

೭೫-೭೭. ತೇಜಸ್ಸಿನಿಂದ ಬೆಳಗುತ್ತಿರುವ ದೇವನಾದ ಶಿವನಲ್ಲಿ ನನಗೆ ಬಹಳ ಹೆಚ್ಚಾಗಿ ಅತ್ಯುತ್ಕೃಷ್ಟವಾದ ಭಕ್ತಿಯಿದೆ. ಆದ್ದರಿಂದಲೇ ನಾನೇ ಈ ಲಿಂಗವನ್ನು ಸ್ಥಾಪಿಸಿದೆನು. ಆದರೆ ಇದಕ್ಕೆ ನಿನ್ನ ಹೆಸರೇ ಬರಲಿ ಎಂದನು. ಆದ್ದರಿಂದ "ಹಿರಣ್ಯಗರ್ಭ" ಎಂಬ ಹೆಸರಿನಿಂದ ನಾನೇ ಇಲ್ಲಿದ್ದೇನೆ. ಮನುಷ್ಯನು ಈ ಲಿಂಗವನ್ನು ದರ್ಶನಮಾಡಿದ ಮಾತ್ರದಿಂದಲೇ ನನ್ನ ಲೋಕವನ್ನು ಸೇರುವನು. ಅನಂತರದಲ್ಲಿ ತಿರುಗಿಯೂ, ಮಂಗಳಕರವಾದ ನನ್ನ ಈ ಲಿಂಗವನ್ನು ಶಾಸ್ತ್ರೋಕ್ತಕ್ರಮದಲ್ಲಿ ಅವನೂ ಬಹಳ ಭಕ್ತಿಯಿಂದ ಸ್ಥಾಪನೆ ಮಾಡಿದನು. ಹೀಗೆ ಈ ಹಿರಣ್ಯಗರ್ಭ ಲಿಂಗವು ಬ್ರಹ್ಮಾ, ವಿಷ್ಣು, ಈ ಇಬ್ಬರಿಂದಲೂ ಪ್ರತಿಷ್ಠಾಕ್ರಮದಿಂದ ಸ್ಥಾಪಿಸಲ್ಪಟ್ಟಿರುವುದರಿಂದ ಇದು ತುಂಬ ಶ್ರೇಯಸ್ಕರವಾದುದು. ಎಂದು ಭಾವವು.

ಸ್ವರ್ಲೀನೇಶ್ವರ ಇತ್ಯೇವ ಮತ್ರಾऽಹಂ ಸ್ವಯಮಾಗತಃ ।
ಪ್ರಾಣಾನಿಹ ನರಸ್ತ್ಯಕ್ತ್ವಾ ನ ಪುನರ್ಜಾಯತೇ ಕ್ವಚಿತ್ ॥೭೮॥
ಅನನ್ಯಾ ಸಾ ಗತಿ ಸ್ತಸ್ಯ ಯೋಗಿನಾಂ ಚೈವ ಯಾ ಸ್ಮೃತಾ ।
ಅಸ್ಮಿನ್ನಪಿ ಮಯಾ ದೇಶೇ ದೈತ್ಯೋ ದೈವತ ಕಂಟಕಃ ॥೭೯॥
ವ್ಯಾಘ್ರರೂಪಂ ಸಮಾಸ್ಥಾಯ ನಿಹತೋ ದರ್ಪಿತೋ ಬಲೀ ।
ವ್ಯಾಘ್ರೇಶ್ವರ ಇತಿಖ್ಯಾತೋ ನಿತ್ಯಮತ್ರಾऽಹ ಮಾಸ್ಥಿತಃ ॥೮೦॥
ನ ಪುನ ರ್ದುರ್ಗತಿಂ ಯಾತಿ ದೃಷ್ಟ್ವೈನಂ ವ್ಯಾಘ್ರಮೀಶ್ವರಂ ।
ಉತ್ಪಲೋ ವಿದಲ ಶ್ಚೈವ ಯೌ ದೈತ್ಯೌ ಬ್ರಹ್ಮಣಾ ಪುರಾ ॥೮೧॥
ಸ್ತ್ರೀವಧ್ಯೌ ದರ್ಪಿತೌ ದೃಷ್ಟ್ವಾ ತ್ವಯೈವ ನಿಹತೌ ರಣೇ ।
ಸಾವಜ್ಞಂ ಕಂದುಕೇನಾऽತ್ರ ತಸ್ಯೇದಂ ದೇಹಮಾಸ್ಥಿತಂ ॥೮೨॥

---

೭೮-೮೦. ಇಲ್ಲಿರುವ ನನಗೆ "ಸ್ವರ್ಲೀನೇಶ್ವರ" ಎಂದು ಹೆಸರು. ಇಲ್ಲಿ ಮನುಷ್ಯನು ಪ್ರಾಣಗಳನ್ನು ಬಿಟ್ಟರೆ ಅವನಿಗೆ ಪುನರ್ಜನ್ಮವಿಲ್ಲ. ಯೋಗಿಗಳಿಗೂ, ಸದ್ಗತಿಯಾಗುವುದು. ಇಂಥಾ ಕ್ಷೇತ್ರದಲ್ಲಿಯೂ, ದೇವತೆಗಳಿಗೆ ತೊಂದರೆಯನ್ನುಂಟುಮಾಡುವ ರಾಕ್ಷಸನೊಬ್ಬನು ಹಾವಳಿಯನ್ನು ಮಾಡುತ್ತಿದ್ದನು. ಆಗ ಧರ್ಮರಕ್ಷಕನಾಗಿ ಈಶ್ವರನಾದ ನಾನೇ ಹುಲಿಯರೂಪವನ್ನು ತೆಗೆದುಕೊಂಡು ಬಲಿಷ್ಠನೂ, ಕೊಬ್ಬಿದವನೂ ಆದ ಆ ರಾಕ್ಷಸನನ್ನು ಕೊಂದುಹಾಕಿದೆನು. ಆದ್ದರಿಂದ "ವ್ಯಾಘ್ರೇಶ್ವರ" ಎಂಬ ಹೆಸರನ್ನು ಪಡೆದು ನಾನು ಯಾವಾಗಲೂ ಇಲ್ಲಿ ವಾಸವಾಗಿದ್ದೇನೆ.

೮೧-೮೨. ಮನುಷ್ಯನು ವ್ಯಾಘ್ರೇಶ್ವರನನ್ನು ದರ್ಶನಮಾಡಿ, ಪುನಃ ದುರ್ಗತಿಯನ್ನು ಹೊಂದುವುದೇ ಇಲ್ಲ. ಇಲ್ಲಿ ಉತ್ಪಲ, ವಿದಲ, ಎಂಬ ಇಬ್ಬರು ರಾಕ್ಷಸರು ಬ್ರಹ್ಮನಿಂದ ವರವನ್ನು ಪಡೆದು ಕೊಬ್ಬಿ ಮೆರೆಯುತ್ತಿದ್ದರು. ಆದರೆ ಅವರು ಸ್ತ್ರೀಯರಿಂದಲೇ ಕೊಲ್ಲಲ್ಪಡಬಹುದಾಗಿದ್ದರು. ಇದನ್ನು ತಿಳಿದು ನೀನೇ ಬಂದು ಯುದ್ಧದಲ್ಲಿ ಅವರನ್ನು ತಿರಸ್ಕಾರದಿಂದ ಒಂದು ಚಂಡಿನಿಂದಲೇ ಕೊಂದು ಹಾಕಿದೆ. ಆ ಚಂಡಿನಿಂದ ಕೊಲ್ಲಲ್ಪಟ್ಟ ದೇಹವೂ ಇಲ್ಲಿ ಸ್ಥಾಪಿಸಲ್ಪಟ್ಟಿದೆ.

ಆದಾವತ್ರಾಽಹ ಮಾಗತ್ಯ ಪ್ರಸ್ಥಿತೋ ಗಣ ಪೈ ಸ್ಸಹ ।
ಜೇಷ್ಠಸ್ಥಾನ ಮಿದಂ ತಸ್ಮಾ ದೇತನ್ಮೇ ಪುಣ್ಯ ದರ್ಶನಂ ॥೮೩॥
ದೇವೈ ಸ್ಸಮಂತಾ ದೇತಾನಿ ಲಿಂಗಾನಿ ಸ್ಥಾಪಿತಾ ನ್ಯತಃ ।
ದೃಷ್ಟ್ವಾಽಪಿ ನಿಯತೋ ಮರ್ತ್ಯೋ ದೇಹಭೇದೇ ಗಣೋ ಭವೇತ್
ಪಿತ್ರಾ ತೇ ಶೈಲ ರಾಜೇನ ಪುರಾ ಹಿಮವತಾ ಸ್ವಯಂ ।
ಮಮ ಪ್ರಿಯ ಹಿತಂ ಸ್ಥಾನಂ ಜ್ಞಾತ್ವಾ ಲಿಂಗಂ ಪ್ರತಿಷ್ಠಿತಂ ॥೮೫॥
ಶೈಲೇಶ್ವರ ಮಿತಿಖ್ಯಾತಂ ದೃಶ್ಯತಾ ಮಿಹ ಚಾದರಾತ್ ।
ದೃಷ್ಟ್ವೈತ ನ್ಮನುಜೋ ದೇವಿ ನ ದುರ್ಗತಿ ಮತೋ ವ್ರಜೇತ್ ॥
ನದ್ಯೇಷಾ ವರುಣಾ ದೇವಿ ಪುಣ್ಯಾ ಪಾಪ ಪ್ರಮೋಚಿನೀ ।
ಕ್ಷೇತ್ರ ಮೇತ ದಲಂಕೃತ್ಯ ಜಾಹ್ನವ್ಯಾ ಸಹ ಸಂಗತಾ ॥೮೭॥

---

೮೩–೮೫. ನಾನು ಮೊದಲು ಬಂದು ನೆಲೆಸಿ ಅನಂತರದಲ್ಲಿ ಗಣಪತಿಗಳೊಡನೆ ಹೊರಟೆನು. ಆದ್ದರಿಂದ ಶ್ರೇಷ್ಠವಾದ ಸ್ಥಾನವಾದ ಈ ಪ್ರದೇಶವು ಬಹಳ ಪುಣ್ಯಕರವಾದುದಾಗಿದೆ. ಈ ಲಿಂಗಗಳು ದೇವತಗಳಿಂದಲೇ ಸ್ಥಾಪಿಸಲ್ಪಟ್ಟಿರುವುದರಿಂದ ಇದನ್ನು ನಿಯಮ ಪೂರ್ವಕನಾಗಿ ದರ್ಶನ ಮಾಡಿದ ಮನುಷ್ಯನು ಕೊನೆಯಲ್ಲಿ ಮರಣ ಹೊಂದಿದಾಗ ಗಣಗಳಲ್ಲೊಬ್ಬನಾಗುವನು. ಹಿಂದೆ ನಿನ್ನ ತಂದೆಯಾದ ಹಿಮವಂತನಿಂದಲೇ ನನ್ನ ಇಷ್ಟವಾದ ಈ ಪ್ರದೇಶದಲ್ಲಿ ಲಿಂಗವು ಸ್ಥಾಪಿಸಲ್ಪಟ್ಟಿತು.

೮೬–೮೮. ಹೀಗೆ ಹಿಮವಂತನಿಂದ ಸ್ಥಾಪಿಸಲ್ಪಟ್ಟಿರುವ ಶೈಲೇಶ್ವರ, ಎಂದು ಪ್ರಸಿದ್ಧವಾದ ಈ ಕ್ಷೇತ್ರವನ್ನು ಪ್ರೀತಿಯಿಂದ ನೋಡು. ಆದ್ದರಿಂದ ಇದನ್ನು ದರ್ಶನಮಾಡಿದ ಮನುಷ್ಯನು ದುರ್ಗತಿಯನ್ನು ಹೊಂದುವುದೇ ಇಲ್ಲ. ಎಲೌ ದೇವಿಯೇ, ವರುಣಾ, ಎಂಬ ನದಿಯು ಬಹಳ ಪುಣ್ಯವನ್ನು ಕೊಡುವವಳಾಗಿಯೂ, ಎಲ್ಲಾ ಪಾಪವನ್ನೂ ಹೋಗಲಾಡಿಸುವವಳಾಗಿಯೂ, ಈ ಕ್ಷೇತ್ರದಲ್ಲಿ ಭೂಷಣವಾಗಿದ್ದು, ಗಂಗಾನದಿಯೊಂದಿಗೆ ಸೇರಿದ್ದಾಳೆ. ಈ ಎರಡು ನದಿಗಳ ಸಂಗಮದಲ್ಲಿ ಶ್ರೇಷ್ಠ

ಸ್ಥಾಪಿತಂ ಬ್ರಹ್ಮಣಾ ಚಾಽಪಿ ಸಂಗಮೇ ಲಿಂಗಮುತ್ತಮಂ ।
ಸಂಗಮೇಶ್ವರ ಮಿತ್ಯೇವಂ ಖ್ಯಾತಂ ಜಗತಿ ದೃಶ್ಯತಾಂ ॥೮೮॥

ಸಂಗಮೇ ದೇವ ನದ್ಯಾ ಹಿ ಯಃ ಸ್ನಾತ್ವಾ ಮನುಜಃ ಶುಚಿಃ ।
ಅರ್ಚಯೇ ತ್ಸಂಗಮೇ ಶಾನಂ ತಸ್ಯ ಜನ್ಮ ಭಯಂ ಕುತಃ ॥೮೯॥

ಇದಂ ಮನ್ಯೇ ಮಹಾಕ್ಷೇತ್ರಂ ನಿವಾಸೋ ಯೋಗಿನಾಂ ಪರಂ ।
ಕ್ಷೇತ್ರ ಮಧ್ಯೇ ಚ ಯತ್ರಾಹಂ ಸ್ವಯಂ ಭೂತ್ವಾಽಗ್ರ ಮಾಸ್ಥಿತಃ ॥
ಮಧ್ಯಮೇಶ್ವರ ಇತ್ಯೇವಂ ಖ್ಯಾತಃ ಸರ್ವ ಸುರಾಽಸುರೈಃ ।
ಸಿದ್ಧಾನಾಂ ಸ್ಥಾನ ಮೇತದ್ಧಿ ಮದೀಯ ವ್ರತ ಧಾರಿಣಾಂ ॥೯೦॥

ಯೋಗಿನಾಂ ಮೋಕ್ಷ ಲಿಪ್ಸೂನಾಂ ಜ್ಞಾನಯೋಗ ರತಾತ್ಮನಾಂ ।
ದೃಷ್ಟ್ವೈನಂ ಮಧ್ಯಮೇಶಾನಂ ಜನ್ಮ ಪ್ರತಿ ನ ಶೋಚತಿ ॥೯೧॥

---

ವಾದ ಲಿಂಗವು ಬ್ರಹ್ಮನಿಂದ ಸ್ಥಾಪಿಸಲ್ಪಟ್ಟು ಪ್ರಪಂಚದಲ್ಲಿ ಸಂಗಮೇಶ್ವರ, ಎಂದು ಪ್ರಸಿದ್ಧವಾಗಿರುವುದನ್ನು ನೋಡು.

೮೯–೯೦. ಯೋಗಿಗಳಿಗೆ ಇದು ವಾಸಕ್ಕೆ ಬಹಳ ಶ್ರೇಷ್ಠವಾದ ಪ್ರದೇಶವೆಂದು ತಿಳಿಯುತ್ತೇನೆ. ಇಲ್ಲಿ ಸಂಗಮೇಶ್ವರ ಲಿಂಗವನ್ನು ಪೂಜಿಸಿದವರಿಗೆ ಪುನಃ ಜನ್ಮಮರಣಗಳ ಭಯವಿಲ್ಲದೆ, ಮೋಕ್ಷವಾಗುತ್ತದೆ. ಈ ಕ್ಷೇತ್ರ ಮಧ್ಯದಲ್ಲಿ ನಾನೇ ಮೇಲ್ಭಾಗದಲ್ಲಿ ಪೀಠವನ್ನು ಹತ್ತಿ ಪ್ರಕಾಶಿಸುತ್ತಿದ್ದೇನೆ. ಎಲ್ಲಾ ದೇವತೆಗಳಿಂದ, ಮತ್ತು ರಾಕ್ಷಸರಿಂದಲೂ, ಮಧ್ಯಮೇಶ್ವರ, ಎಂದು ಪೂಜಿಸಲ್ಪಟ್ಟುಪ್ರಸಿದ್ಧನಾಗಿದ್ದೇನೆ. ನನ್ನ ವ್ರತವನ್ನು ಮಾಡುವ ಸಿದ್ಧರಾದ ಯೋಗಿಗಳಿಗೆ ಇದು ಅತ್ಯುತ್ಕೃಷ್ಟವಾದಸ್ಥಾನವು.

೯೧. ಮೋಕ್ಷವನ್ನು ಬಯಸುವ, ಜ್ಞಾನಯೋಗದಲ್ಲಿ ಆಸಕ್ತಿಯುಳ್ಳ, ಯೋಗಿಗಳಿಗೆ ಈ ಮಧ್ಯಮೇಶ್ವರನ ದರ್ಶನವಾದ ಕೂಡಲೇ ಹುಟ್ಟು ಸಾವುಗಳ ಭಯವೇ ತಪ್ಪಿಹೋಗುವುದು.

ಸ್ಥಾಪಿತಂ ಲಿಂಗಮೇತತ್ತು ಶುಕ್ರೇಣ ಭೃಗುಸೂನುನಾ ।
ನಾಮ್ನಾ ಶುಕ್ರೇಶ್ವರಂ ನಾಮ ಸರ್ವಸಿದ್ಧಾಽಮರಾಽರ್ಚಿತಂ ॥೯೩॥
ದೃಷ್ಟ್ವಾರ್ಚನಂ ನಿಯತಃ ಸದ್ಯೋ ಮುಚ್ಯತೇ ಸರ್ವ ಕಿಲ್ಬಿಷೈಃ ।
ಮೃತಶ್ಚ ನ ಪುನರ್ಜಂತುಃ ಸಂಸಾರೇ ತು ಭವೇನ್ನರಃ ॥೯೪॥
ಪುರಾ ಜಂಬುಕರೂಪೇಣ ಅಸುರೋ ದೇವಕಂಟಕಃ ।
ಬ್ರಹ್ಮಣೋ ಹಿ ವರಂ ಲಬ್ಧ್ವಾ ಗೋಮಾಯು ರ್ಬಂಧ ಶಂಕಿತಃ ॥
ನಿಹತೋ ಹಿಮವತ್ಪುತ್ರಿ ಜಂಬುಕೇಶ ಸ್ತತೋ ಹ್ಯಹಂ ।
ಅದ್ಯಾಪಿ ಜಗತಿ ಖ್ಯಾತಂ ಸುರಾಽಸುರ ನಮಸ್ಕೃತಂ ॥೯೬॥
ದೃಷ್ಟ್ವಾರ್ಚನ ಮಪಿ ದೇವೇಶಂ ಸರ್ವಕಾಮಾನವಾಪ್ನುಯಾತ್ ।
ಗ್ರಹೈಃ ಶುಕ್ರ ಪುರೋಗೈಶ್ಚ ಏತಾನಿ ಸ್ಥಾಪಿತಾನಿ ಹ ॥೯೭॥

---

೯೩–೯೫. ಭೃಗುವಿನ ಮಗನಾದ ಶುಕ್ರನಿಂದ ಈ ಲಿಂಗವು ಸ್ಥಾಪಿಸಲ್ಪಟ್ಟಿತು. ಇದು ಎಲ್ಲಾ ಸಿದ್ಧರೂ ದೇವತೆಗಳೂ, ಇವರಿಂದ ಪೂಜಿಸಲ್ಪಟ್ಟ, ಶುಕ್ರೇಶ್ವರ, ಎಂದು ಪ್ರಸಿದ್ಧವಾದ ಲಿಂಗವಾಗಿದೆ. ನಿಯಮ ಪೂರ್ವಕವಾಗಿ ಇದನ್ನು ಪೂಜಿಸುವ ಮನುಷ್ಯನು ಎಲ್ಲಾ ಪಾಪಗಳಿಂದಲೂ, ಬಿಡುಗಡೆಯನ್ನು ಹೊಂದುತ್ತಾನೆ. ಇವನು ಮರಣ ಹೊಂದಿದಮೇಲೆ ಸಂಸಾರದ ಕಟ್ಟಿಗೆ ಸಿಕ್ಕಿ ಹಾಕಿ ಕೊಳ್ಳುವುದೇ ಇಲ್ಲ. ಹಿಂದೆ ದೇವತೆಗಳನ್ನು ಕಾಡಿಸುತ್ತಿದ್ದ, ಸಿಕ್ಕಿಹಾಕಿ ಕೊಳ್ಳದಿರಬೇಕೆಂದು ನರಿಯರೂಪವನ್ನು ತಾಳಿದ್ದ ರಾಕ್ಷಸನೊಬ್ಬನು ಬ್ರಹ್ಮನಿಂದ ವರವನ್ನು ಪಡೆದು ಇಲ್ಲಿ ವಾಸಮಾಡುತ್ತಿದ್ದನು.

೯೬–೯೮. ಎಲೌ ಹಿಮವಂತನ ಮಗಳಾದ ಪಾರ್ವತಿಯೇ, ನಾನೇ ಈ ರಾಕ್ಷಸನನ್ನು ಕೊಂದು ಜಂಬುಕೇಶ್ವರ ಎಂಬ ಹೆಸರನ್ನು ಪಡೆದೆನು. ಈ ಜಂಬುಕೇಶ ಲಿಂಗವು ದೇವತೆಗಳು, ರಾಕ್ಷಸರು ಇವರೆಲ್ಲರಿಂದಲೂ, ಪೂಜಿಸಲ್ಪಡತಕ್ಕದ್ದಾಗಿ ಜಗತ್ತಿನಲ್ಲಿ ಪ್ರಸಿದ್ಧವಾಗಿದೆ. ಈ ಲಿಂಗವನ್ನು ದರ್ಶನಮಾಡಿದರೂ, ಎಲ್ಲಾ ಇಷ್ಟಾರ್ಥಗಳನ್ನೂ ಹೊಂದಬಹುದು. ಅಲ್ಲದೆ, ಶುಕ್ರನೇ ಮೊದಲಾದ ಗ್ರಹಗಳಿಂದ ಸ್ಥಾಪಿಸಲ್ಪಟ್ಟ

ಪಶ್ಯ ಪುಣ್ಯಾನಿ ಲಿಂಗಾನಿ ಸರ್ವಕಾಮ ಪ್ರದಾನಿ ತು ।
ಏವ ಮೇತಾನಿ ಪುಣ್ಯಾನಿ ಮನ್ನಿವಾಸಾನಿ ಪಾರ್ವತಿ ॥೯೮॥

ಕಥಿತಾನಿ ಮಮಕ್ಷೇತ್ರೇ ಗುಹ್ಯಂ ಚಾಽನ್ಯದಿದಂ ಶೃಣು ।
ಚತುಃ ಕೋಶಂ ಚತುರ್ದಿಕ್ಷು ಕ್ಷೇತ್ರ ಮೇತತ್ಪ್ರಕೀರ್ತಿತಂ ॥೯೯॥

ಯೋಜನಂ ವಿದ್ಧಿ ಚಾರ್ವಂಗಿ ಮೃತ್ಯುಕಾಲೇಽಮೃತ ಪ್ರದಂ ।
ಮಹಾಲಯ ಗಿರಿಸ್ಥಂ ಮಾಂ ಕೇದಾರೇ ಚ ವ್ಯವಸ್ಥಿತಂ ॥೧೦೦॥

ಗಣತ್ವಂ ಲಭತೇ ದೃಷ್ಟ್ವಾ ಹ್ಯಸ್ಮಿ ನ್ಮೋಕ್ಷೋ ಹ್ಯವಾಪ್ಯತೇ ।
ಗಾಣಪತ್ಯಂ ಲಭೇದ್ಯಸ್ಮಾದ್ಯತಃ ಸಾ ಮುಕ್ತಿರುತ್ತಮಾ ॥೧೦೧॥

ತತೋ ಮಹಾಲಯಾ ತ್ತಸ್ಮಾತ್ಕೇದಾರಾ ನ್ಮಧ್ಯಮಾದಪಿ ।
ಸ್ಮೃತಂ ಪುಣ್ಯತಮಂ ಕ್ಷೇತ್ರ ಮವಿಮುಕ್ತಂ ವರಾನನೇ ॥೧೦೨॥

---

ಲಿಂಗಗಳೂ ಇವೆ. ಎಲ್ಲಾ ಇಷ್ಟಾರ್ಥಗಳನ್ನೂ ಕೊಡುವ ಪುಣ್ಯಕರವಾದ ಲಿಂಗಗಳನ್ನೂ ಇದಕ್ಕೆ ಸಂಬಂಧಪಟ್ಟ ನನ್ನ ಮಂದಿರಗಳನ್ನೂ ನೋಡು.

೯೯–೧೦೧ ಇದಲ್ಲದೇ ನನ್ನ ಕ್ಷೇತ್ರಗಳಲ್ಲಿ ರಹಸ್ಯವಾಗಿ ಸ್ಥಾಪಿಸಲ್ಪಟ್ಟಿರುವ ಲಿಂಗಗಳ ವಿಷಯವನ್ನು ಕೇಳು. ನಾಲ್ಕುದಿಕ್ಕುಗಳಲ್ಲಿಯೂ ಆಕಾರದಲ್ಲಿ ನಾಲ್ಕು ಹರಿದಾರಿ ಉದ್ದವಾಗಿಯೂ ಇರುವ ಈ ಕ್ಷೇತ್ರವನ್ನು ನೋಡು. ಮನೋಹರವಾದ ಶರೀರವುಳ್ಳ ಪಾರ್ವತಿಯೇ, ಮಹಾಲಯ ವೆಂಬ ಪರ್ವತದಲ್ಲಿರುವ ಮತ್ತು ಕೇದಾರವೆಂಬ ಈ ಕ್ಷೇತ್ರದಲ್ಲಿಯೂ, ಇರುವ ಮನುಷ್ಯರಿಗೆ ಮರಣವಾದಮೇಲೆ ಮೋಕ್ಷವನ್ನು ಕೊಡುವ ವಿಸ್ತಾರವಾದ ಈ ಮಂದಿರಗಳನ್ನು ನೋಡು. ಮರಣಕಾಲದಲ್ಲಿ ಯಾವರೂ ಇದರ ದರ್ಶನವನ್ನು ಪಡೆದ ಮನುಷ್ಯನು ಸತ್ತನಂತರ ಗಣಗಳಲ್ಲೊಬ್ಬನಾಗುವನಲ್ಲದೆ ಮೋಕ್ಷವನ್ನು ಪಡೆಯುವನು. ಈ ಲಿಂಗಗಳು ಅವನನ್ನು ಗಣಗಳ ಪತಿಯನ್ನಾಗಿ ಮಾಡುವುವಲ್ಲದೆ. ಅವನಿಗೆಮೋಕ್ಷವನ್ನೂ ಕೊಡುವುವು.

೧೦೨–೧೦೪. ಮಹಾಲಯಕ್ಷೇತ್ರ, ಕೇದಾರಕ್ಷೇತ್ರ, ಮಧ್ಯಮ ಕ್ಷೇತ್ರಗಳಿಗಿಂತಲೂ, ಅವಿಮುಕ್ತಕ್ಷೇತ್ರವು ಬಹಳ ಪುಣ್ಯಕರವೆಂದು

ಕೇದಾರಂ ಮಧ್ಯಮಂ ಕ್ಷೇತ್ರಂ ಸ್ಥಾನಂ ಚೈವ ಮಹಾಲಯಂ ।
ಮಮ ಪುಣ್ಯಾನಿ ಭೂಲೋಕೇ ತೇಭ್ಯಃ ಶ್ರೇಷ್ಠತಮಂ ತ್ವಿದಂ ॥

ಯತಃ ಸೃಷ್ಟ್ವಾಸ್ತ್ವಮೋ ಲೋಕಾಸ್ತತಃ ಕ್ಷೇತ್ರಮಿದಂ ಶುಭಂ ।
ಕದಾಚಿನ್ನ ಮಯಾ ಮುಕ್ತ ಮವಿಮುಕ್ತಂ ತತೋಽಭವತ್ ॥

ಅವಿಮುಕ್ತೇಶ್ವರಂ ಲಿಂಗಂ ಮಮ ದೃಷ್ಟ್ವೇಹ ಮಾನವಃ ।
ಸದ್ಯಃ ಪಾಪ ವಿನಿರ್ಮುಕ್ತಃ ಪಶುಪಾಶೈಃ ವಿಮುಚ್ಯತೇ ॥೧೦೫॥

ಶೈಲೇಶಂ ಸಂಗಮೇಶಂ ಚ ಸ್ವರ್ಲೀನಂ ಮಧ್ಯಮೇಶ್ವರಂ ।
ಹಿರಣ್ಯಗರ್ಭ ಮೀಶಾನಂ ಗೋ ಪ್ರೇಕ್ಷ್ಯಂ ವೃಷಭಧ್ವಜಂ ॥೧೦೬॥

ಉಪಶಾಂತಂ ಶಿವಂ ಚೈವ ಜ್ಯೇಷ್ಠಸ್ಥಾನ ನಿವಾಸಿನಂ ।
ಶುಕ್ರೇಶ್ವರಂ ಚ ವಿಖ್ಯಾತಂ ವ್ಯಾಘ್ರೇಶಂ ಜಂಬುಕೇಶ್ವರಂ ॥೧೦೭॥

---

ಹೇಳಲ್ಪಟ್ಟಿದೆ. ಕೇದಾರಕ್ಷೇತ್ರ, ಮಧ್ಯಮಕ್ಷೇತ್ರ, ಮಹಾಲಯ ಕ್ಷೇತ್ರಗಳೂ, ಭೂಲೋಕದಲ್ಲಿ ಶ್ರೇಷ್ಠವಾದವುಗಳೇ ಸರಿ. ಆದರೂ ಅವಿಮುಕ್ತಕ್ಷೇತ್ರವು ಎಲ್ಲಕ್ಕಿಂತಲೂ ಬಹು ಶ್ಲಾಘ್ಯವಾದುದು. ಏಕೆಂದರೆ ನಾನು ಈ ಕ್ಷೇತ್ರದಲ್ಲೇ ಇದ್ದು ಎಲ್ಲಾ ಲೋಕಗಳನ್ನೂ ಸೃಷ್ಟಿಸಿದುದ ರಿಂದಲೂ, ಈ ಕ್ಷೇತ್ರವನ್ನು ನಾನು ಯಾವಾಗಲೂ ಬಿಡದೇ ಇರುವುದ ರಿಂದಲೂ, ಈ ಕ್ಷೇತ್ರವು ಬಹಳ ಶ್ರೇಷ್ಠವಾದುದೂ, ಅವಿಮುಕ್ತ ಎಂದು ಹೆಸರನ್ನು ಪಡೆದಿರುವುದೂ ಆಗಿದೆ.

೧೦೫–೧೦೭. ಮನುಷ್ಯನು ಅವಿಮುಕ್ತೇಶ್ವರ ಲಿಂಗದ ದರ್ಶನವನ್ನು ಪಡೆದು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ, ಎಲ್ಲಾ ವಿಧವಾದ ಕಟ್ಟಿನಿಂದಲೂ ಬಿಡುಗಡೆಯನ್ನು ಹೊಂದುತ್ತಾನೆ. ಶೈಲೇಶ, ಸಂಗಮೇಶ, ಸ್ವರ್ಲೀನೇಶ್ವರ, ವೃಷಭಧ್ವಜೇಶ್ವರ, ಉಪಶಾಂತೇಶ್ವರ, ಜ್ಯೇಷ್ಠಸ್ಥಾನೇಶ್ವರ, ವ್ಯಾಘ್ರೇಶ್ವರ, ಶುಕ್ರೇಶ್ವರ, ಜಂಬುಕೇಶ್ವರ, ಇವರೆಲ್ಲರನ್ನೂ ಮನುಷ್ಯನು ದರ್ಶನಮಾಡಬೇಕು. •

ದೃಷ್ಟ್ವಾ ನ ಜಾಯತೇ ಮರ್ತ್ಯಃ ಸಂಸಾರೇ ದುಃಖ ಸಾಗರೇ ।

॥ ಸೂತ ಉವಾಚ ॥

ಏವ ಮುಕ್ತ್ವಾಮಹಾದೇವೋ ದಿಶಃ ಸರ್ವಾ ವ್ಯಲೋಕಯತ್ ॥
ವಿಲೋಕ್ಯ ಸಂಸ್ಥಿತೇ ಪಶ್ಚಾದ್ದೇವ ದೇವೇ ಮಹೇಶ್ವರೇ ।
ಅಕಸ್ಮಾದಭವತ್ಸರ್ವಃ ಸ ದೇಶೋ ಜ್ವಲಿತೋ ಯಥಾ ॥೧೦೯॥
ತತಃ ಪಾಶುಪತಾಃ ಸಿದ್ಧಾ ಭಸ್ಮಾಭ್ಯಂಗ ಸಿತ ಪ್ರಭಾಃ ।
ಮಾಹೇಶ್ವರಾ ಮಹಾತ್ಮಾನ ಸ್ತಥಾ ವೈ ನಿಯತ ವ್ರತಾಃ ॥೧೧೦॥
ಬಹವಃ ಶತಶೋಽಭ್ಯೇತ್ಯ ನಮಶ್ಚಕ್ರು ರ್ಮಹೇಶ್ವರಂ ।
ಪುನ ರ್ನಿರೀಕ್ಷ್ಯ ಯೋಗೇಶಂ ಧ್ಯಾನಯೋಗಂ ಚ ಕೃತ್ಸ್ನಶಃ॥೧೧೧॥
ತಸ್ಥುರಾತ್ಮಾನ ಮಾಸ್ಥಾಯ ಲೀಯಮಾನಾ ಇವೇಶ್ವರೇ ।
ಸ್ಥಿತಾನಾಂ ಸ ತದಾ ತೇಷಾಂ ದೇವದೇವ ಉಮಾಪತಿಃ ॥೧೧೨॥

---

೧೦೮–೧೧೦. ಈ ಲಿಂಗಗಳೆಲ್ಲವನ್ನೂ ಸಂದರ್ಶನಮಾಡಿ, ಮನುಷ್ಯನು ಪುನಃ ಸಂಸಾರಸಾಗರದಲ್ಲಿ ಸಿಕ್ಕಿ ಬೀಳುವುದೇ ಇಲ್ಲ. ಸೂತನು ಹೇಳಿದನು:— ಹೀಗೆ ಮಹಾದೇವನಾದ ಶಿವನು ಹೇಳಿ, ಎಲ್ಲಾ ದಿಕ್ಕುಗಳನ್ನೂ ಒಂದುಸಲ ನೋಡಲಾಗಿ, ಆ ಪ್ರದೇಶವೆಲ್ಲವೂ ಅಕಸ್ಮಾತ್ ಬಹಳ ಪ್ರಕಾಶಮಾನವಾಗಿ ಬೆಳಗಿತು. ಅನಂತರದಲ್ಲಿ ಪಶುಪತಿ ವ್ರತಮಾಡುವವರೂ, ಸಿದ್ಧರೂ, ಬೂದಿಯ ಸ್ನಾನಮಾಡಿದವರಂತೆ ಬೆಳ್ಳಗಿರುವ ಕಾಂತಿಯುಳ್ಳ, ಮಹೇಶ್ವರನ ಭಕ್ತರೂ, ನಿಯಮ ಧಾರಿಗಳೂ, ಅಲ್ಲಿ ನೆರೆದರು.

೧೧೧–೧೧೩. ಹೀಗೆ ನೂರಾರು ಮಂದಿ ಶಿವನನ್ನು ಸಮೀಪಿಸಿ ಅವನಿಗೆ ನಮಸ್ಕಾರಮಾಡಿದರು. ತಿರುಗಿಯೂ ಭಗವಂತನ ಸಂದರ್ಶನವನ್ನು ಪಡೆದು ಧ್ಯಾನಯೋಗದ ಮಹಿಮೆಯಿಂದ ಈಶ್ವರನೊಳಗೆ ಲೀನರಾಗುವರೋ ಎಂಬಂತೆ ಇದ್ದರು. ಹಾಗೆ ನಿಂತಿರುವ ಅವರೆದುರಿಗೆ ದೇವದೇವನಾದ ಪಾರ್ವತೀ ಪತಿಯು ದೊಡ್ಡ ಆಕಾರವನ್ನು ತಾಳಿ ಜಗತ್ತಿನ

ಸ ಬಿಭ್ರತ್ಪರಮಾಂ ಮೂರ್ತಿಂ ಬಭೂವ ಪುರುಷಃ ಪ್ರಭುಃ ।
ಕೃತ್ಸ್ನಂ ಜಗದಿಹೈಕಸ್ಥಂ ಕರ್ತುಮಂತ ಇವಸ್ಥಿತಃ ॥೧೧೩॥
ತಸ್ಯ ತಾಂ ಪರಮಾಂ ಮೂರ್ತಿ ಮಾಸ್ಥಿತಸ್ಯ ಜಗತ್ಪ್ರಭೋಃ ।
ನ ಶಶಾಕ ಪುನರ್ದ್ರಷ್ಟುಂ ಹೃಷ್ಟರೋಮಾ ಗಿರೀಂದ್ರಜಾ ॥೧೧೪॥
ತತಃ ಸ್ತ್ವದೃಷ್ಟಮಾಕಾರಂ ಬುದ್ಧ್ವಾ ಸಾ ಪ್ರಕೃತಿ ಸ್ಥಿತಂ ।
ಪ್ರಕೃತೇ ಮೂರ್ತಿಮಾಸ್ಥಾಯ ಯೋಗೇನ ಪರಮೇಶ್ವರೀ॥೧೧೫॥
ತಂ ಶಶಾಕ ಪುನರ್ದ್ರಷ್ಟುಂ ಹರಸ್ಯ ಚ ಮಹಾತ್ಮನಃ ।
ತತಸ್ತೇ ಲಯಮಾಧಾಯ ಯೋಗಿನಃ ಪುರುಷಸ್ಯ ತು ॥೧೧೬॥
ವಿವಿಶು ರ್ಹೃದಯಂ ಸರ್ವೇ ದಗ್ಧಸಂಸಾರ ಬೀಜಿನಃ ।
ಪಂಚಾಕ್ಷರಸ್ಯ ವೈ ಬೀಜಂ ಸಂಸ್ಮರಂತಃ ಸುಶೋಭನಂ ॥೧೧೭॥

---

ಸ್ವಾಮಿಯಾದ ಪುರುಷನ ಸ್ವರೂಪವುಳ್ಳವನಾಗಿ ಈ ಜಗತ್ತೆಲ್ಲವನ್ನೂ ಒಂದೇ ಕಡೆ ಪ್ರಲಯದಲ್ಲಿ ಸೇರಿಸುತ್ತಿರುವನೋ ಎನ್ನುವ ಹಾಗೆ ಕಂಡನು.

೧೧೪–೧೧೬. ಜಗತ್ತಿಗೆ ಸ್ವಾಮಿಯಾದ ಶಿವನು ಆ ಶ್ರೇಷ್ಠವಾದ ವಿರಾಟ್‌ರೂಪವನ್ನು ತಾಳಿರುವುದನ್ನು ಪಾರ್ವತಿಯು ರೋಮಾಂಚ ಹೊಂದಿದವಳಾಗಿ ನೋಡಲಾರದೇ ಹೋದಳು. ಅಷ್ಟಮೂರ್ತಿ ಪ್ರಕೃತಿಯಲ್ಲಿದ್ದ ಸಾಧಾರಣಕಣ್ಣಿಗೆ ಕಾಣಿಸದ ಆಕಾರವನ್ನು ತಿಳಿದು, ಪಾರ್ವತಿಯು ಪ್ರಕೃತಿಯ ರೂಪವನ್ನೇ ಪಡೆದುಕೊಂಡು ಯೋಗಶಕ್ತಿಯಿಂದ ಕೂಡಿದವಳಾದಳು. ಆಗ ಪರಮಾತ್ಮನಾದ ಶಿವನ ಈ ವಿರಾಟ್‌ರೂಪವನ್ನು ನೋಡಲು ಸಮರ್ಥಳಾದಳು. ಆಗ ಅಲ್ಲಿದ್ದವರೆಲ್ಲರೂ, ಲಯ, ಎಂಬ ಯೋಗದ ಪ್ರಭೇದದ ಸಹಾಯದಿಂದ ಅವನಲ್ಲಿ ಹೃದಯವನ್ನು ಪ್ರವೇಶಿಸಿದರು.

೧೧೭. ಎಲ್ಲರೂ ಸುಡಲ್ಪಟ್ಟ ಸಂಸಾರದ ಬೀಜವುಳ್ಳವರಾಗಿ ಮಂಗಳಕರವಾದ ಪಂಚಾಕ್ಷರದ ಬೀಜಮಂತ್ರವನ್ನು ಸ್ಮರಿಸುತ್ತಾ ಅದರ ಮಹಿಮೆಯಿಂದ ಶಿವನ ಹೃದಯವನ್ನು ಪ್ರವೇಶಿಸಿದರು.

ಸರ್ವ ಪಾಪ ಹರಂ ದಿವ್ಯಂ ಪುರಾ ಚೈವ ಪ್ರಕಾಶಿತಂ ।
ನೀಲ ಲೋಹಿತ ಮೂರ್ತಿಸ್ಥಂ ಪುನ ಶ್ಚಕ್ರೇ ವಪುಃ ಶುಭಂ ॥೧೧೮॥
ತಂ ದೃಷ್ಟ್ವಾ ಶೈಲಜಾ ಪ್ರಾಹ ಹೃಷ್ಟ ಸರ್ವತನೂ ರುಹಾ ।
ಸ್ತುವತೀ ಚರಣೌ ನತ್ವಾ ಕ ಇಮೇ ಭಗವನ್ನಿತಿ ॥೧೧೯॥
ತಾಮುವಾಚ ಸುರಶ್ರೇಷ್ಠ ಸ್ತದಾ ದೇವೀಂ ಗಿರೀಂದ್ರಜಾಂ ।

॥ ಶ್ರೀ ಭಗವಾನು ವಾಚ ॥

ಮದೀಯಂ ವ್ರತ ಮಾಶ್ರಿತ್ಯ ಭಕ್ತ್ಯಾಮದ್ಭಿ ರ್ದ್ವಿಜೋತ್ತಮೈಃ ॥೧೨೦॥
ಯೈರ್ಯೈ ರ್ಯೋಗಾ ಇಹಾಭ್ಯಸ್ತಾ ಸ್ತೇಷಾ ಮೇಕೇನ ಜನ್ಮನಾ ।
ಕ್ಷೇತ್ರಸ್ಯಾಸ್ಯ ಪ್ರಭಾವೇನ ಭಕ್ತ್ಯಾ ಚ ಮಮ ಭಾಮಿನಿ ॥೧೨೧॥

---

೧೧೮–೧೨೦. ಶಿವನು ಎಲ್ಲಾ ಪಾಪಗಳನ್ನೂ ಹೋಗಲಾಡಿಸುವ, ದಿವ್ಯವಾದ, ಹಿಂದೆಯೂ ಗೋಚರವಾಗಿದ್ದ, ಕಪ್ಪಾದ ಕತ್ತುಳ್ಳ, ಮಂಗಳಕರವಾದ ನೀಲಲೋಹಿತ ಶರೀರವನ್ನೇ ತಿರುಗಿಯೂ ಹೊಂದಿದನು. ಬಹಳ ರೋಮಾಂಚ ಹೊಂದಿದ ಹಿಮವಂತನ ಮಗಳಾದ ಪಾರ್ವತಿಯು ಮೊದಲಿನ ಸ್ವರೂಪವನ್ನೇ ಹೊಂದಿದ ಶಿವನನ್ನು ನೋಡಿ, ಅವನ ಚರಣ ಗಳಿಗೆರಗಿ, "ಓ ಪೂಜ್ಯನಾದ ಸ್ವಾಮಿಯೇ, ಇವರು ಯಾರು ?" ಎಂದು ಕೇಳಿದಳು. ದೇವತೆಗಳಿಗೆ ಅಧಿಪತಿಯಾದ ಶಿವನು ಹಿಮವಂತನ ಮಗ ಳಾದ ಪಾರ್ವತಿಯನ್ನು ಕುರಿತು ಈ ರೀತಿಯಲ್ಲಿ ಹೇಳಿದನು.

ಶ್ರೀ ಭಗವಂತನು ಹೀಗೆಂದನು :— ಭಕ್ತಿಯುಳ್ಳ ಈ ಬ್ರಾಹ್ಮಣರೂ ಶ್ರೇಷ್ಠಭಕ್ತರಾದ ಇತರರೂ, ನನ್ನ ವ್ರತವನ್ನು ಧಾರಣಮಾಡುತ್ತಾರೆ.

೧೨೧–೧೨೩. ಯಾರುಯಾರು ಇಲ್ಲಿ ಯೋಗಾಭ್ಯಾಸ ಮಾಡು ತ್ತಾರೆಯೋ ಅವರಿಗೆ ಒಂದೇ ಜನ್ಮದಲ್ಲಿ ಈ ಕ್ಷೇತ್ರದ ಮಹಿಮೆ ಯಿಂದಲೂ, ನನ್ನ ಮೇಲೆ ಅವರಿಗಿರುವ ಭಕ್ತಿಯಿಂದಲೂ, ನಾನು ಹಿಂದೆ ತೋರಿಸಿದ ಸ್ವರೂಪದಿಂದ ಅವರಿಗೆ ಆ ರೀತಿಯಲ್ಲಿಯೇ ಅನುಗ್ರಹವನ್ನು ಮಾಡುವೆನು. ಬ್ರಹ್ಮನೇ ಮೊದಲಾದವರಿಂದ ಸೇವಿಸಲ್ಪಟ್ಟ ಈ ಕ್ಷೇತ್ರವು ಬಹಳ ಮಾಹಾತ್ಮ್ಯಯುಳ್ಳದ್ದೆಂದು ತಿಳಿ. ವೇದ ಪಾರಂಗತರಾದ

ಅನುಗ್ರಹೋ ಮಯಾ ಹ್ಯೇವಂ ಕ್ರಿಯತೇ ಮೂರ್ತಿತಃ ಸ್ವಯಂ ।
ತಸ್ಮಾದೇತ ನ್ಮಹತ್ಕ್ಷೇತ್ರಂ ಬ್ರಹ್ಮಾದ್ಯೈಃ ಸೇವಿತಂ ತಥಾ ॥೧೨೨॥
ಶ್ರುತಿ ಮದ್ಭಿಶ್ಚ ವಿಪ್ರೇಂದ್ರೈಃ ಸಂಸಿದ್ಧೈಶ್ಚ ತಪಸ್ವಿಭಿಃ ।
ಪ್ರತಿಮಾಸಂ ತಥಾಽಷ್ಟಮ್ಯಾಂ ಪ್ರತಿಮಾಸಂ ಚತುರ್ದಶೀಂ ॥೧೨೩॥
ಉಭಯೋಃ ಪಕ್ಷಯೋರ್ದರ್ಶೇಽಪಿ ವಾರಾಣಸ್ಯಾ ಮುಪಾಸ್ಯತೇ ।
ಶಶಿಭಾನೂ ಪರಾಗೇ ಚ ಕಾರ್ತಿಕ್ಯಾಂ ಚ ವಿಶೇಷತಃ ॥೧೨೪॥
ಸರ್ವ ಪರ್ವಸು ಪುಣ್ಯೇಷು ವಿಷುವೇಷ್ವಯನೇಷು ಚ ।
ಪೃಥಿವ್ಯಾಂ ಸರ್ವತೀರ್ಥಾನಿ ವಾರಾಣಸ್ಯಾಂ ತು ಜಾಹ್ನವೀಂ॥೧೨೫॥
ಉತ್ತರ ಪ್ರವಹಾಂ ಪುಣ್ಯಾಂ ಮಮ ಮೌಲಿ ವಿನಿಸ್ಸೃತಾಂ ।
ಪಿತುಸ್ತೇ ಗಿರಿರಾಜಸ್ಯ ಶುಭಾಂ ಹಿಮವತಃ ಸುತಾಂ ॥೧೨೬॥
ಪುಣ್ಯಸ್ಥಾನ ಸ್ಥಿತಾಂ ಪುಣ್ಯಾಂ ಪುಣ್ಯದಿಕ್ಪ್ರವಹಾಂ ಸದಾ ।
ಭಜಂತೇ ಸರ್ವತೋಽಭ್ಯೇತ್ಯ ಯೇ ತಾಂಶ್ಶೃಣು ವರಾನನೇ ॥೧೨೭॥

---

ತಪಸ್ವಿಗಳೂ, ಬ್ರಾಹ್ಮಣ ಶ್ರೇಷ್ಠರೂ, ಇವರಿಂದ ಪ್ರತಿತಿಂಗಳಲ್ಲೂ ಅಷ್ಟಮೀ, ಮತ್ತು ಚತುರ್ದಶೀ ದಿನಗಳಲ್ಲಿ ನಾನು ಸೇವಿಸಲ್ಪಡುತ್ತೇನೆ.

೧೨೪–೧೨೬. ಶುಕ್ಲಪಕ್ಷ, ಕೃಷ್ಣಪಕ್ಷಗಳೆರಡರ ಆ ತಿಥಿಗಳಲ್ಲಿಯೂ, ಚಂದ್ರ ಸೂರ್ಯಗ್ರಹಣಗಳ ಸಮಯದಲ್ಲೂ, ವಿಶೇಷವಾಗಿ ಕಾರ್ತಿಕ ಮಾಸದಲ್ಲೂ ನಾನು ಭಕ್ತ ಜನಗಳಿಂದ ಸೇವಿಸಲ್ಪಡುತ್ತೇನೆ. ಎಲ್ಲಾ ಪೌರ್ಣಿಮಿ ಅಮಾವಾಸ್ಯೆಗಳ ಸಂಧಿಕಾಲದಲ್ಲಿಯೂ, ಉತ್ತರಾಯಣ ಪುಣ್ಯಕಾಲದಲ್ಲಿಯೂ, ಭೂಮಿಯಲ್ಲಿರುವ ಈ ಎಲ್ಲಾ ತೀರ್ಥಗಳಲ್ಲಿಯೂ, ಮೇಲಾಗಿ ಈ ಕಾಶಿಯಲ್ಲಿ ಗಂಗಾನದಿಯಲ್ಲಿಯೂ, ಸ್ನಾನಮಾಡಿ, ಮನುಷ್ಯರು ನನ್ನನ್ನು ಸೇವಿಸುತ್ತಾರೆ. ನನ್ನ ತಲೆಯಿಂದಲೇ ಧರಿಸಲ್ಪಟ್ಟಿದ್ದು ಆ ಮೇಲೆ ಹೊರಕ್ಕೆ ಹೊರಟ, ನಿನ್ನ ತಂದೆಯಾದ ಹಿಮವಂತನ ಮಗಳಾದ, ಪುಣ್ಯಪ್ರದಳಾದ, ಉತ್ತರದಿಕ್ಕಿಗೆ ಅಭಿಮುಖವಾದ ಪ್ರವಾಹವುಳ್ಳ ಈ ಗಂಗಾನದಿಯು ಪವಿತ್ರತೆಯಲ್ಲಿ ಸರ್ವಶ್ಲಾಘ್ಯವಾಗಿದೆ.

೧೨೭–೧೨೯. ಮನುಷ್ಯರು ಎಲ್ಲಾ ಕಡೆಯಿಂದಲೂ ಬಂದು ಪುಣ್ಯಕರವಾದ ಸ್ಥಳದಲ್ಲಿರುವ, ಪುಣ್ಯಕರವಾದ ದಿಕ್ಕಿಗೆ ತಿರುಗಿ ಪ್ರವಹಿಸುತ್ತಿ

ಸನ್ನಿಹತ್ಯ ಕುರುಕ್ಷೇತ್ರಂ ಸಾರ್ಧಂ ತೀರ್ಥ ಶತೈ ಸ್ತಥಾ ।
ಪುಷ್ಕರಂ ನಿಮಿಷಂ ಚೈವ ಪ್ರಯಾಗಂ ಚ ಪೃಥೂದಕಂ ॥೧೨೮॥
ದ್ರುಮಕ್ಷೇತ್ರಂ ಕುರುಕ್ಷೇತ್ರಂ ನೈಮಿಷಂ ತೀರ್ಥ ಸಂಯುತಂ ।
ಕ್ಷೇತ್ರಾಣಿ ಸರ್ವತೋ ದೇವಿ ದೇವತಾ ಋಷಯ ಸ್ತಥಾ ॥೧೨೯॥
ಸಂಧ್ಯಾಚ ಚ ಋತವಶ್ಚೈವ ಸರ್ವಾ ನದ್ಯಃ ಸರಾಂಸಿ ಚ ।
ಸಮುದ್ರಾಃ ಸಪ್ತ ಚೈವಾತ್ರ ದೇವತೀರ್ಥಾನಿ ಕೃತ್ಸ್ನಶಃ ॥೧೩೦॥
ಭಾಗೀರಥೀಂ ಸಮೇಷ್ಯಂತಿ ಸರ್ವಪರ್ವಸು ಸುವ್ರತೇ ।
ಅವಿಮುಕ್ತೇಶ್ವರಂ ದೃಷ್ಟ್ವಾ ದೃಷ್ಟ್ವಾ ಚೈವ ತ್ರಿವಿಷ್ಟಪಂ ॥೧೩೧॥
ಕಾಲ ಭೈರವ ಮಾಸಾದ್ಯ ಧೂತ ಪಾಪಾನಿ ಸರ್ವ ಶಃ ।
ಭವಂತಿ ಹಿ ಸುರೇಶಾನಿ ಸರ್ವಪರ್ವಸು ಪರ್ವಸು ॥೧೩೨॥

---

ರುವ, ಗಂಗಾನದಿಯನ್ನು ಸೇವಿಸುತ್ತಾರೆಂದು ತಿಳಿ. ಕುರುಕ್ಷೇತ್ರದಲ್ಲಿ ಹರಿದು ನೂರಾರು ತೀರ್ಥಗಳೊಡನೆ ಪುಷ್ಕರಕ್ಷೇತ್ರ, ನೈಮಿಷಾರಣ್ಯ, ಹೆಚ್ಚಾದ ನೀರುಳ್ಳ ಪ್ರಯಾಗಕ್ಷೇತ್ರ, ದ್ರುಮಕ್ಷೇತ್ರ, ಕುರುಕ್ಷೇತ್ರ, ಪಾವನವಾದ ತೀರ್ಥಗಳಿಂದ ಕೂಡಿರುವ, ನೈಮಿಷಕ್ಷೇತ್ರ, ಇವೆಲ್ಲವೂ ಗಂಗಾನದಿಯಲ್ಲಿ ಸಮಾವೇಶ ವಾಗುತ್ತವೆ. ದೇವತೆಗಳೂ, ಮತ್ತು ಋಷಿಗಳೂ, ಆ ಕಾರಣದಿಂದಲೇ ಇದನ್ನು ಸೇವಿಸುತ್ತಾರೆ. ಹೇಗೆಂದರೆ.

೧೩೦–೧೩೨. ಎಲೌ ಮಂಗಳಾಂಗಿಯೇ, ಸಂಧ್ಯಾಕಾಲಗಳೂ, ಋತುಗಳೂ, ಎಲ್ಲಾ ನದಿಗಳೂ, ಸರೋವರಗಳೂ, ಏಳು ಸಮುದ್ರಗಳೂ, ಸಮಸ್ತವಾದ ದೇವತೀರ್ಥಗಳೂ, ಎಲ್ಲಾ ಅಮಾವಾಸ್ಯಾ ಪೌರ್ಣಿಮಿಗಳ ಸಂಧಿಕಾಲಗಳಲ್ಲಿ ಈ ಗಂಗಾನದಿಗೆ ಒಟ್ಟಾಗಿ ಬಂದು ಸೇರುತ್ತವೆ. ಆದುದರಿಂದ ಆ ಕಾಲದಲ್ಲಿ ವಿಶ್ವೇಶ್ವರನನ್ನು ದರ್ಶನಮಾಡಿ, ಸ್ವರ್ಗ ಸಮಾನವಾದ ಈ ಕ್ಷೇತ್ರವನ್ನೂ ದರ್ಶನಮಾಡಿ, ಕಾಲಭೈರವನನ್ನು ಪರ್ವಗಳಲ್ಲಿ ಪೂಜಿಸಿ, ಶ್ರದ್ಧಾವಂತರಾದ ಭಕ್ತ ಜನರು ತಮ್ಮ ಸಕಲ ಪಾಪಗಳನ್ನೂ ಕಳೆದುಕೊಳ್ಳುತ್ತಾರೆ.

ಪೃಥಿವ್ಯಾಂ ಯಾನಿ ಪುಣ್ಯಾನಿ ಮಹಾಂತ್ಯಾಯತನಾನಿ ಚ ।
ಪ್ರವಿಶಂತಿ ಸದಾಽಭ್ಯೇತ್ಯ ಪುಣ್ಯಂ ಪರ್ವಸು ಪರ್ವಸು ॥೧೩೩॥

ಅವಿಮುಕ್ತಂ ಕ್ಷೇತ್ರವರಂ ಮಹಾ ಪಾಪ ನಿಬರ್ಹಣಂ ।
ಕೇದಾರೇ ಚೈವ ಯಲ್ಲಿಂಗಂ ಯಚ್ಚ ಲಿಂಗಂ ಮಹಾಲಯೇ ॥೧೩೪॥

ಮಧ್ಯಮೇಶ್ವರ ಸಂಜ್ಞಂ ಚ ತಥಾ ಪಾಶುಪತೇಶ್ವರಂ ।
ಶಂಕು ಕರ್ಣೇಶ್ವರಂ ಚೈವ ಗೋಕರ್ಣೌ ಚ ತಥಾ ಹ್ಯು ಭೌ ॥೧೩೫॥

ದ್ರುಮ ಚಂಡೇಶ್ವರಂ ನಾಮ ಭದ್ರೇಶ್ವರ ಮನುತ್ತಮಂ ।
ಸ್ಥಾನೇಶ್ವರಂ ತಥೈಕಾಗ್ರಂ ಕಾಲೇಶ್ವರ ಮಜೇಶ್ವರಂ ॥೧೩೬॥

ಭೈರವೇಶ್ವರ ಮೀಶಾನಂ ತಥೋಂಕಾರಕ ಸಂಜ್ಞಿತಂ ।
ಅಮರೇಶಂ ಮಹಾಕಾಲಂ ಜ್ಯೋತಿಷಂ ಭಸ್ಮಗಾತ್ರಕಂ ॥೧೩೭॥

---

೧೩೩–೧೩೫. ಅಲ್ಲದೆ ಭೂಮಿಯಲ್ಲಿ ಪುಣ್ಯಕರಗಳಾದ ತೀರ್ಥಗಳು, ಮತ್ತು ಶ್ರೇಷ್ಠ ಶಿವಾಲಯಗಳು ಎಷ್ಟುಂಟೋ ಅವೆಲ್ಲವೂ ಅಮಾವಾಸ್ಯಾ ಪೌರ್ಣಿಮೆಗಳ ಕಾಲಗಳಲ್ಲಿ ಈ ಅವಿಮುಕ್ತ ಕ್ಷೇತ್ರದಲ್ಲಿ ಸಮಾವೇಶ ವನ್ನು ಹೊಂದುತ್ತವೆ. ಆದ್ದರಿಂದ ಈ ವಿಶ್ವೇಶ್ವರ ಕ್ಷೇತ್ರವು ಎಲ್ಲಾ ಕ್ಷೇತ್ರಗಳಿಗಿಂತಲೂ ಹೆಚ್ಚಾಗಿ ಭಕ್ತರ ಪಾಪಗಳನ್ನೂ ಹಾಳುಮಾಡ ತಕ್ಕದ್ದಾಗಿದೆ. ಕೇದಾರ ಕ್ಷೇತ್ರಲ್ಲಿರುವ ಮತ್ತು ಮಹಾಲಯಕ್ಷೇತ್ರ ಗಳಲ್ಲಿರುವ ಲಿಂಗಗಳು ಮತ್ತು ಮಧ್ಯಮೇಶ್ವರಲಿಂಗ, ಪಾಶುಪತೇಶ್ವರ, ಶಂಕು ಕರ್ಣೇಶ್ವರ, ಗೋಕರ್ಣೇಶ್ವರ, ಇವೆಲ್ಲವೂ ಕಾಶಿಯಲ್ಲಿರುವ ನನ್ನಲ್ಲಿ ಸೇರುತ್ತವೆ.

೧೩೬–೧೩೮. ದ್ರುಮಚಂಡೇಶ್ವರ, ಶ್ರೇಷ್ಠನಾದ ಭದ್ರೇಶ್ವರ, ಸ್ಥಾನೇಶ್ವರ, ಏಕಾಗ್ರೇಶ್ವರ, ಕಾಲೇಶ್ವರ, ಅಜೇಶ್ವರ, ಭೈರವೇಶ್ವರ, ಓಂಕಾರೇಶ್ವರ, ಅಮರೇಶ್ವರ, ಮಹಾಕಾಲೇಶ್ವರ, ಜ್ಯೋತಿಷೇಶ್ವರ, ಭಸ್ಮ ಗಾತ್ರೇಶ್ವರ ಮತ್ತು ಎಲ್ಲಾ ಪುಣ್ಯಕರವಾದ ಲಿಂಗಗಳೂ, ಹಾಗೆಯೇ

ಯಾನಿ ಚಾಽನ್ಯಾನಿ ಪುಣ್ಯಾನಿ ಸ್ಥಾನಾನಿ ಮಮ ಭೂತಲೇ ।
ಅಷ್ಟ ಷಷ್ಟಿ ಸಮಾಖ್ಯಾನಿ ರೂಪಾನ್ಯನ್ಯಾನಿ ಕೃತ್ಸ್ನಶಃ ॥೧೩೮॥
ತಾನಿ ಸರ್ವಾಣ್ಯಶೇಷಾಣಿ ವಾರಾಣಾಸ್ಯಾಂ ವಿಶಂತಿ ಮಾಂ ।
ಸರ್ವ ಪರ್ವಸು ಪುಣ್ಯೇಷು ಗುಹ್ಯಂ ಚೈತ ದುದಾಹೃತಂ ॥೧೩೯॥
ತೇನೇಹ ಲಭತೇ ಜಂತುರ್ಮೃತೋ ದಿವ್ಯಾಽಮೃತಂ ಪದಂ ।
ಸ್ನಾತಸ್ಯ ಚೈವ ಗಂಗಾಯಾಂ ದೃಷ್ಟೇನ ಚ ಮಯಾ ಶುಭೇ ॥೧೪೦॥
ಸರ್ವಯಜ್ಞಫಲೈಸ್ತುಲ್ಯ ಮಿಷ್ಟ್ವಾಃಶತ ಸಹಸ್ರಶಃ ।
ಸದ್ಯ ಏವ ಸಮಾಪ್ನೋತಿ ಕಿಂ ತತಃ ಪರಮೋಽದ್ಭುತಂ ॥೧೪೧॥
ಸರ್ವಾಯತನ ಮುಖ್ಯಾನಿ ದಿವಿ ಭೂಮೌ ಗಿರಿಷ್ವಪಿ ।
ಪರಾತ್ಪರ ತರಂ ದೇವಿ ಬುಧ್ಯಸ್ವೇತಿ ಮಯೋದಿತಂ ॥೧೪೨॥

---

ಪ್ರಸಿದ್ಧವಾದ ಅರವತ್ತೆಂಟು ಶಿವ ದೇವಾಲಯಗಳೂ, ಇವೆಲ್ಲವೂ ಈ ಕಾಶೀಕ್ಷೇತ್ರದಲ್ಲಿ ನನ್ನಲ್ಲಿ ಪ್ರವೇಶಿಸಿರುತ್ತವೆ.

೧೩೯–೧೪೨. ಈ ಎಲ್ಲಾ ಲಿಂಗಗಳೂ ಕಾಶಿಯಲ್ಲಿ ನನ್ನನ್ನೇ ಎಲ್ಲಾ ಅಮಾವಾಸ್ಯಾ ಪೌರ್ಣಿಮೆಗಳ ಸಂಧಿಕಾಲಗಳಲ್ಲಿ ಸೇರಿರುತ್ತವೆಯೆಂದು ಈ ರಹಸ್ಯವು ಹೇಳಲ್ಪಟ್ಟಿದೆ. ಆದ್ದರಿಂದ ಇಲ್ಲಿ ಮರಣಹೊಂದಿದ ಪ್ರಾಣಿಯು ದಿವ್ಯವಾದ ಮೋಕ್ಷಪದವಿಯನ್ನು ಹೊಂದುವದು. ಗಂಗೆಯಲ್ಲಿ ಸ್ನಾನಮಾಡಿದವನಿಗೂ, ನನ್ನ ಕರುಣಾಕಟಾಕ್ಷಕ್ಕೆ ಪಾತ್ರನಾದವನಿಗೂ, ಲಕ್ಷಾಂತರ ಯೋಗಗಳನ್ನು ಮಾಡಿದ ಫಲವು ಸಿಕ್ಕುವುದಲ್ಲದೆ ಮರಣಹೊಂದಿದ ಕೂಡಲೇ ಮೋಕ್ಷವನ್ನು ಸಹ ಹೊಂದುವನು. ಇದಕ್ಕಿಂತ ಅಶ್ಚರ್ಯವೇನುಂಟು? ಸ್ವರ್ಗ, ಭೂಮಿ, ಪರ್ವತಗಳಲ್ಲಿರುವ ಎಲ್ಲಾ ಶ್ರೇಷ್ಠ ಶಿವಮಂದಿರಗಳಿಗಿಂತಲೂ, ಅತ್ಯಂತ ಶ್ರೇಷ್ಠವಾದದ್ದು ಈ ನನ್ನ ಅವಿಮುಕ್ತೇಶ್ವರ ಮಂದಿರವು. ಎಂಬ ನನ್ನ ಈ ಮಾತನ್ನು ನಂಬು.

ಅವಿಶಬ್ದೇನ ಪಾಪಸ್ತು ವೇದೋಕ್ತ್ಃ ಕಥ್ಯತೇ ದ್ವಿಜೈಃ ।
ತೇನ ಮುಕ್ತಂ ಮಯಾ ಜುಷ್ಟ ಮವಿಮುಕ್ತ ಮ ತೋಚ್ಯತೇ ॥

ಇತ್ಯುಕ್ತ್ವಾ ಭಗವಾ ನ್ರುದ್ರಃ ಸರ್ವಲೋಕ ಮಹೇಶ್ವರಃ ।
ಸುದೃಷ್ಟಂ ಕುರು ದೇವೇಶಿ ಅವಿಮುಕ್ತಂ ಗೃಹಂ ಮಮ ॥೧೪೪॥

ಇತ್ಯುಕ್ತ್ವಾ ಭಗವಾ ನ್ದೇವ ಸ್ತಯಾ ಸಾರ್ಧ ಮುಮಾಪತಿಃ ।
ದರ್ಶಯಾಮಾಸ ಭಗವಾನ್ ಶ್ರೀಪರ್ವತ ಮನುತ್ತಮಂ ॥೧೪೫॥

ಅವಿಮುಕ್ತೇಶ್ವರೇ ನಿತ್ಯ ಮವಸಚ್ಚ ಸದಾ ತಯಾ ।
ಸರ್ವಗತ್ವಾಚ್ಚ ಸರ್ವತ್ವಾ ತ್ಸರ್ವಾತ್ಮಾ ಸದಸನ್ಮಯಃ ॥೧೪೬॥

ಶ್ರೀಪರ್ವತ ಮನುಪ್ರಾಪ್ಯ ದೇವ್ಯಾ ದೇವೇಶ್ವರೋ ಹರಃ ।
ಕ್ಷೇತ್ರಾಣಿ ದರ್ಶಯಾಮಾಸ ಸರ್ವ ಭೂತಪತಿ ರ್ಭವಃ ॥೧೪೭॥

---

೧೪೩–೧೪೫. ವೇದದಲ್ಲಿ, ಅವಿ, ಎಂಬ ಶಬ್ದಕ್ಕೆ ಪಾಪ, ಎಂಬುದು ಅರ್ಥವೆಂದು ಹೇಳಲ್ಪಟ್ಟಿದೆ. ಪಾಪದಿಂದ ಬಿಡಲ್ಪಟ್ಟಿರುವುದರಿಂದಲೂ, ನಾನು ಯಾವಾಗಲೂ ಇಲ್ಲೇ ಇರುವುದರಿಂದಲೂ, ಈ ಕ್ಷೇತ್ರಕ್ಕೆ ಅವಿ ಮುಕ್ತ, ಎಂದು ಹೆಸರು ಬಂದಿದೆ. ಹೀಗೆ ಹೇಳಿ, ಪೂಜ್ಯನಾದ ಎಲ್ಲಾ ಲೋಕಕ್ಕೂ ಅಧಿಪತಿಯಾದ ಶಿವನು, ಪಾರ್ವತಿಗೆ "ಇಂಥಾ ಶ್ರೇಷ್ಠ ವಾದ, ಈ ಅವಿಮುಕ್ತ ಕ್ಷೇತ್ರವನ್ನು ನೋಡು" ಎಂದು ಹೇಳಿದನು. ಹೀಗೆ ಹೇಳಿ ಪೂಜ್ಯನೂ, ದೇವ ದೇವನೂ ಆದ ಪಾರ್ವತಿಯ ಪತಿಯು ಪಾರ್ವತಿಗೆ ಶ್ರೇಷ್ಠವಾದ ಶ್ರೀ ಪರ್ವತವನ್ನೂ ತೋರಿಸಿದನು.

೧೪೬–೧೪೭. ಶಿವನು ಅವಿಮುಕ್ತೇಶ್ವರ ಕ್ಷೇತ್ರದಲ್ಲಿ ಪಾರ್ವತಿ ಯೊಂದಿಗೆ ಯಾವಾಗಲೂ, ವಾಸಮಾಡಲು ಆರಂಭಿಸಿದನು. ಶಿವನು ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವುದರಿಂದಲೂ, ಎಲ್ಲಾ ಪದಾರ್ಥ ಗಳಿಗೂ ಆತ್ಮಸ್ವರೂಪವಾದುದರಿಂದಲೂ, ಇರುವಿಕೆ, ಇಲ್ಲದಿರುವಿಕೆ, ಎಂಬ ಎರಡು ಸ್ವರೂಪವನ್ನು ಹೊಂದಿರುವುದರಿಂದಲೂ, ದೇವಿಯಾದ ಪಾರ್ವತಿಯೊಂದಿಗೆ ಶ್ರೇಷ್ಠವಾದ ಶ್ರೀ ಪರ್ವತವನ್ನು ಹೊಂದಿ, ಎಲ್ಲಾ ಕ್ಷೇತ್ರಗಳನ್ನೂ ತೋರಿಸಿದನು. ಅಲ್ಲದೆ ಎಲ್ಲಾ ಭೂತಗಳಿಗೂ ಒಡೆಯ ನಾದ, ಶಿವನು ಪಾರ್ವತಿಗೆ ಶ್ರೇಷ್ಠವಾದ ಕುಂಡಿಪ್ರಭ, ಎಂಬ ಕ್ಷೇತ್ರ

ಕುಂಡಿಪ್ರಭಂ ಚ ಪರಮಂ ದಿವ್ಯಂ ವೈಶ್ರವಣೇಶ್ವರಂ ।
ಆಶಾಲಿಂಗಂ ಚ ದೇವೇಶಂ ದಿವ್ಯಂ ಯಚ್ಚ ಬಲೇಶ್ವರಂ ॥೧೪೮॥
ರಾಮೇಶ್ವರಂ ಚ ಪರಮಂ ವಿಷ್ಣುನಾ ಯತ್ಪ್ರತಿಷ್ಠಿತಂ ।
ದಕ್ಷಿಣ ದ್ವಾರ ಪಾರ್ಶ್ವೇ ತು ಕುಂಡಲೇಶ್ವರ ಮೀಶ್ವರಂ ॥೧೪೯॥
ಪರ್ವ ದ್ವಾರ ಸಮೀಪಸ್ಥಂ ತ್ರಿಪುರಾಂತಕ ಮುತ್ತಮಂ ।
ವಿವೃದ್ಧಂ ಗಿರಿಣಾ ಸಾರ್ಧಂ ದೇವದೇವ ನಮಸ್ಕೃತಂ ॥೧೫೦॥
ಮಧ್ಯಮೇಶ್ವರ ಮಿತ್ಯುಕ್ತಂ ತ್ರಿಷು ಲೋಕೇಷು ವಿಶ್ರುತಂ ।
ಅಮರೇಶ್ವರಂ ಚ ವರದಂ ದೇವೈಃ ಪೂರ್ವಂ ಪ್ರತಿಷ್ಠಿತಂ ॥೧೫೧॥
ಗೋ ಚರ್ಮೇಶ್ವರ ಮೀಶಾನಂ ತಥೇಂದ್ರೇಶ್ವರ ಮುದ್ಭುತಂ ।
ಕರ್ಮೇಶ್ವರಂ ಚ ವಿಪುಲಂ ಕಾರ್ಯಾರ್ಥಂ ಬ್ರಹ್ಮಣಾ ಕೃತಂ ॥೧೫೨॥

---

ವನ್ನು ವೈಶ್ರವಣೇಶ್ವರ ಕ್ಷೇತ್ರವನ್ನು ಆಶಾಲಿಂಗವನ್ನೂ, ದೇವೇಶನನ್ನೂ, ದಿವ್ಯವಾದ ಬಲೇಶ್ವರ ಕ್ಷೇತ್ರವನ್ನೂ, ತೋರಿಸಿದನು.

೧೪೯–೧೫೧. ಶಿವನು ಪಾರ್ವತಿಗೆ ಶ್ರೇಷ್ಠವಾದ, ವಿಷ್ಣುವಿನಿಂದ ಸ್ಥಾಪಿಸಲ್ಪಟ್ಟ ರಾಮೇಶ್ವರ ಕ್ಷೇತ್ರವನ್ನೂ, ಬಲಭಾಗದ ಬಾಗಿಲಿನ ಪಕ್ಕದಲ್ಲಿ ಸ್ಥಾಪಿಸಲ್ಪಟ್ಟ, ಕುಂಡಲೇಶ್ವರ ವಿಗ್ರಹವನ್ನೂ, ಪೂರ್ವದ ಬಾಗಿಲಿನ ಸಮೀಪದಲ್ಲಿರುವ ಶ್ರೇಷ್ಠವಾದ ತ್ರಿಪುರಾಂತಕ ಲಿಂಗವನ್ನೂ, ಎಲ್ಲಾ ದೇವತೆಗಳಿಂದಲೂ ನಮಸ್ಕರಿಸಲ್ಪಟ್ಟ, ಪರ್ವತದೊಂದಿಗೂ ವೃದ್ಧಿ ಹೊಂದಿರುವ, ಮೂರು ಲೋಕದಲ್ಲಿಯೂ ಪ್ರಸಿದ್ಧವಾದ ಮಧ್ಯಮೇಶ್ವರ ಎಂಬ ಲಿಂಗವನ್ನೂ, ವರವನ್ನು ಕೊಡುವ, ಹಿಂದೆ ದೇವತೆಗಳಿಂದ ಸ್ಥಾಪಿಸಲ್ಪಟ್ಟ, ಅಮರೇಶ್ವರ ಲಿಂಗವನ್ನೂ ತೋರಿಸಿದನು.

೧೫೨–೧೫೪. ಶಿವನು ಪಾರ್ವತಿಗೆ ಗೋಚರ್ಮೇಶ್ವರನನ್ನೂ ಆಶ್ಚರ್ಯಕರನಾದ ಇಂದ್ರೇಶ್ವರನನ್ನೂ, ಕಾರ್ಯಸಿದ್ಧಿಗಾಗಿ, ಬ್ರಹ್ಮನಿಂದ ಸ್ಥಾಪಿಸಲ್ಪಟ್ಟ ವಿಶಾಲವಾದ ಕರ್ಮೇಶ್ವರ ಲಿಂಗವನ್ನೂ ತೋರಿಸಿದನು. ಮತ್ತು ಶಿವನು ಪಾರ್ವತಿಯನ್ನು ಕುರಿತು "ಮಹಾಮಹಿಮೆಯುಳ್ಳ ನಾಶರಹಿತವಾದ ಈ ಆಲದಮರದಲ್ಲಿ ನನಗೆ ವಾಸವು." ಎಂದೂ, ಹೇಳಿದನು

ಶ್ರೀಮತ್ಸಿದ್ಧವಟೇ ಚೈವ ಸದಾಽವಾಸೋ ಮಮಾಽವ್ಯಯೇ ।
ಅಜೇನ ನಿರ್ಮಿತಂ ದಿವ್ಯಂ ಸಾಕ್ಷಾ ದಜಬಿಲಂ ಶುಭಂ ॥೧೫೩॥
ತತ್ರೈವ ಪಾದುಕೇ ದಿವ್ಯೇ ಮದೀಯೇ ಚ ಬಿಲೇಶ್ವರೇ ।
ತತ್ರ ಶೃಂಗಾಟಕಾಽಕಾರಂ ಶೃಂಗಾಟಾಽಚಲ ಮಧ್ಯಮೇ ॥೧೫೪॥
ಶೃಂಗಾಟ ಕೇಶ್ವರಂ ನಾಮ ಶ್ರೀದೇವ್ಯಾ ತು ಪ್ರತಿಷ್ಠಿತಂ ।
ಮಲ್ಲಿಕಾರ್ಜುನ ಕಂ ಚೈವ ಮಮವಾಸ ಮಿದಂ ಶುಭಂ ॥೧೫೫॥
ರಜೇಶ್ವರಂ ಚ ಪರ್ಯಾಯೇ ರಜಸಾ ಸುಪ್ರತಿಷ್ಠಿತಂ ।
ಗಜೇಶ್ವರಂ ಚ ವೈಶಾಖಂ ಕಪೋತೇಶ್ವರ ಮವ್ಯಯಂ ॥೧೫೬॥
ಕೋಟೇಶ್ವರಂ ಮಹಾತೀರ್ಥಂ ರುದ್ರಕೋಟಿ ಗಣೈಃ ಪುರಾ ।
ಸೇವಿತಂ ದೇವಿ ಪಶ್ಯಾದ್ಯ ಸರ್ವಸ್ಮಾದಧಿಕಂ ಶುಭಂ ॥೧೫೭॥
ದ್ವಿದೇವ ಕುಲ ಸಂಜ್ಞಂ ಚ ಬ್ರಹ್ಮಣಾ ದಕ್ಷಿಣೇ ಶುಭಂ ।
ಉತ್ತರೇ ಸ್ಥಾಪಿತಂ ಚೈವ ವಿಷ್ಣುನಾ ಚೈವ ಶೈಲಜಂ ॥೧೫೮॥

---

ಅಲ್ಲದೆ, ಅಜನಿಂದ ಸ್ಥಾಪಿತವಾದ ಅಜಬಿಲ, ಎಂಬ ಸ್ಥಾನವು ನನಗೆ ಅತ್ಯಂತ ಪ್ರಿಯವಾದುದು. ಅಲ್ಲಿ ದಿವ್ಯವಾದ ನನ್ನ ಪಾದುಕೆಗಳು ಇಡಲ್ಪಟ್ಟಿವೆ. ಅಲ್ಲಿ ಶೃಂಗಾಟ, ಎಂಬ ಪರ್ವತದ ಮಧ್ಯ ಪ್ರದೇಶದಲ್ಲಿ ಮೂರು ಮೂಲೆಯುಳ್ಳ ಲಿಂಗವೂ ಇದೆ, ಎಂದು ತಿಳಿಸಿದನು.

೧೫೫-೧೫೭. ಇದೇ ಶ್ರೀ ದೇವಿಯಿಂದ ಸ್ಥಾಪಿತವಾದ ಶೃಂಗಾಟ ಕೇಶ್ವರ, ಎಂಬ ಲಿಂಗವು. ಇದಲ್ಲದೇ ನನ್ನ ಮಂಗಳಕರವಾದ, ವಾಸ ಸ್ಥಾನವಾದ ಮಲ್ಲಿಕಾರ್ಜುನ ಕ್ಷೇತ್ರವೂ, ಇಲ್ಲುಂಟು. ಯುಗ ಮರಳಿ ದಾಗ ಧೂಳಿನಿಂದ ಮಾಡಿದ್ದರೂ ಸ್ಥಿರವಾದ ಗಜೇಶ್ವರಲಿಂಗವೂ ಇಲ್ಲಿ ಇದೆ. ಅಲ್ಲದೆ ಗಜೇಶ್ವರ, ಸ್ಕಂದೇಶ್ವರ, ಕಪೋತೇಶ್ವರ, ಹಿಂದೆ ಕೋಟ್ಯಾಂತರ ರುದ್ರರ ಸಮೂಹದಿಂದ ಸ್ಥಾಪಿತವಾದ ಅತ್ಯಂತ ಶ್ರೇಷ್ಠ ವಾದ ಕೋಟೇಶ್ವರ ಮಹಾತೀರ್ಥ, ಇವುಗಳೆಲ್ಲವನ್ನೂ ನೋಡು, ಎಂದು ಶಿವನು ದೇವಿಗೆ ಹೇಳಿದನು.

೧೫೮-೧೬೦. ಬಲ ಭಾಗದಲ್ಲಿ ಮಂಗಳಕರವಾದ ದ್ವಿದೇವಕುಲ ಎಂಬ ಹೆಸರುಳ್ಳ ಬ್ರಹ್ಮನಿಂದ ಸ್ಥಾಪಿತವಾದ ಲಿಂಗವನ್ನೂ, ವಿಷ್ಣುವಿ

ಮಹಾಪ್ರಮಾಣಲಿಂಗಂ ಚ ಮಯಾ ಪೂರ್ವಂ ಪ್ರತಿಷ್ಠಿತಂ ।
ಪಶ್ಚಿಮೇ ಪರ್ವತೇ ಪಶ್ಯ ಬ್ರಹ್ಮೇಶ್ವರ ಮಲೇಶ್ವರಂ ॥೧೫೯॥

ಅಲಂಕೃತಂ ತ್ವಯಾ ಬ್ರಹ್ಮನ್ ಪುರಸ್ತಾನ್ಮುನಿಭಿಃ ಸಹ ।
ಇತ್ಯುಕ್ತ್ವಾ ತದ್ಗೃಹೇಽತಿಷ್ಠ ದಲಂ ಗೃಹಮಿತಿ ಸ್ಮೃತಂ ॥೧೬೦॥

ತತ್ರಾಪಿ ತೀರ್ಥಂ ತೀರ್ಥಜ್ಞೇ ವ್ಯೋಮ ಲಿಂಗಂ ಚ ಪಶ್ಯ ಮೇ ।
ಕದಂಬೇಶ್ವರ ಮೇತದ್ಧಿ ಸ್ಕಂದೇನೈವ ಪ್ರತಿಷ್ಠಿತಂ ॥೧೬೧॥

ಗೋ ಮಂಡಲೇಶ್ವರಂ ಚೈವ ನಂದಾದ್ಯೈಃ ಸುಪ್ರತಿಷ್ಠಿತಂ ।
ದೇವೈಃ ಸರ್ವೈಸ್ತು ಶಕ್ರಾದ್ಯೈಃ ಸ್ಥಾಪಿತಾನಿ ವರಾನನೇ ॥೧೬೨॥

ಶ್ರೀಮದ್ದೇವ ಹ್ರದಪ್ರಾಂತೇ ಸ್ಥಾನಾನೀಮಾನಿ ಪಶ್ಯ ಮೇ ।
ತಥಾ ಹಾರ ಪುರೇ ದೇವಿ ತವಹಾರೇ ನಿಪಾತಿತೇ॥ ॥೧೬೩॥

ತ್ವಯಾ ಹಿತಾಯ ಜಗತಾಂ ಹಾರ ಕುಂಡ ಮಿದಂ ಕೃತಂ ।
ಶಿವರುದ್ರ ಪುರೇ ಚೈವ ತತ್ಕಾಯೋಽಪರಿ ಸುವ್ರತೇ ॥೧೬೪॥

---

ನಿಂದ ಉತ್ತರ ಭಾಗದಲ್ಲಿ ಸ್ಥಾಪಿಸಲ್ಪಟ್ಟ ಶೈಲಜ, ಎಂಬ ಲಿಂಗವನ್ನೂ, ನನ್ನಿಂದಲೇ ಸ್ಥಾಪಿತವಾದ ಮಹಾಪ್ರಮಾಣ ಲಿಂಗವನ್ನೂ, ಪಶ್ಚಿಮ ಭಾಗದ ಪರ್ವತದಲ್ಲಿರುವ ಬ್ರಹ್ಮೇಶ್ವರ, ಮಲೇಶ್ವರ, ಎಂಬ ಲಿಂಗಗಳನ್ನೂ ನೋಡು. ಓ ಬ್ರಹ್ಮಸ್ವರೂಪಿಯಾದ ಶಿವನೇ, ನಿನ್ನಿಂದ ಈ ಮಂದಿರವು ಅಲಂಕರಿಸಲ್ಪಟ್ಟಿತು! ಎಂದು ಹೇಳಿ, ಆ ಮಂದಿರವನ್ನು ಸ್ಥಾಪಿಸಿದ್ದ ರಿಂದ ಅದಕ್ಕೆ ಅಲಂಗೃಹ, ಎಂದು ಹೆಸರು ಬಂದಿದೆ.

೧೬೧–೧೬೪. ಎಲೌ ತೀರ್ಥದ ಸ್ವರೂಪವನ್ನು ತಿಳಿದ ಪಾರ್ವತಿಯೇ, ಇಲ್ಲಿ ವ್ಯೋಮಲಿಂಗ ತಿರ್ಥವನ್ನು ನೋಡು. ಷಣ್ಮುಖನಿಂದ ಸ್ಥಾಪಿತ ವಾದ ಕದಂಬೇಶ್ವರ ಲಿಂಗವನ್ನು ನೋಡು. ನಂದಿಯೇ ಮೊದಲಾದ ವರಿಂದ ಸ್ಥಾಪಿಸಲ್ಪಟ್ಟ ಗೋಮಂಡಲೇಶ್ವರ, ಎಂಬ ಲಿಂಗವನ್ನೂ, ಇಂದ್ರಾದಿ ದೇವತೆಗಳಿಂದ ಸ್ಥಾಪಿಸಲ್ಪಟ್ಟ ಲಿಂಗಗಳನ್ನೂ ನೋಡು. ಶ್ರೀ ದೇವಕೊಳದ ಅಂಚಿನಲ್ಲಿ ಸೊಗಸಾಗಿರುವ ಸ್ಥಾನಗಳನ್ನೂ ನೋಡು, ಹಾಗೆಯೇ ಹಾರಪುರದಲ್ಲಿ ನಿನ್ನ ಹಾರವು ಕೆಳಗೆ ಬಿದ್ದಾಗ ನೀನು ಜಗತ್ತಿನ ಕ್ಷೇಮಕ್ಕಾಗಿ ಹಾರವನ್ನೂ ಓಲೆಗಳನ್ನೂ ಇಲ್ಲಿಯೂ, ಶಿವರುದ್ರಪುರ ದಲ್ಲಿಯೂ, ಈ ಹಾರಕುಂಡ ಲಿಂಗದ ವಿಗ್ರಹದ ಮೇಲುಭಾಗದಲ್ಲಿ ಮಾಡಿಸಿದೆ.

ತತ್ರ (ತವ) ಪಿತ್ರಾ ಸು(ತು)ಶೈಲೇನ ಸ್ಥಾಪಿತಂ ತ್ವಚಲೇಶ್ವರಂ ।
ಅಲಂಕೃತಂ ಮಯಾ ಬ್ರಹ್ಮ ಪುರಸ್ತಾನ್ಮುನಿಭಿಃ ಸಹ ॥೧೬೫॥
ಚಂಡಿಕೇಶ್ವರಕಂ ದೇವಿ ಚಂಡಿಕೇಶಾ ತವಾತ್ಮಜಾ ।
ಚಂಡಿಕಾ ನಿರ್ಮಿತಂ ಸ್ಥಾನ ಮಂಬಿಕಾ ತೀರ್ಥ ಮುತ್ತಮಂ॥೧೬೬॥
ರುಚಿಕೇಶ್ವರಕಂ ಚೈವ ಧಾರೈಷಾ ಕಪಿಲಾ ಶುಭಾ ।
ಏತೇಷು ದೇವಿ ಸ್ಥಾನೇಷು ತೀರ್ಥೇಷು ವಿವಿಧೇಷು ಚ ॥೧೬೭॥
ಪೂಜಯೇನ್ಮಾಂ ಸದಾ ಭಕ್ತ್ಯಾ ಮಯಾ ಸಾರ್ಧಂ ಪಿ ಮೋದತೇ ।
ಶ್ರೀಶೈಲೇ ಸಂ ತ್ಯಜೇದ್ದೇಹಂ ಬ್ರಾಹ್ಮಣೋ ದಗ್ಧ ಕಿಲ್ಬಿಷಃ ॥೧೬೮॥
ಮುಚ್ಯತೇ ನಾತ್ರ ಸಂದೇಹೋ ಹ್ಯವಿಮುಕ್ತೇ ಯಥಾ ಶುಭಂ ।
ಮಹಾಸ್ನಾನಂ ಚ ಯಃ ಕುರ್ಯಾತ್ ಘೃತೇನ ವಿಧಿನೈವ ತು ॥

---

೧೬೫-೧೬೭. ಅಲ್ಲಿ ನಿನ್ನ ತಂದೆಯಾದ ಹಿಮವಂತನಿಂದ ಸ್ಥಾಪಿಸಲ್ಪಟ್ಟ ಅಚಲೇಶ್ವರನನ್ನೂ, ಬ್ರಹ್ಮನೇ ಮೊದಲಾದ ದೇವತೆಗಳಿಂದಲೂ, ಋಷಿಗಳಿಂದಲೂ ಅಲಂಕರಿಸಲ್ಪಟ್ಟ ನನ್ನ ಲಿಂಗವನ್ನೂ ನೋಡು. ನಿನ್ನ ಮಗಳು ಚಂಡಿಕೇಶೆಯು. ಆ ಚಂಡಿಕೆಯಿಂದ ಸ್ಥಾಪಿಸಲ್ಪಟ್ಟ ಅಂಬಿಕಾ ತೀರ್ಥವು ಶ್ಲಾಘ್ಯವಾದುದು. ಈ ಮಂಗಳಕರವಾದ ಹೊಂಬಣ್ಣದ ಪ್ರವಾಹವನ್ನೂ ಮತ್ತು ಅದರ ಮೇಲಿರುವ ರುಚಿಕೇಶ್ವರ ಲಿಂಗವನ್ನೂ ನೋಡು. ಭಕ್ತರು ಇಂಥಾ ಅನೇಕ ಪವಿತ್ರಸ್ಥಾನಗಳಲ್ಲಿಯೂ ಮತ್ತು ಅನೇಕ ತೀರ್ಥಗಳಲ್ಲಿಯೂ, ನನ್ನನ್ನು ಸೇವಿಸಬೇಕು.

೧೬೮-೧೭೦. ಯಾವನು ನನ್ನನ್ನು ಭಕ್ತಿಯಿಂದ ಹೀಗೆ ಪೂಜಿಸುವನೋ ಅವನು ನನ್ನೊಡನೆಯೇ ಸುಖವಾಗಿರುವನು. ಬ್ರಾಹ್ಮಣನು ಈ ಶ್ರೀ ಶೈಲದಲ್ಲಿ ಮರಣ ಹೊಂದಿದರೆ ಸುಟ್ಟುಹೋದ ತನ್ನ ಸಮಸ್ತ ಪಾಪ ಉಳ್ಳವನಾಗಿ ಮೋಕ್ಷವನ್ನು ಹೊಂದುವುದರಲ್ಲಿ ಯಾವುದೊಂದು ಸಂದೇಹವೂ ಇಲ್ಲ. ಅವಿಮುಕ್ತ ಕ್ಷೇತ್ರದಲ್ಲಿ ಮಹಾ ಪುಣ್ಯಕರವಾದ ಸ್ನಾನವನ್ನು ಮಾಡಿ, ಶಾಸ್ತ್ರೋಕ್ತ ಕ್ರಮದಲ್ಲಿ ಹಸುವಿನ ಹಾಲು ಮೊಸರುಗಳಿಂದ ಯಾರು ಲಿಂಗವನ್ನು ಸ್ನಾನಮಾಡಿಸುತ್ತಾರೋ ಅವರು ಶಿವೈಕ್ಯವನ್ನು ಹೊಂದುವುದರಲ್ಲಿ ಯಾವ ಸಂದೇಹವೂ ಇಲ್ಲ. ಸ್ನಾನವು

ಸ ಯಾತಿ ಮಮ ಸಾಯುಜ್ಯಂ ಸ್ಥಾನೇ ಷ್ವೇತೇಷು ಸುವ್ರತೇ ।
ಸ್ನಾನಂ ಪಲ ಶತಂ ಜ್ಞೇಯಂ ಅಭ್ಯಂಗಂ ಪಂಚ ವಿಂಶತಿ ॥೧೭೦॥
ಪಲಾನಾಂ ದ್ವೇ ಸಹಸ್ರೇ ತು ಮಹಾಸ್ನಾನಂ ಪ್ರಕೀರ್ತಿತಂ ।
ಸ್ನಾಪ್ಯ ಲಿಂಗಂ ಮದೀಯಂ ತು ಗವ್ಯೇನೈವ ಘೃತೇನ ತು ॥೧೭೧॥
ವಿಶೋಧ್ಯ ಸರ್ವದ್ರವ್ಯೈಸ್ತು ವಾರಿಭಿ ರಭಿ ಷಿಂಚತಿ ।
ಸಂಮಾರ್ಜ್ಯ ಶತ ಯಜ್ಞಾನಾಂ ಸ್ನಾನೇನ ಪ್ರಯುತಂ ತಥಾ ॥೧೭೨॥
ಪೂಜಯಾ ಶತ ಸಾಹಸ್ರಂ ಅನಂತಂ ಗೀತ ವಾದಿನಾಂ ।
ಮಹಾಸ್ನಾನೇ ಪ್ರಸಕ್ತೇ ತು ಸ್ನಾನಮಷ್ಟಗುಣಂ ಸ್ಮೃತಂ ॥೧೭೩॥
ಜಲೇನ ಕೇವಲೇನೈವ ಗಂಧ ತೋಯೇನ ಭಕ್ತಿತಃ ।
ಅನುಲೇಪನಂ ತು ತತ್ಸರ್ವಂ ಪಂಶ ವಿಂಶತ್ಪಲೇನ ವೈ ॥೧೭೪॥

---

ನೂರು ಪಲನಾಣ್ಯ ದಾನಮಾಡಿದ ಫಲವುಳ್ಳದ್ದೆಂದೂ, ತುಪ್ಪದಿಂದ ಮಿಶ್ರವಾದ ಪಂಚಾಮೃತದಿಂದ ಸ್ನಾನಮಾಡಿಸುವುದು ಇಪ್ಪತ್ತೈದು ನಾಣ್ಯ ದಾನಮಾಡಿದ ಫಲವುಳ್ಳದ್ದೆಂದೂ, ತಿಳಿಯಬೇಕು.

೧೭೧–೧೭೩. ಮಹಾ ಸ್ನಾನವು ಎರಡು ಸಾವಿರ ನಾಣ್ಯಗಳನ್ನು ದಾನಮಾಡಿದಷ್ಟು ಪುಣ್ಯವುಳ್ಳದ್ದೆಂದೂ ಮತ್ತು ಯಾರು ನನ್ನ ಲಿಂಗವನ್ನು ಹಾಲು ಮೊಸರುಗಳಿಂದ ತೊಳೆದು ಪಂಚಾಮೃತ ಸ್ನಾನ ಮಾಡಿಸಿ, ನಿರ್ಮಲವಾದ ನೀರಿನಿಂದ ಅಭಿಷೇಕ ಮಾಡುವರೋ ಮತ್ತು ಅದನ್ನು ಒರಸಿ ಶುದ್ಧಮಾಡುವರೋ, ಅವರಿಗೆ ನೂರು ಯಾಗಗಳಲ್ಲಿ ಸ್ನಾನಮಾಡಿದಷ್ಟು ಫಲವು ಬರುವುದೆಂದು ತಿಳಿಯಬೇಕು. ಪೂಜೆಮಾಡಿದರೆ ಹತ್ತು ಸಾವಿರ ನಾಣ್ಯಗಳನ್ನು ಕೊಟ್ಟಷ್ಟು ಫಲವು ಬರುವುದೆಂದು ತಿಳಿಯಬೇಕು. ನನ್ನ ಗುಣಗಾನಮಾಡಿದರೆ ಅನಂತ ಫಲವು ಬರುವುದೆಂದೂ, ತಿಳಿಯಬೇಕು. ಮಹಾ ಸ್ನಾನ ಪ್ರಸಂಗವು ಬಂದು ಮಾಡಿದಾಗ ಆ ಸ್ನಾನವನ್ನು ಎಂಟರಷ್ಟು ಫಲವುಳ್ಳದ್ದೆಂದು ತಿಳಿಯಬೇಕು.

೧೭೪–೧೭೬. ಶುದ್ಧವಾದ ನೀರಿನಿಂದಾಗಲಿ, ಗಂಧಮಿಶ್ರವಾದ ನೀರಿನಿಂದಲಾಗಲಿ, ಭಕ್ತಿಯಿಂದ ಶಿವನ ಪೂಜೆಯನ್ನು ಮಾಡಬೇಕು.

ಶಮೀ ಪುಷ್ಪಂ ಚ ವಿಧಿನಾ ಬಿಲ್ವಪತ್ರಂ ಚ ಪಂಕಜಂ ।
ಅನ್ಯಾನ್ಯಪಿ ಚ ಪುಷ್ಪಾಣಿ ಬಿಲ್ವಪತ್ರಂ ನ ಸಂತ್ಯಜೇತ್ ॥೧೭೫॥
ಚತುರ್ದ್ರೋಣೈಃ ಮಹಾದೇವ ಮಷ್ಟದ್ರೋಣೈರಥಾಽಪಿ ವಾ ।
ದಶದ್ರೋಣೈಸ್ತು ನೈವೇದ್ಯ ಮಷ್ಟದ್ರೋಣೈರಥಾಪಿ ವಾ ॥೧೭೬॥
ಶತದ್ರೋಣ ಸಮಂ ಪುಣ್ಯ ಮಾಢಕೇಽಪಿ ವಿಧೀಯತೇ ।
ವಿತ್ತ ಹೀನಸ್ಯ ವಿಪ್ರಸ್ಯ ನಾಽತ್ರ ಕಾರ್ಯಾ ವಿಚಾರಣಾ ॥೧೭೭॥
ಭೇರೀ ಮೃದಂಗ ಮುರಜ ತಿಮಿರಾ ಪಟಹಾಽದಿಭಿಃ ।
ವಾದಿತ್ರೈ ರ್ವಿವಿಧೈಶ್ಚಾನ್ಯೈ ರ್ನಿನಾದೈ ರ್ವಿವಿಧೈರಪಿ ॥೧೭೮॥

---

ಇಪ್ಪತ್ತೈದು ನಾಣ್ಯಗಳನ್ನು ಸಮರ್ಪಿಸಿ, ಈ ಎಲ್ಲಾ ಲೇಪನ ಮುಂತಾದ ಪೂಜೆಯ ಅಂಗಗಳನ್ನು ನೆರವೇರಿಸಬೇಕು. ಶಾಸ್ತ್ರೋಕ್ತ ಕ್ರಮದಲ್ಲಿ ಬನ್ನಿಯ ಹೂವು, ಬಿಲ್ವಪತ್ರೆ, ಕಮಲ, ಬೇರೇ ಬಗೆಯ ಹುವ್ವುಗಳು, ಇವುಗಳನ್ನು ಸಮರ್ಪಣೆಮಾಡಬೇಕು. ಯಾವಾಗಲೂ ಬಿಲ್ವಪತ್ರೆಯಿಂದ ಪೂಜೆಮಾಡುವುದನ್ನು ಬಿಡಬಾರದು. ನಾಲ್ಕು ಬಳ್ಳಗಳ ಅಳತೆಯುಳ್ಳ ಅಥವಾ ಎಂಟು ಬಳ್ಳಗಳ ಅಳತೆಯುಳ್ಳ, ಅಥವಾ ಹತ್ತು ಬಳ್ಳಗಳ ಅಳತೆಯುಳ್ಳ, ಧಾನ್ಯಗಳನ್ನು ಹಾಕಿ, ನೈವೇದ್ಯವನ್ನು ಶಿವನಿಗೆ ಸಿದ್ಧಮಾಡಬೇಕು.

೧೭೭–೧೭೮. ಬೇಳೆಯನ್ನು ನೂರು ಬಳ್ಳಗಳಷ್ಟು ಕೊಟ್ಟರೂ ಬಹಳ ಪುಣ್ಯ ಬರುತ್ತದೆ. ದುಡ್ಡಿಲ್ಲದ ಬ್ರಾಹ್ಮಣನು ಯಥಾಶಕ್ತಿ ಇವುಗಳನ್ನು ಶಿವನ ಪ್ರೀತಿಗಾಗಿ ಕೊಟ್ಟರೂ, ವಿಶೇಷ ಪುಣ್ಯ ಬರುವುದರಲ್ಲಿ ಸಂದೇಹವಿಲ್ಲ. ನಗಾರಿ, ಮೃದಂಗ, ತಬಲ, ತಮಟೆ, ಮುಂತಾದ ವಾದ್ಯಗಳಿಂದಲೂ, ಇನ್ನೂ ಬೇರೆ ಬೇರೇ ಬಗೆಯ ವಾದ್ಯಗಳಿಂದಲೂ, ನಾದಮಾಡಿಸುತ್ತಾ ಶಿವನ ನಾಮ ಕೀರ್ತನೆ, ಭಜನೆಗಳಿಂದ ಪೂಜೆಮಾಡಬೇಕು. ಯಾವನು ರಾತ್ರಿಯಲ್ಲಿ ಜಾಗರಣೆ ಮಾಡಿ, ಶಾಸ್ತ್ರೋಕ್ತ ಕ್ರಮದಲ್ಲಿ ಪೂಜಿಸುವನೋ ಅವನು ಕೊನೆಯಲ್ಲಿ ತನ್ನ ಸೇವಕರು,

ಜಾಗರಂ ಕಾರಯೇದ್ಯಸ್ತು ಪ್ರಾರ್ಥಯೇಚ್ಚ ಯಥಾಕ್ರಮಂ ।
ಸಭೃತ್ಯ ಪುತ್ರ ದಾರೈಶ್ಚ ತಥಾ ಸಂಬಂಧಿ ಬಾಂಧವೈಃ ॥೧೭೯॥

ಸಾರ್ಧಂ ಪ್ರದಕ್ಷಿಣಂ ಕೃತ್ವಾ ಪಾರ್ಥಯೇ ಲ್ಲಿಂಗ ಮುತ್ತಮಂ ।
ದ್ರವ್ಯಹೀನಂ ಕ್ರಿಯಾಹೀನಂ ಶ್ರದ್ಧಾಹೀನಂ ಸುರೇಶ್ವರ ॥೧೮೦॥

ಕೃತಂ ವಾ ನ ಕೃತಂ ವಾಽಪಿ ಕ್ಷಂತು ಮರ್ಹಸಿ ಶಂಕರ ।
ಇತ್ಯುಕ್ತ್ವಾ ವೈ ಜಪೇದ್ರುದ್ರಂ ತ್ವರಿತಂ ಶಾಂತಿ ಮೇವ ಚ ॥೧೮೧॥

ಜಪಿತ್ವೈಷಂ ಮಹಾಬೀಜಂ ತಥಾ ಪಂಚಾಕ್ಷರಸ್ಯ ವೈ ।
ಸ ಏವಂ ಸರ್ವ ತೀರ್ಥೇಷು ಸರ್ವಯಜ್ಞೇಷು ಯತ್ಫಲಂ ॥೧೮೨॥

ತತ್ಫಲಂ ಸಮ ವಾಪ್ನೋತಿ ವಾರಾಣಸ್ಯಾಂ ಯಥಾ ಮೃತಃ ।
ತಥೈವ ಮಮ ಸಾಯುಜ್ಯಂ ಲಭತೇ ನಾತ್ರ ಸಂಶಯಃ ॥೧೮೩॥

---

ಮಕ್ಕಳು, ಹೆಂಡಿತಿ, ಸಂಬಂಧಿಗಳು, ಬಂಧುಗಳು ಇವರೊಂದಿಗೆ ಜಾಗರಣೆ ಯನ್ನುವಂದಿ ಶಿವನಿಗೆ ಪ್ರಾರ್ಥನೆಯನ್ನು ಸಲ್ಲಿಸಬೇಕು.

೧೮೦–೧೮೩. ಹಿಂದೆ ಹೇಳಿದ ಸಮಸ್ತರೊಂದಿಗೆ ಶಿವನ ಪ್ರದಕ್ಷಿಣೆ ಯನ್ನು ಮಾಡಿ, ಶ್ರೇಷ್ಠವಾದ ಶಿವಲಿಂಗದಲ್ಲಿ ಆವಾಹಿತನಾಗಿರುವ ದೇವ ನನ್ನು ಹೀಗೆ ಪ್ರಾರ್ಥಿಸಬೇಕು. ಓ ಸ್ವಾಮಿಯೇ, ನಿನ್ನ ಪೂಜೆಗೆ ಸಾಕಾ ದಷ್ಟು ಪದಾರ್ಥಗಳನ್ನು ನಾನು ಸಮರ್ಪಣೆ ಮಾಡಿಲ್ಲವು. ಕರ್ತವ್ಯ ಲೋಪವುಳ್ಳ, ಶುದ್ಧಿಯಿಲ್ಲದಿರುವ, ನನ್ನ, ಹಿಂದೆ ಮಾಡಿದ ಮತ್ತು ಮುಂದೆ ಮಾಡುವ ಮತ್ತು ಈಗಿನ ಪಾಪಗಳನ್ನೆಲ್ಲವನ್ನೂ ದಯವಿಟ್ಟು ಕ್ಷಮಿಸು, ಎಂದು ಪ್ರಾರ್ಥಿಸಬೇಕು. ಹೀಗೆ ಹೇಳಿ ಶಿವನ ಮಂತ್ರ ವನ್ನು ಜಪಿಸಿದವನು ಹಾಗೆಯೇ ಶಿವ ಮಹಾಮಂತ್ರದ ಬೀಜಾಕ್ಷರವನ್ನೂ, ಶ್ರದ್ಧೆಯಿಂದ ಜಪಿಸುತ್ತಾ ಆರಾಧನೆಯನ್ನು ನಡೆಸಿದವನು, ಎಲ್ಲಾ ತೀರ್ಥಯಾತ್ರೆ, ಎಲ್ಲ ಯಾಗಗಳು, ಕಾಶಿಯಲ್ಲಿ ಮರಣ ಮುಂತಾದ್ದ ರಿಂದ ಯಾವ ಫಲವನ್ನು ಪಡೆವನೋ ಅದೇ ಫಲವನ್ನು ಹೊಂದುವನು. ಹಾಗೆಯೇ ಅವನು ಶಿವೈಕ್ಯನಾಗುವುದರಲ್ಲಿಯೂ ಸಂದೇಹವಿಲ್ಲ.

ಮತ್ಪ್ರಿಯಾರ್ಥ ಮಿದಂ ಕಾರ್ಯಂ ಮದ್ಭಕ್ತೈರ್ವಿಧಿ ಪೂರ್ವಕಂ ।
ಯೇ ನ ಕುರ್ವಂತಿ ತೇ ಭಕ್ತಾ ನ ಭವಂತಿ ನ ಸಂಶಯಃ ॥೧೮೪॥

॥ ಸೂತ ಉವಾಚ ॥

ನಿಶಮ್ಯ ವಚನಂ ದೇವೀ ಗತ್ವಾ ವಾರಾಣಸೀಂ ಪುರೀಂ ।
ಅವಿಮುಕ್ತೇಶ್ವರಂ ಲಿಂಗಂ ಪಯಸಾ ಚ ಘೃತೇನ ಚ ॥೧೮೫॥

ಅರ್ಚಯಾಮಾಸ ದೇವೇಶಂ ರುದ್ರಂ ಭುವನ ನಾಯಕಂ ।
ಅವಿಮುಕ್ತೇ ಚ ತಪಸಾ ಮಂದರಸ್ಯ ಮಹಾತ್ಮನಃ ॥೧೮೬॥

ಕಲ್ಪಯಾಮಾಸ ವೈ ಕ್ಷೇತ್ರಂ ಮಂದರೇ ಚಾರು ಕಂದರೇ ।
ತತ್ರಾಂಧಕ ಮಹಾದೈತ್ಯಂ ಹಿರಣ್ಯಾಕ್ಷಸುತಂ ಪ್ರಭುಃ ॥೧೮೭॥

ಅನುಗೃಹ್ಯ ಗಣತ್ವಂ ಚ ಪ್ರಾಪಯಾಮಾಸ ಲೀಲಯಾ ।
ಏತದ್ವಃ ಕಥಿತಂ ಸರ್ವಂ ತಥಾ ಸರ್ವಸ್ವಮಾದರಾತ್ ॥೧೮೮॥

---

೧೮೪. ಈ ಕೆಲಸಗಳೆಲ್ಲವನ್ನೂ ಶಿವನ ಪ್ರೀತ್ಯರ್ಥವಾಗಿ ನನ್ನ ಭಕ್ತರು ಭಕ್ತಿಯಿಂದ ನೆರವೇರಿಸಬೇಕು. ಯಾರು ಹೀಗೆ ನೆಡೆಸುವುದಿಲ್ಲವೋ ಅವರು ನನ್ನ ಭಕ್ತರೇ ಅಲ್ಲವೆಂದು ತಿಳಿಯಬೇಕು.

೧೮೫–೧೮೬. ಸೂತನು ಹೇಳಿದನು:—ಶಿವನ ಈ ಮಾತನ್ನು ಕೇಳಿ ಪಾರ್ವತೀದೇವಿಯು ಕಾಶೀ ಪಟ್ಟಣಕ್ಕೆ ಹೋಗಿ, ವಿಶ್ವೇಶ್ವರನ ಲಿಂಗವನ್ನು ಹಾಲು ಮತ್ತು ತುಪ್ಪಗಳಿಂದಲೂ, ಸ್ನಾನಮಾಡಿಸಿ, ಲೋಕಕ್ಕೆಲ್ಲಕ್ಕೂ ಅಧಿಪತಿಯಾದ ದೇವ ದೇವನಾದ ಶಿವನನ್ನು ಪೂಜಿಸಿದಳು. ಮತ್ತು ಕಾಶೀಕ್ಷೇತ್ರದಲ್ಲಿ ಶ್ರೇಷ್ಠವಾದ ಮಂದರ ಪರ್ವತದ ಒಂದು ಭಾಗದಲ್ಲಿ ಕ್ಷೇತ್ರವನ್ನು ಕಟ್ಟಿಸಿದಳು.

೧೮೭–೧೮೯. ಪಾರ್ವತಿಯು ಮನೋಹರವಾದ ಗುಹೆಗಳುಳ್ಳ, ಮಂದರ ಪರ್ವತದ ಬುಡದಲ್ಲಿ ಶಿವಕ್ಷೇತ್ರವನ್ನು ನಿರ್ಮಿಸಿದಳು. ಅಲ್ಲಿ ಶಿವನು ಹಿರಣ್ಯಾಕ್ಷನ ಮಗನೂ, ದೊಡ್ಡ ರಾಕ್ಷಸನೂ ಆದ, ಅಂಧಕಾಸುರನಿಗೆ ಅನಾಯಾಸವಾಗಿಯೇ ಅನುಗ್ರಹಮಾಡಿ, ಅವನನ್ನು ಗಣಗಳ

ಯಃ ಪಠೇಚ್ಛೃಣುಯಾದ್ವಾಽಪಿ ಕ್ಷೇತ್ರ ಮಾಹಾತ್ಮ್ಯ ಮುತ್ತಮಂ ।
ಸರ್ವ ಕ್ಷೇತ್ರೇಷು ಯತ್ಪುಣ್ಯಂ ತತ್ಸರ್ವಂ ಸಹಸಾ ಲಭೇತ್ ॥೧೮೯॥
ಶ್ರಾವಯೇದ್ವಾ ದ್ವಿಜಾನ್ ಸರ್ವಾನ್ ಕೃತಶೌಚಾನ್ ಜಿತೇಂದ್ರಿಯಾನ್ ।
ಸ ಏವ ಸರ್ವಯಜ್ಞಸ್ಯ ಫಲಂ ಪ್ರಾಪ್ನೋತಿ ಮಾನವಃ ॥೧೯೦॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಕಾಶೀ, ಶ್ರೀಶೈಲಮಹಿಮ ವಿವರಣಂ ನಾಮ ದ್ವಿನವತಿತಮೋಽಧ್ಯಾಯಃ

---

ಲ್ಲೊಬ್ಬನನ್ನಾಗಿ ಮಾಡಿದನು. ಹೀಗೆ ನೀವು ಭಕ್ತಿಯಿಂದ ಕೇಳಿದ್ದರಿಂದ ಈ ಕಥೆಯ ಸಾರವನ್ನು ಹೇಳಿದ್ದೇನೆ. ಯಾವನು ಈ ಶ್ರೇಷ್ಠ ಕ್ಷೇತ್ರದ ಮಹಿಮೆಯನ್ನು ಓದುವನೋ ಅಥವಾ ಕೇಳುವನೋ, ಅವನು ಎಲ್ಲಾ ಕ್ಷೇತ್ರಯಾತ್ರೆಗಳಿಂದ ಬರುವ ಪುಣ್ಯವನ್ನು ಇಲ್ಲಿಯೇ ತತ್‌ಕ್ಷಣದಲ್ಲಿಯೇ ಪಡೆಯುವನು.

೧೯೦. ಅಥವಾ ಪರಿಶುದ್ಧರೂ, ಜಿತೇಂದ್ರಿಯರೂ ಆದ ಬ್ರಾಹ್ಮಣರಿಗೆ ಇದನ್ನು ಯಾವನು ಹೇಳುವನೋ ಅವನು ಎಲ್ಲಾ ಯಾಗಮಾಡಿದ ಫಲವನ್ನೂ ಅನುಭವಿಸುವನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ "ಕಾಶೀಮತ್ತು ಶ್ರೀಶೈಲಗಳ ಮಹಿಮೆಯ ವಿವರಣೆ" ಎಂಬ ತೊಂಬತ್ತೆರಡನೆಯ ಅಧ್ಯಾಯವು ಮುಗಿದುದು.

# ಅಥ ಲಿಂಮುಗಹಾಪುರಾಣೇ ಪೂರ್ವಭಾಗೇ
## ತ್ರಿನವತಿತಮೋಽಧ್ಯಾಯಃ

॥ ಋುಷಯು ಊಚುಃ ॥

ಅಂಧಕೋ ನಾಮ ದೈತ್ಯೇಂದ್ರೋ ಮಂದರೇ ಚಾರುಕಂದರೇ ।
ದಮಿತಸ್ತು ಕಥಂ ಲೇಭೇ ಗಾಣಪತ್ಯಂ ಮಹೇಶ್ವರಾತ್ ॥ ೧ ॥
ವಕ್ತು ಮರ್ಹಸಿ ಚಾಽಸ್ಮಾಕಂ ಯಥಾವೃತ್ತಂ ಯಥಾ ಶ್ರುತಂ ।

॥ ಸೂತ ಉವಾಚ ॥

ಅಂಧಕಾಽನುಗ್ರಹಂ ಚೈವ ಮಂದರೇ ಶೋಷಣಂ ತಥಾ ॥ ೨ ॥
ವರಲಾಭ ಮಶೇಷಂ ಚ ಪ್ರವದಾಮಿ ಸಮಾಸತಃ ।
ಹಿರಣ್ಯಾಕ್ಷಸ್ಯ ತನಯೋ ಹಿರಣ್ಯ ನಯನೋಪಮಃ ॥ ೩ ॥
ಪುರಾಽಂಧಕ ಇತಿಖ್ಯಾತ ಸ್ತಪಸಾ ಲಬ್ಧ ವಿಕ್ರಮಃ ।
ಪ್ರಸಾದಾ ದ್ಬ್ರಹ್ಮಣಃ ಸಾಕ್ಷಾ ದವಧ್ಯತ್ವ ಮವಾಪ್ಯ ಚ ॥ ೪ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತುಮೂರನೆಯ ಅಧ್ಯಾಯವು.

೧-೩. ಋುಷಿಗಳು ಹೇಳಿದರು:—ಮನೋಹರವಾದ ಗುಹೆಯುಳ್ಳ, ಮಂದರ ಪರ್ವತದಲ್ಲಿ ರಾಕ್ಷಸ ಶ್ರೇಷ್ಠನಾದ ಅಂಧಕಾಸುರನು ಶಿವನಿಂದ ನಾಶಮಾಡಲ್ಪಟ್ಟು, ಅವನು ಮಹೇಶ್ವರನ ಗಣಗಳಲ್ಲೊಬ್ಬನಾದ ಬಗೆಯನ್ನು ತಾವು ಕೇಳಿರುವ ಮತ್ತು ಅದು ವಾಸ್ತವವಾಗಿ ನಡೆದಿರುವ ರೀತಿಯಲ್ಲಿ ನಮಗೆ ತಾವು ದಯವಿಟ್ಟು ತಿಳಿಸಬೇಕು.

೪-೬. ಸೂತನು ಹೇಳಿದನು. ಹಿಂದೆ ಅಂಧಕ, ಎಂಬ ರಾಕ್ಷಸನು ಪ್ರಸಿದ್ಧನಾಗಿ ತಪಸ್ಸಿನಿಂದ ಹೊಂದಿದ ಪರಾಕ್ರಮವುಳ್ಳವನಾಗಿ,ಬ್ರಹ್ಮನ ವರದ ಮಹಿಮೆಯಿಂದ ಸಾಮಾನ್ಯವಾಗಿ ಯಾರಿಂದಲೂ ಕೊಲ್ಲಲ್ಪಡದೇ ಇರುವಿಕೆಯನ್ನೂ, ಸಂಪಾದಿಸಿದನು. ಇವನು ಮೂರು ಲೋಕದಲ್ಲಿರುವ

ತ್ರೈಲೋಕ್ಯ ಮಖಿಲಂ ಭುಕ್ತ್ವಾ ಜಿತ್ವಾ ಚೇಂದ್ರ ಪುರಂ ಪುರಾ ।
ಲೀಲಯಾ ಚಾಽಪ್ರಯತ್ನೇನ ತ್ರಾಸಯಾಮಾಸ ವಾಸವಂ ॥ ೫ ॥

ಬಾಧಿತಾ ಸ್ತಾಡಿತಾ ಬದ್ಧಾ ಪಾತಿತಾಸ್ತೇನ ತೇ ಸುರಾಃ ।
ವಿವಿಶು ರ್ಮಂದರಂ ಭೀತಾ ನಾರಾಯಣ ಪುರೋಗಮಾಃ ॥ ೬ ॥

ಏವಂ ಸಂಪೀಡ್ಯ ವೈ ದೇವಾ ನಂಧಕೋಽಪಿ ಮಹಾಸುರಃ ।
ಯದೃ ಚ್ಛಯಾ ಗಿರಿಂ ಪ್ರಾಪ್ತೋ ಮಂದರಂ ಚಾರು ಕಂದರಂ ॥ ೭ ॥

ತತಸ್ತೇ ಸಮಸ್ತಾಃ ಸುರೇಂದ್ರಾಃ ಸಸಾಧ್ಯಾಃ ।
ಸುರೇಶಂ ಮಹೇಶಂ ಪುರೇ ತ್ಯಾಹು ರೇವಂ ॥
ದೃತಂ ಚಾಽಲ್ಪವೀರ್ಯ ಪ್ರಭಿನ್ನಾಂಗಭಿನ್ನಾ ।
ವಯಂ ದೈತ್ಯರಾಜಸ್ಯ ಶಸ್ತ್ರೈರ್ನಿಕೃತ್ತಾಃ ॥ ೮ ॥

---

ವಸ್ತುಗಳನ್ನೂ ಕೊಳ್ಳೆ, ಲೂಟಿಗಳಿಂದ ತಂದು ಅನುಭವಿಸುತ್ತಾ ಇಂದ್ರನ ಪಟ್ಟಣವಾದ ಅಮರಾವತಿಯನ್ನೂ ಜಯಿಸಿದನು. ಸ್ವಲ್ಪವೂ ಕಷ್ಟವಿಲ್ಲದೆ ಇಂದ್ರನನ್ನೂ ಹೆದರಿಸಿದನು. ಅವನಿಂದ ದೇವತೆಗಳು ಕಾಡಿಸಲ್ಪಡುತ್ತಾ, ಹೊಡೆತಗಳನ್ನು ಪಡೆದು ಶರೆಸಿಕ್ಕಿಬಿದ್ದರು. ನಾರಾಯಣನನ್ನು ಮುಂದು ಮಾಡಿಕೊಂಡು ಭಯಗೊಂಡು ಅವರೆಲ್ಲರೂ ಮಂದರ ಪರ್ವತದ ಗುಹೆಯನ್ನು ಪ್ರವೇಶಿಸಿದರು.

೭-೯. ಹೀಗೆ ದೇವತೆಗಳನ್ನು ಹಿಂಸಿಸಿ, ದೊಡ್ಡ ರಾಕ್ಷಸನಾದ ಅಂಧಕಾಸುರನೂ ಕೂಡ ಮನೋಹರವಾದ ಗುಹೆಗಳುಳ್ಳ ಮಂದರ ಪರ್ವತಕ್ಕೆ ತಾನೂ ಸ್ವೇಚ್ಛೆಯಾಗಿ ಬಂದು ಸೇರಿದನು. ಅನಂತರದಲ್ಲಿ ದೇವಶ್ರೇಷ್ಠರೂ, ಸಾಧ್ಯರೂ, ಎಲ್ಲರೂ ದೇವತೆಗಳಿಗೆ ಒಡೆಯನಾದ ಮಹೇಶ್ವರನನ್ನು ಕುರಿತು ಹೀಗೆ ಬಿನ್ನೈಸಿದರು. ಓ ಸ್ವಾಮಿಯೇ, ನಾವು ಅಲ್ಪ ಶಕ್ತಿಯುಳ್ಳವರಾದುದರಿಂದ (ರಾಕ್ಷಸಾಧಿಪತಿಯಾದ ಅಂಧಕಾಸುರನಿಂದ) ಮುರಿದುಹೋಗಿರುವ ಅವಯವವುಳ್ಳವರಾಗಿ, ಅವನ

ಇತೀದ ಮಖಿಲಂ ಶ್ರುತ್ವಾ ದೈತ್ಯಾಗನು ಮನೌ ಪನುಂ ।
ಗಣೇಶ್ವರೈಶ್ಚ ಭಗವಾ ನಂಧಕಾಭಿ ಮುಖಂ ಯಯೌ ॥ ೯ ॥

ತತ್ರೇಂದ್ರ ಪದ್ಮೋದ್ಭವ ವಿಷ್ಣುಮುಖ್ಯಾಃ ।
ಸುರೇಶ್ವರಾ ವಿಪ್ರ ವರಾಶ್ಚ ಸರ್ವೇ ॥
ಜಯೇತಿ ವಾಚಾ ಭಗವಂತ ಮೂಚುಃ ।
ಕಿರೀಟ ಬದ್ಧಾಂಜಲಯಃ ಸಮಂತಾತ್ ॥೧೦॥

ಅಥಾಶೇಷ ಸುರಾಂ ಸ್ತಸ್ಯ ಕೋಟಿ ಕೋಟಿ ಶತೈಸ್ತತಃ ।
ಭಸ್ಮೀಕೃತ್ಯ ಮಹಾದೇವೋ ನಿರ್ಬಿಭೇದಾಂಧಕಂ ತದಾ ॥೧೧॥

ಶೂಲೇನ ಶೂಲಿನಾ ಪ್ರೋತಂ ದಗ್ಧಕಲ್ಮಷ ಕಂಚುಕಂ ।
ದೃಷ್ಟ್ವಾsಂಧಕಂ ನನಾದೇಶಂ ಪ್ರಣಮ್ಯ ಸ ಪಿತಾಮಹಃ ॥೧೨॥

ತನ್ನಾದ ಶ್ರವಣಾ ನ್ನೇದು ರ್ದೇವಾ ದೇವಂ ಪ್ರಣಮ್ಯ ತಂ ।
ನನೃತುಃ ಮುನಯಃ ಸರ್ವೇ ಮುಮುದು ರ್ಗಣಪುಂಗವಾಃ ॥೧೩॥

---

ಶಸ್ತ್ರಗಳಿಂದ ಬಲವಾಗಿ ಏಟು ತಿಂದಿದ್ದೇವೆ. ಎಂದು ವಿಜ್ಞಾಪಿಸಲು, ಈ ವಿಚಾರಗಳೆಲ್ಲವನ್ನೂ ಕೇಳಿ, ಪೂಜ್ಯನಾದ ಶಿವನು ಗಣಾಧಿಪತಿಗಳೊಡನೆ, ಅಂಧಕಾಸುರನ ಎದುರಾಗಿ ಹೋದನು.

೧೦–೧೨. ಅಲ್ಲಿ. ಇಂದ್ರ, ಬ್ರಹ್ಮ, ವಿಷ್ಣುವೇ ಮೊದಲಾದ ದೇವತೆಗಳು ಮತ್ತು ಎಲ್ಲಾ ಬ್ರಾಹ್ಮಣ ಶ್ರೇಷ್ಠರೂ, ತಂತಮ್ಮ ಕಿರೀಟದಮೇಲೆ ಕೈಮುಗಿದುಕೊಂಡು ಎಲ್ಲಾ ಕಡೆಯಲ್ಲಿಯೂ. "ಭಗವಂತನಾದ ಶಿವನಿಗೆ ಜಯವಾಗಲಿ" ಎಂದು ಜಯಘೋಷ ಮಾಡಿದರು, ಅನಂತರದಲ್ಲಿ ಈಶ್ವರನು ಅಂಧಕಾಸುರನಿಗೆ ಸಂಬಂಧಪಟ್ಟ ಕೋಟ್ಯಾಂತರ ರಾಕ್ಷಸರೆಲ್ಲರನ್ನೂ ಒಂದು ಕ್ಷಣದಲ್ಲಿಯೇ ನಾಶಮಾಡಿ, ಅಂಧಕಾಸುರನನ್ನು ಸೀಳಿಹಾಕಿದನು. ಶಿವನ ಶೂಲಕ್ಕೆ ಸಿಕ್ಕಿಹಾಕಿಕೊಂಡುದರಿಂದ ಸುಡಲ್ಪಟ್ಟ ಪಾಪಗಳೆಂಬ ಕೊಳಕಾದ ಅಂಗಿ (ಕೋಶ) ಗಳುಳ್ಳ ಅಂಧಕನನ್ನು ನೋಡಿ, ಬ್ರಹ್ಮನು ಶಿವನನ್ನು ನಮಸ್ಕರಿಸಿ, ಅವನ ಮುಂದೆ ಹರ್ಷಧ್ವನಿಗೈದನು.

೧೩–೧೫. ಬ್ರಹ್ಮನ ಹರ್ಷಧ್ವನಿಯನ್ನು ಕೇಳಿ ದೇವತೆಗಳೂ ಶಿವನಿಗೆ ನಮಸ್ಕಾರ ಮಾಡಿ, ಹರ್ಷಧ್ವನಿಗೈದರು. ಎಲ್ಲಾ ಋಷಿಗಳೂ

ಸಸೃಜುಃ ಪುಷ್ಪ ವರ್ಷಾಣಿ ದೇವಾಃ ಶಂಭೋ ಸ್ತದೋಪರಿ ।
ತ್ರೈಲೋಕ್ಯ ಮಖಿಲಂ ಹರ್ಷಾನ್ನನಂದ ಚ ನನಾದ ಚ ॥೧೪॥

ದಗ್ಧೋಽಗ್ನಿನಾ ಚ ಶೂಲೇನ ಪ್ರೋತಃ ಪ್ರೇತ ಇವಾಽಂಧಕಃ ।
ಸಾತ್ವಿಕಂ ಭಾವ ಮಾಸ್ಥಾಯ ಚಿಂತಯಾಮಾಸ ಚೇತಸಾ ॥೧೫॥

ಜನ್ಮಾಂತರೇಽಪಿ ದೇವೇನ ದಗ್ಧೋ ಯಸ್ಮಾಚ್ಛಿವೇನ ವೈ ।
ಆರಾಧಿತೋ ಮಯಾ ಶಂಭುಃ ಪುರಾ ಸಾಕ್ಷಾನ್ಮಹೇಶ್ವರಃ ॥೧೬॥

ತಸ್ಮಾದೇತನ್ಮಯಾ ಲಬ್ಧಂ ಅನ್ಯಥಾ ನೋಪಪದ್ಯತೇ ।
ಯಃ ಸ್ಮರೇನ್ಮನಸಾ ರುದ್ರಂ ಪ್ರಾಣಾಂತೇ ಸಕೃದೇವ ವಾ ॥೧೭॥

ಸ ಯಾತಿ ಶಿವಸಾಯುಜ್ಯಂ ಕಿಂಪುನ ರ್ಬಹುಶಃ ಸ್ಮರನ್ ।
ಬ್ರಹ್ಮಾ ಚ ಭಗವಾನ್ವಿಷ್ಣುಃ ಸರ್ವೇ ದೇವಾಃ ಸ ವಾಸವಾಃ ॥೧೮॥

---

ನರ್ತನಮಾಡಿದರು. ಎಲ್ಲಾ ಗಣಾಧಿಪತಿಗಳೂ ಹರ್ಷದಿಂದ ಜಯಧ್ವನಿಗೈದರು. ದೇವತೆಗಳು ಆಗ ಶಿವನ ಮೇಲೆ ಹೂಮಳೆಯನ್ನು ಕರೆದರು. ಮೂರು ಲೋಕವೆಲ್ಲವೂ ಸಂತೋಷದಿಂದ ಆನಂದವನ್ನು ಸೂಚಿಸುತ್ತಾ ಹರ್ಷಧ್ವನಿಗೈದಿತು. ಶಿವನ ಶೂಲದ ಬೆಂಕಿಯಿಂದ ಚುಚ್ಚಿ ಸುಡಲ್ಪಟ್ಟ, ಅಂಧಕಾಸುರನು ಪ್ರೇತಸ್ವರೂಪವನ್ನು ಕಳೆದುಕೊಂಡು ಸಾತ್ವಿಕವಾದ ಮನಸ್ಸುಳ್ಳವನಾಗಿ ಹೀಗೆ ಯೋಚನೆಮಾಡತೊಡಗಿದನು.

೧೬–೧೮. ಹಿಂದಿನ ಜನ್ಮದಲ್ಲೂ ನಾನು ಶಿವನ ಪರಾಕ್ರಮ ಜ್ವಾಲೆಯಿಂದ ಸುಡಲ್ಪಟ್ಟವನಾಗಿ ಅದೇ ಪರಮೇಶ್ವರನನ್ನೇ ಸಾಕ್ಷಾತ್ತಾಗಿ ಪೂಜಿಸಿದೆನು. ಆದ್ದರಿಂದಲೇ ಇಂಥಾ ಸ್ವರೂಪವು ಈಗ ನನಗೆ ಪ್ರಾಪ್ತವಾಯಿತು. ಹಾಗಲ್ಲದೇ ಬೇರೇ ವಿಧವಾಗಲ್ಲವು. ಯಾವನು ಪ್ರಾಣ ಹೋಗುವ ವೇಳೆಯಲ್ಲಿ ಮನಸ್ಸಿನಿಂದ ಒಂದಾವೃತ್ತಿಯಾದರೂ ಶಿವನನ್ನು ಸ್ಮರಣೆಮಾಡುವನೋ ಅವನು ಶಿವೈಕ್ಯವನ್ನೇ ಪಡೆಯುವವನಾಗುವನು. ಹೀಗಿರುವಾಗ ಅನೇಕಾವೃತ್ತಿ ಅವನ ಸ್ಮರಣೆಯನ್ನು ಮಾಡಿದರೆ ಹೇಳತಕ್ಕದ್ದೇನು? ಬ್ರಹ್ಮ, ಪೂಜ್ಯನಾದ ವಿಷ್ಣು, ಇಂದ್ರನೇ ಮೊದಲಾದ ಸಮಸ್ತ ದೇವತೆಗಳೂ, ಅವನನ್ನೇ ಮೊರೆಹೊಕ್ಕಿದ್ದಾರೆ.

ಶರಣಂ ಪ್ರಾಪ್ಯ ತಿಷ್ಠಂತಿ ತಮೇವ ಶರಣಂ ವ್ರಜೇತ್ ।
ಏವಂ ಸಂಚಿಂತ್ಯ ತುಷ್ಟಾತ್ಮಾ ಸೋಽಂಧಕ ಶ್ಚಾಽಂಧಕಾರ್ದನಂ॥೧೯॥

ಸಗಣಂ ಶಿವ ಮೀಶಾನ ಮಸ್ತೌತ್ಪುಣ್ಯ ಗೌ ರವಾತ್ ।
ಪ್ರಾರ್ಥಿತಸ್ತೇನ ಭಗವಾನ್ ಪರಮಾರ್ತಿ ಹರೋ ಹರಃ ॥೨೦॥

ಹಿರಣ್ಯ ನೇತ್ರತನಯಂ ಶೂಲಾಗ್ರಸ್ಥಂ ಸುರೇಶ್ವರಃ ।
ಪ್ರೋವಾಚ ದಾನವಂ ಪ್ರೇಕ್ಷ್ಯ ಘೃಣಯಾ ನೀಲ ಲೋಹಿತಃ ॥೨೧॥

ತುಷ್ಟೋಽಸ್ಮಿ ವತ್ಸ ಭದ್ರಂ ತೇ ಕಾಮಂ ಕಿಂ ಕರವಾಣಿ ತೇ ।
ವರಾ ನ್ವರಯ ದೈತ್ಯೇಂದ್ರ ವರದೋಽಹಂ ತವಾಽಂಧಕ ॥೨೨॥

ಶ್ರುತ್ವಾ ವಾಕ್ಯಂ ತದಾ ಶಂಭೋರ್ಹಿರಣ್ಯ ನಯನಾತ್ಮಜಃ ।
ಹರ್ಷಗದ್ಗದಯಾ ವಾಚಾ ಪ್ರೋವಾ ಚೇದಂ ಮಹೇಶ್ವರಂ ॥೨೩॥

---

೧೯–೨೨. ಹೀಗೆ ಎಲ್ಲರೂ ಶಿವನನ್ನೇ ಶರಣು ಹೋಗುತ್ತಾರೆ. ಆದ್ದರಿಂದ ಅವನೇ ಶರಣಾಗತರಕ್ಷಕನು. ಹೀಗೆ ಆಲೋಚಿಸಿ ಸಂತೋಷ ದಿಂದ ಆ ಅಂಧಕಾಸುರನು ತನ್ನನ್ನೇ ಕೊಂದ, ತನ್ನ ರಾಕ್ಷಸತ್ವವನ್ನು ನಾಶ ಮಾಡಿದ ಶಿವನನ್ನು ಗಣಾಧಿಪತಿಗಳೊಡನೆ ಕೂಡಿರುವುದನ್ನು ನೋಡಿ, ಪುಣ್ಯ ವಿಶೇಷದಿಂದ ಹೀಗೆ ಸ್ತೋತ್ರ ಮಾಡಿದನು. ಅವನಿಂದ ಪ್ರಾರ್ಥಿ ಸಲ್ಪಟ್ಟ ಪೂಜ್ಯನೂ, ಎಂಥಾ ಕಷ್ಟವನ್ನೂ ಹಾಳುಮಾಡಬಲ್ಲವನೂ, ಆದ ಶಿವನು, ಹಿರಣ್ಯಾಕ್ಷನ ಮಗನಾದ, ಶೂಲದಿಂದ ಚುಚ್ಚಿ ಸುಡ ಲ್ಪಟ್ಟ ತಾಮಸರಾಕ್ಷಸ ಸ್ವಭಾವವುಳ್ಳ, ಅಂಧಕಾಸುರನನ್ನು ಕುರಿತು ಬಹಳ ಕರುಣೆಯಿಂದ ಹೀಗೆಂದನು. ಎಲೈ ಅಂಧಕನೇ, ನಿನ್ನ ಸ್ತೋತ್ರಕ್ಕೆ ನಾನು ಮೆಚ್ಚಿದೆನು. ನಿನಗೆ ಮಂಗಳವಾಗಲಿ, ನಿನಗೇನು ಕ್ಷೇಮ ವನ್ನುಂಟುಮಾಡಲಿ? ಎಲೈ ರಾಕ್ಷಸಶ್ರೇಷ್ಠನೇ, ಬೇಕಾದ ವರಗಳನ್ನು ಕೇಳು, ನಿನಗೆ ವರಗಳನ್ನು ನಾನು ನೀಡುವೆನು.

೨೩–೨೬. ಶಿವನ ಈ ಮಾತನ್ನು ಕೇಳಿ ಹಿರಣ್ಯಾಕ್ಷನ ಮಗನಾದ ಅಂಧಕಾಸುರನು ಹರ್ಷದಿಂದ ತೊದಲ್ನುಡಿಯುಳ್ಳವನಾಗಿ ಮಹೇಶ್ವರ ನನ್ನು ಕುರಿತು ಹೀಗೆಂದನು. ಪೂಜ್ಯನೂ, ದೇವದೇವನೂ, ಭಕ್ತರ

ಭಗವನ್ ದೇವದೇವೇಶ ಭಕ್ತಾರ್ತಿಹರ ಶಂಕರ ।
ತ್ವಯಿ ಭಕ್ತಿಃ ಪ್ರಸೀದೇಶ ಯದಿ ದೇಯೋ ವರಶ್ಚ ಮೇ ॥೨೪॥
ಶ್ರುತ್ವಾ ಭವೋಽಪಿ ವಚನ ಮಂಧಕಸ್ಯ ಮಹಾತ್ಮನಃ ।
ಪ್ರದದೌ ದುರ್ಲಭಾಂ ಶ್ರದ್ಧಾಂ ದೈತ್ಯೇಂದ್ರಾಯ ಮಹಾದ್ಯುತಿಃ ॥
ಗಾಣಪತ್ಯಂ ಚ ದೈತ್ಯಾಯ ಪ್ರದದೌ ಚಾಽವರೋಽಸ್ಯ ತಂ ।
ಪ್ರಣಮು ಸ್ತೇ ಸುರೇಂದ್ರಾದ್ಯಾ ಗಾಣಪತ್ಯೇ ಪ್ರತಿಷ್ಠಿತಂ ॥೨೬॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ, ತ್ರಿನವತಿತಮೋಽಧ್ಯಾಯಃ

---

ಸಂಕಟಗಳನ್ನು ನಿವಾರಣೆ ಮಾಡುವವನೂ, ಆದ ಶಂಕರನೇ, ನಿನಗೆ ನಾನು ಭಕ್ತನಾಗಿದ್ದೇನೆ. ನೀನು ನನಗೆ ವರವನ್ನು ಕೊಡಬೇಕೆಂದಿದ್ದರೆ ನನ್ನಲ್ಲಿ ಪ್ರಸನ್ನನಾಗು. ಮಹಾತ್ಮನಾದ ಅಂಧಕನ ಮಾತನ್ನು ಕೇಳಿ ಶಿವನು ಅವನಿಗೆ ಇತರರಿಗೆ ಸಿಕ್ಕದ ಅಚಲವಾದ ಭಕ್ತಿವಿಶ್ವಾಸಗಳುಳ್ಳ ನಂಬಿಕೆಯನ್ನು ಕೊಟ್ಟನು. ಗಣಪತಿಗಳಲ್ಲಿ ಒಬ್ಬನ ಸ್ಥಾನಕ್ಕೆ ಅವನನ್ನೇರಿಸಿ ಸೇರಿಸಿದನು. ಗಣಪತಿಯ ಪಟ್ಟವನ್ನೇರಿದ ಇವನನ್ನು ಎಲ್ಲರೂ ದೇವೇಂದ್ರನೇ ಮೊದಲಾದವರೂ, ವಂದಿಸಿದರು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ '' ಅಂಧಕನು ಗಣಪತಿಯಾದ ವಿಚಾರವನ್ನು ವಿವರಿಸಿರುವ'' ತೊಂಬತ್ತುಮೂರನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಚತುರ್ನವತಿತಮೋಽಧ್ಯಾಯಃ

॥ ಋಷಯ ಊಚುಃ ॥

ಕಥಮಸ್ಯ ಪಿತಾ ದೈತ್ಯೋ ಹಿರಣ್ಯಾಕ್ಷಃ ಸುದಾರುಣಃ ।
ವಿಷ್ಣುನಾ ಸೂದಿತೋ ವಿಷ್ಣುಃ ವಾರಾಹತ್ವಂ ಕಥಂ ಗತಂ ॥ ೧ ॥

ತಸ್ಯ ಶೃಂಗಂ ಮಹೇಶಸ್ಯ ಭೂಷಣತ್ವಂ ಕಥಂ ಗತಂ ।
ಏತತ್ಸರ್ವಂ ವಿಶೇಷೇಣ ಸೂತ ವಕ್ತುಮಿಹಾಽರ್ಹಸಿ ॥ ೨ ॥

॥ ಸೂತ ಉವಾಚ ॥

ಹಿರಣ್ಯ ಕಶಿಪೋ ರ್ಭ್ರಾತಾ ಹಿರಣ್ಯಾಕ್ಷ ಇತಿ ಸ್ಮೃತಃ ।
ಪುರಾಽಂಧಕಾ ಸುರೇಶಸ್ಯ ಪಿತಾ ಕಾಲಾಂತ ಕೋಪಮಃ ॥ ೩ ॥

---

### ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತುನಾಲ್ಕನೆಯ ಅಧ್ಯಾಯವು

೧-೨. ಋಷಿಗಳು ಕೇಳಿದರು:— ಅಂಧಕಾಸುರನ ತಂದೆಯಾದ ಭಯಂಕರನಾದ ಹಿರಣ್ಯಾಕ್ಷನೆಂಬ ರಾಕ್ಷಸನು ವಿಷ್ಣುವಿನಿಂದ ಕೊಲ್ಲಲ್ಪಟ್ಟ ಬಗೆ ಹೇಗೆ ? ವಿಷ್ಣುವು ಹಂದಿಯ ಸ್ವರೂಪವನ್ನು ಹೇಗೆ ತೆಗೆದು ಕೊಂಡನು ? ಅವನ ಕೊಂಬು ಶಿವನಿಗೆ ಅಲಂಕಾರವಾಗಿ ಹೇಗೆ ಆಯಿತು ? ಈ ಎಲ್ಲಾ ವಿಷಯಗಳನ್ನೂ ತಾವು ದಯವಿಟ್ಟು ನನಗೆ ತಿಳಿಸಬೇಕು.

೩. ಸೂತನು ಹೇಳಿದನು:— ಹಿರಣ್ಯಕಶಿಪುವಿನ ಅಣ್ಣನಾದ ಅಂಧಕಾಸುರನ ತಂದೆಯಾದ, ಹಿರಣ್ಯಾಕ್ಷನು ಹಿಂದೆ ಪ್ರಳಯಕಾಲದ ಯಮನಂತೆ ಮಹಾಪ್ರತಾಪಶಾಲಿಯಾಗಿದ್ದನು.

ದೇವಾನ್ ಜಿತ್ವಾಽಥ ದೈತ್ಯೇಂದ್ರೋ ಬದ್ಧ್ವಾ ಚ ಧರಣೀ ಮಿಮಾಂ ।
ನಿತ್ವಾ ರಸಾತಲಂ ಚಕ್ರೇ ಬಂದೀ ಮಿಂದೀವರ ಪ್ರಭಾಂ ॥ ೪ ॥

ತತಃ ಸ ಬ್ರಹ್ಮಕಾ ದೇವಾಃ ಪರಿಮ್ಲಾನ ಮುಖ ಶ್ರಿಯಃ ।
ಬಾಧಿತಾ ಸ್ತಾಡಿತಾ ಬದ್ಧಾ ಹಿರಣ್ಯಾಕ್ಷೇಣ ತೇನ ವೈ ॥ ೫ ॥

ಬಲಿನಾ ದೈತ್ಯ ಮುಖ್ಯೇನ ಕ್ರೂರೇಣ ಸು ದುರಾತ್ಮನಾ ।
ಪ್ರಣಮ್ಯ ಶಿರಸಾ ವಿಷ್ಣುಂ ದೈತ್ಯಕೋಟಿ ವಿಮರ್ದನಂ ॥ ೬ ॥

ಸರ್ವೇ ವಿಜ್ಞಾಪಯಾಮಾಸು ರ್ಧರಣೀ ಬಂಧನಂ ಹರೇಃ ।
ಶ್ರುತ್ವೈತ ದ್ಭಗವಾನ್ ವಿಷ್ಣು ರ್ಧರಣೀ ಬಂಧನಂ ಹರಿಃ ॥ ೭ ॥

ಭೂತ್ವಾ ಯಜ್ಞ ವರಾಹೋಽಸೌ ಯಥಾ ಲಿಂಗೋದ್ಭವೇ ತಥಾ ।
ದೈತ್ಯೈಶ್ಚ ಸಾರ್ಧಂ ದೈತ್ಯೇಂದ್ರಂ ಹಿರಣ್ಯಾಕ್ಷಂ ಮಹಾಬಲಂ ॥ ೮ ॥

---

೪–೬. ಈ ರಾಕ್ಷಸ ರಾಜನು ದೇವತೆಗಳೆಲ್ಲರನ್ನೂ ಜಯಿಸಿ, ಈ ಭೂಮಿಯನ್ನು ಪಾತಾಳಕ್ಕೆ ತೆಗೆದುಕೊಂಡು ಹೋಗಿ, ಕನ್ನೈದಿಲೆ ಯಂತೆ ಕಾಂತಿಯುಳ್ಳ ಇದನ್ನು ಸೆರೆಯಾಳನ್ನಾಗಿ ಮಾಡಿದನು. ಅನಂತರ ದಲ್ಲಿ ಬ್ರಹ್ಮನೇ ಮೊದಲಾದ ದೇವತೆಗಳು ಬಾಡಿದ ಮುಖದ ಕಾಂತಿ ಯುಳ್ಳವರಾಗಿದ್ದರು. ಮತ್ತು ಹಿರಣ್ಯಾಕ್ಷನು ಅವರನ್ನು ಕಾಡಿಸಿ, ಹೊಡೆದು, ಕಟ್ಟಿಹಾಕಿ, ಹೀಗೆ ನಾನಾವಿಧವಾದ ಚಿತ್ರಹಿಂಸೆಗಳನ್ನು ಕೊಡುತ್ತಿದ್ದನು. ಅಲ್ಲದೆ ಬಹಳ ಕ್ರೂರನೂ, ದುಷ್ಟನೂ, ಆದ ಬಲಿ, ಎಂಬ ರಾಕ್ಷಸ ಶ್ರೇಷ್ಠನಿಂದಲೂ, ದೇವತೆಗಳು ಕಾಡಿಸಲ್ಪಟ್ಟರು. ಆಗ ದೇವತೆಗಳೆಲ್ಲರೂ ಕೋಟ್ಯಾಂತರ ರಾಕ್ಷಸರನ್ನು ಕೊಂದ ವಿಷ್ಣುವಿನ ಬಳಿಗೆ ಹೋಗಿ ಅವನಿಗೆ ತಲೆಬಾಗಿ ನಮಸ್ಕರಿಸಿದರು.

೭–೮. ಎಲ್ಲರೂ ನಾರಾಯಣನಿಗೆ ಭೂಮಿಯನ್ನು ಕಟ್ಟಿಹಾಕಿರುವ ವಿಷಯವನ್ನು ವಿಜ್ಞಾಪಿಸಿಕೊಂಡರು. ವಿಷ್ಣುವು ಈ ವಿಷಯವನ್ನು ಕೇಳಿ, ಯಾಗದ ಹಂದಿಯ ಸ್ವರೂಪವನ್ನು ತಾಳಿ, ಲಿಂಗವು ಮೇಲಕ್ಕೆ ಉದ್ಭವಿಸು ವಂತೆ ಹೊರಟು, ಮಹಾಬಲಿಷ್ಠನೂ, ರಾಕ್ಷಸರೊಡನೆ ದೇವತೆಗಳನ್ನು ಎದುರಿಸಿ ಹೋರಾಡುತ್ತಿರುವವನೂ ಆದ ಹಿರಣ್ಯಾಕ್ಷನನ್ನು ತನ್ನ ಕೋರೆ

ದಂಷ್ಟ್ರಾಗ್ರ ಕೋಟ್ಯಾ ಹತ್ವೈನಂ ರೇಜೇ ದೈತ್ಯಾಂತ ಕೃತ್ಪ್ರಭುಃ ।
ಕಲ್ಪಾದಿಷು ಯಥಾ ಪೂರ್ವಂ ಪ್ರವಿಶ್ಯ ಚ ರಸಾತಲಂ ॥ ೯ ॥
ಆನೀಯ ವಸುಧಾಂ ದೇವೀ ಮಂಕಸ್ಥಾ ಮಕರೋದಬಹಿಃ ।
ತತಸ್ತುಷ್ಟಾವ ದೇವೇಶಂ ದೇವದೇವಃ ಪಿತಾಮಹಃ ॥೧೦॥
ಶಕ್ರಾದ್ಯೈಃ ಸಹಿತೋ ಭೂತ್ವಾ ಹರ್ಷಗದ್ಗದಯಾ ಗಿರಾ ।
ಶಾಶ್ವತಾಯ ವರಾಹಾಯ ದಂಷ್ಟ್ರಿಣೇ ದಂಡಿನೇ ನಮಃ ॥೧೧॥
ನಾರಾಯಣಾಯ ಸರ್ವಾಯ ಬ್ರಹ್ಮಣೇ ಪರಮಾತ್ಮನೇ ।
ಕರ್ತ್ರೇ ಧರ್ತ್ರೇ ಧರಾಯಾಸ್ತು ಹರ್ತ್ರೇ ದೇವಾರಿಣಾಂ ಸ್ವಯಂ ।
ಕರ್ತ್ರೇ ನೇತ್ರೇ ಸುರೇಂದ್ರಾಣಾಂ ಶಾಸ್ತ್ರೇ ಚ ಸಕಲಸ್ಯ ಚ ॥೧೨॥

---

ದಾಡೆಗಳಿಂದ ಸಂಹರಿಸಿ, ರಾಕ್ಷಸನಾಶವನ್ನು ಮಾಡಿದ ವರ್ಚಸ್ಸಿನಿಂದ ಸ್ವಾಮಿಯು ಪ್ರಕಾಶಿಸಿದನು. ಸೃಷ್ಟಿಯ ಆರಂಭಕಾಲದಲ್ಲಿ ಹೇಗೋ ಹಾಗೆ ಮೊದಲಿನಂತೆಯೇ ಸ್ಥಾಪಿಸಿದ ಪಾತಾಳವನ್ನು ಹೊಕ್ಕನು.

೧೦-೧೨. ವಿಷ್ಣುವು ಭೂಮಿಯನ್ನು ಪಾತಾಳದಿಂದ ಮೇಲಕ್ಕೆತ್ತಿ ಹೊರಗೆ ಸ್ಥಿರವಾಗಿ ನಿಲ್ಲಿಸಿದನು. ಅನಂತರದಲ್ಲಿ ದೇವದೇವನಾದ ಬ್ರಹ್ಮನು ಇಂದ್ರನೇ ಮೊದಲಾದ ದೇವತೆಗಳೊಂದಿಗೆ ಸಂತೋಷದಿಂದ ತೊದಲು ಮಾತನಾಡುತ್ತಾ ದೇವೇಶನಾದ ನಾರಾಯಣನನ್ನು ಸ್ತೋತ್ರ ಮಾಡಿದನು. ನಿತ್ಯನೂ, ಹಂದಿಯ ಸ್ವರೂಪವನ್ನು ತಾಳಿದವನೂ, ಪ್ರಶಸ್ತವಾದ ಕೋರೆದಾಡೆಗಳುಳ್ಳವನೂ, ದುಷ್ಟಶಿಕ್ಷಕನೂ, ನಾರಾಯಣನೂ, ಎಲ್ಲಾ ಪ್ರಪಂಚಸ್ವರೂಪನೂ, ಬ್ರಹ್ಮಸ್ವರೂಪನೂ, ಪರಮಾತ್ಮಸ್ವರೂಪನೂ, ಕರ್ತೃವೂ. ಪ್ರಪಂಚವನ್ನು ರಕ್ಷಿಸುವವನೂ, ದೇವತೆಗಳ ಶತ್ರುಗಳನ್ನು ಸಂಹರಿಸುವವನೂ, ಸರ್ವಶಕ್ತನೂ, ದೇವತೆಗಳಿಗೆಲ್ಲರಿಗೂ ನಾಯಕನೂ, ಎಲ್ಲರನ್ನೂ ಆಳುವವನೂ, ಆದ ನಾರಾಯಣನಿಗೆ ನಮಸ್ಕಾರಗಳು.

ತ್ವಮಷ್ಟಮೂರ್ತಿ ಸ್ತ್ವಮನಂತ ಮೂರ್ತಿ ।
ಸ್ತ್ವಮಾದಿ ದೇವ ಸ್ತ್ವಮನಂತ ವೇದಿತಃ ॥
ತ್ವಯಾ ಕೃತಂ ಸರ್ವ ಮಿದಂ ಪ್ರಸೀದ ।
ಸುರೇಶ ಲೋಕೇಶ ವರಾಹ ವಿಷ್ಣೋ ॥೧೩॥

ತಥೈಕ ದಂಷ್ಟ್ರಾಗ್ರ ಮುಖಾಗ್ರ ಕೋಟಿ ।
ಭಾಗೈಕ ಭಾಗಾರ್ಧ ತಮೇನ ವಿಷ್ಣೋ ॥
ಹತಾಃ ಕ್ಷಣಾ ತ್ವಾಮದ ದೈತ್ಯ ಮುಖ್ಯಾಃ ।
ಸ್ವದಂಷ್ಟ್ರ ಕೋಟ್ಯಾ ಸಹ ಪುತ್ರ ಭೃತ್ಯೈಃ ॥೧೪॥

ತ್ವಯೋದ್ಧೃತಾ ದೇವ ಧರಾ ಧರೇಶ ।
ಧರಾಧರಾ ಕಾರಧೃತಾಗ್ರ ದಂಷ್ಟ್ರೇ ॥
ಧರಾಧರೈಃ ಸರ್ವಜನ್ಯೈಃ ಸಮುದ್ರೈಃ ।
ಸುರಾಸುರೈಃ ಸೇವಿತ ಚಂದ್ರ ವಕ್ತ್ರಾ ॥೧೫॥

---

೧೩–೧೫. ನೀನು ಎಂಟು ಆಕಾರವುಳ್ಳವನೂ, ನಾಶವಿಲ್ಲದ ಸ್ವರೂಪವುಳ್ಳವನೂ, ಆದಿದೇವನೂ, ಅಪರಿಮಿತ ಜ್ಞಾನವುಳ್ಳವನೂ ಆಗಿದ್ದೀಯೆ. ಈ ಎಲ್ಲಾ ಲೋಕೋದ್ಧಾರವನ್ನೂ ನೀನೇ ಮಾಡಿದ್ದೀಯೆ. ನಮಗೆ ಪ್ರಸನ್ನನಾಗು. ದೇವತೆಗಳಿಗೆ ಒಡೆಯನೂ, ಲೋಕಕ್ಕೆ ಅಧಿಪತಿಯೂ, ಹಂದಿಯ ಸ್ವರೂಪನೂ, ಆದ ವಿಷ್ಣುವೇ, ನಿನಗೆ ನಮಸ್ಕಾರವಿರಲಿ. ಹಾಗೆಯೇ ಒಂದು ಕೋರೆದಾಡೆಯ ಅಂಚಿನ ತುದಿಯ ಕೋಟಿಯಲ್ಲಿ ಒಂದು ಭಾಗದಲ್ಲೊಂದು ಭಾಗ ಅರ್ಧಕ್ಕಿಂತಲೂ ಕಮ್ಮಿಯಾದ ಕೋರೆದಾಡೆಯ ಭಾಗದಿಂದ ನೀನು, ಪ್ರಬಲರಾಕ್ಷಸನೂ ಅವರ ಪರಿವಾರಗಳೆಲ್ಲವನ್ನೂ, ಕೊಡುವವನಾಗಿದ್ದೀಯೆ. ಓ ಭೂಮಿಗೆ ಅಧಿಪತಿಯೇ, ನಿನ್ನಿಂದ ಭೂಮಿಯು ಉದ್ಧಾರವಾಯಿತು. ಪರ್ವತಕ್ಕೆ ಸಮಾನವಾದ ಆಕಾರವುಳ್ಳ, ಎತ್ತಿದ ಕೋರೆದಾಡೆಗಳುಳ್ಳ ಆದಿವರಾಹಮೂರ್ತಿಯೇ, ನಿನಗೆ ನಮಸ್ಕಾರವಿರಲಿ. ಸಮಸ್ತ ಪರ್ವತಗಳಿಂದಲೂ, ಎಲ್ಲಾ ಜನಗಳಿಂದಲೂ, ಸಮುದ್ರಗಳಿಂದಲೂ, ದೇವತೆಗಳು ಮತ್ತು ರಾಕ್ಷಸರು ಇವರಿಂದಲೂ, ಸೇವಿಸಲ್ಪಟ್ಟ ಮುಖಕಮಲವುಳ್ಳ ನಿನಗೆ ನಮಸ್ಕಾರಗಳು.

ತ್ವಯೈವ ದೇವೇಶ ವಿಭೋ ಕೃತಶ್ಚ ।
ಜಯಃ ಸುರಾಣಾ ಮಸುರೇಶ್ವರಾಣಾಂ ॥
ಅಹೋ ಪ್ರದತ್ತಸ್ತು ವರಃ ಪ್ರಸೀದ ।
ವಾಗ್ದೇವತಾ ವಾರಿಜ ಸಂಭವಾಯ ॥೧೬॥

ತವ ರೋಮ್ಣಿ ಸಕಲಾಮರೇಶ್ವರಾ ।
ನಯನದ್ವಯೇ ಶಶಿರವೀ ಪದ ದ್ವಯೇ ॥
ನಿಹಿತಾ ರಸಾತಲಗತಾ ವಸುಂಧರಾ ।
ತವ ಪೃಷ್ಠತಃ ಸಕಲ ತಾರ ಕಾದಯಃ ॥೧೭॥

ಜಗತಾಂ ಹಿತಾಯ ಭವತಾ ವಸುಂಧರಾ ।
ಭಗವನ್ ರಸಾತಲ ಪುಟಂ ಗತಾ ತದಾ ॥
ಅಬಲೋ ದ್ಧೃತಾ ಚ ಭಗವಂ ಸ್ತ್ವಯೈವ ।
ಸಕಲಂ ತ್ವಯೈವ ಹಿ ಧೃತಂ ಜಗದ್ಗುರೋ ॥೧೮॥

---

೧೬–೧೭. ದೇವತೆಗಳ ಒಡೆಯನೂ, ಸ್ವಾಮಿಯೂ, ಆದ ನಿನ್ನಿಂದಲೇ ದೇವತೆಗಳು ಮತ್ತು ರಾಕ್ಷಸರು ಇವರಿಗೆ ಸಂಭವಿಸಿದ ಯುದ್ಧದಲ್ಲಿ ದೇವತೆಗಳಿಗೆ ಜಯವು ಗಳಿಸಿ ಕೊಡಲ್ಪಟ್ಟಿತು. ಸರಸ್ವತೀ ಮತ್ತು ಬ್ರಹ್ಮ ಇವರಿಗೆ ವರವನ್ನು ಕೊಟ್ಟ ಸ್ವಾಮಿಯೇ, ನಿನಗೆ ನಮಸ್ಕಾರವಿರಲಿ. ನಿನ್ನ ಕೂದಲಿನಲ್ಲೇ ಸಕಲ ದೇವಶ್ರೇಷ್ಠರೂ ಇರುವರು. ನಿನ್ನ ಎರಡು ಕಣ್ಣುಗಳಲ್ಲಿ ಚಂದ್ರ ಸೂರ್ಯರೂ, ಎರಡು ಕಾಲುಗಳಲ್ಲಿ ಪಾತಾಳದಿಂದ ಉದ್ಧರಿಸಲ್ಪಟ್ಟ ಭೂಮಿಯೂ, ನಿನ್ನ ಪೃಷ್ಠಭಾಗದಲ್ಲಿ ಎಲ್ಲಾ ನಕ್ಷತ್ರಗಳೇ ಮೊದಲಾದ ಎಲ್ಲ ಪ್ರಪಂಚವೂ ಇದೆ.

೧೮–೨೦. ಓ ಪೂಜ್ಯನಾದ ಸ್ವಾಮಿಯೇ, ನೀನು ಜಗತ್ತಿನ ಹಿತಕ್ಕಾಗಿ ಪಾತಾಳದಲ್ಲಿ ಅಡಗಿದ್ದ ಭೂಮಿಯನ್ನು ಉದ್ಧಾರ ಮಾಡಿದ್ದೀಯೆ. ಜಗತ್ತಿಗೇ ತಂದೆಯಾದ ಸ್ವಾಮಿಯೇ, ನಿನ್ನಿಂದ ಈ ಭೂಮಿಯ ಉದ್ಧಾರವು ಅನಾಯಾಸವಾಗಿಯೇ ಮಾಡಲ್ಪಟ್ಟು, ಎಲ್ಲಾ ಲೋಕದ ಸಂರಕ್ಷಣೆಯೂ, ಆಯಿತು. ಹೀಗೆ ಮಾತುಗಳಿಗೆ ಪತಿಯೂ, ಪ್ರಜೆಗಳಿಗೆ ಅಧಿಪತಿಯೂ ಆದ ಬೃಹಸ್ಪತಿಯು ಸಕಲ ದೇವತೆಗಳೊಡನೆ ವಿಷ್ಣುವಿಗೆ

ಇತಿ ವಾಕ್ಪತಿ ರ್ಬಹು ವಿಧೈಃ ಸ್ತವಾಽರ್ಚನೈಃ ।
ಪ್ರಣಿಪತ್ಯ ವಿಷ್ಣು ಮಮರೈಃ ಪ್ರಜಾಪತಿಃ ॥
ವಿವಿಧಾ ನ್ವರಾನ್ ಹರಿಮುಖಾತ್ತು ಲಬ್ಧವಾನ್ ।
ಹರಿನಾಭಿ ವಾರಿಜಜ ದೇಹಭೃತ್ಸ್ವಯಂ ॥೧೯॥
ಅಥ ತಾ ಮುದ್ಧೃತಾಂ ತೇನ ಧರಾಂ ದೇವಾ ಮುನೀಶ್ವರಾಃ ।
ಮೂರ್ಧ್ನ್ಯಾ ರೋಪ್ಯ ನಮಶ್ಚಕ್ರು ಶ್ಚಕ್ರಿಣಃ ಸನ್ನಿಧೌ ತದಾ ॥೨೦॥
ಅನೇನೈವ ವರಾಹೇಣ ಚೋದ್ಧೃತಾಽಸಿ ವರಪ್ರದೇ ।
ಕೃಷ್ಣೇನಾಽಕ್ಲಿಷ್ಟಕಾರ್ಯೇಣ ಶತ ಹಸ್ತೇನ ವಿಷ್ಣುನಾ ॥೨೧॥
ಧರಣಿ ತ್ವಂ ಮಹಾಭಾಗೇ ಭೂಮಿಸ್ತ್ವಂ ಧೇನು ರವ್ಯಯೇ ।
ಲೋಕಾನಾಂ ಧರಣೀ ತ್ವಂ ಹಿ ಮೃತ್ತಿಕೇ ಹರ ಪಾತಕಂ ॥೨೨॥
ಮನಸಾ ಕರ್ಮಣಾ ವಾಚಾ ವರದೇ ವಾರಿಜೇಕ್ಷಣೇ ।
ತ್ವಯಾ ಹತೇನ ಪಾಪೇನ ಜೀವಾಮ ಸ್ತ್ವತ್ಪ್ರಸಾದತಃ ॥೨೩॥

---

ನಮಸ್ಕರಿಸಿ ಅನೇಕ ವಿಧವಾಗಿ ಸ್ತೋತ್ರಮಾಡಿ, ಅವನ ಅನುಗ್ರಹವನ್ನೂ, ಅವನ ಹೊಕ್ಕುಳಲ್ಲಿರುವ ಕಮಲದಲ್ಲಿ ಹುಟ್ಟಿದ ಬ್ರಹ್ಮನು ಅನೇಕ ವರಗಳನ್ನೂ ಪಡೆದರು. ಅನಂತರದಲ್ಲಿ ವಿಷ್ಣುವಿನಿಂದ ಎತ್ತಲ್ಪಟ್ಟ ಭೂಮಿಯನ್ನು ದೇವತೆಗಳೂ, ಋಷಿಶ್ರೇಷ್ಠರೂ, ತಲೆಯಮೇಲೆ ಹೊತ್ತುಕೊಂಡು ಭೂಮಿಗೆ ವಿಷ್ಣುವಿನ ಸಮೀಪದಲ್ಲಿ ನಮಸ್ಕಾರ ಮಾಡಿದರು.

೨೧–೨೩. ಓ ಭೂಮಿದೇವಿಯೇ, ನೀನು ಹಂದಿಯ ರೂಪವನ್ನು ತಾಳಿದ ಕೃಷ್ಣಸ್ವರೂಪಿಯೂ, ಅನಾಯಾಸವಾಗಿ ಎಲ್ಲವನ್ನೂ ಮಾಡುವುದಕ್ಕೆ ಶಕ್ತನೂ, ನೂರು ಕೈಗಳುಳ್ಳವನೂ ಆದ ವಿಷ್ಣುವಿನಿಂದ ಉದ್ಧಾರ ಮಾಡಲ್ಪಟ್ಟಿದ್ದೀಯ. ಓ ಭೂದೇವಿಯೇ, ನೀನು ಬಹಳ ಪುಣ್ಯವಂತಳು. ನಾಶರಹಿತವಾದ ಹಸುವಿನ ಸ್ವರೂಪಳೂ ಭೂಮಿಯೂ, ಆಗಿದ್ದೀಯೆ. ಲೋಕಗಳಿಗೆ ನೀನು ರಕ್ಷಕಳು. ಮಣ್ಣಿನ ಸ್ವರೂಪಳಾದ ನೀನು ನಮ್ಮ ಪಾಪವನ್ನೆಲ್ಲವನ್ನೂ ಹೋಗಲಾಡಿಸು. ಕಮಲದಂತೆ ಕಣ್ಣುಳ್ಳ, ವರವನ್ನು ಕೊಡುವ, ಭೂದೇವಿಯೇ, ನಾವು, ಮನಸ್ಸು, ಕೆಲಸ, ಮಾತು ಇವುಗಳಲ್ಲಿ ಮಾಡಿದ ಪಾಪಗಳನ್ನು ನೀನು ಹೋಗಲಾಡಿಸುವುದರಿಂದಲೇ, ನಿನ್ನ ಅನುಗ್ರಹದಿಂದಲೇ, ನಾವು ಬದುಕಿದ್ದೇವೆ.

ಇತ್ಯುಕ್ತ್ವಾ ಸಾ ತದಾ ದೇವೀ ಧರಾ ದೇವೈರಥಾಽಬ್ರವೀತ್ ।
ವರಾಹ ದಂಷ್ಟ್ರಾ ಭಿನ್ನಾಯಾಂ ಧರಾಯಾಂ ಮೃತ್ತಿಕಾಂ ದ್ವಿಜಾಃ ॥
ಮಂತ್ರೇಣಾಽನೇನ ಯೋ ಬಿಭ್ರತ್ ಮೂರ್ಧ್ನಿ ಪಾಪಾತ್ಪ್ರಮುಚ್ಯತೇ
ಆಯುಷ್ಮಾನ್ ಬಲವಾನ್ ಧನ್ಯಃ ಪುತ್ರಪೌತ್ರ ಸಮನ್ವಿತಃ ॥೨೫॥
ಕ್ರಮಾದ್ಭುವಿ ದಿನಂ ಪ್ರಾಪ್ಯ ಕರ್ಮಾಂತೇ ಮೋದತೇ ಸುರೈಃ ।
ಅಥ ದೇವೇ ಗತೇ ತ್ಯಕ್ತ್ವಾ ವರಾಹೇ ಕ್ಷೀರಸಾಗರಂ ॥೨೬॥
ವರಾಹ ರೂಪ ಮನಘಂ ಚಚಾಲ ಚ ಧರಾ ಪುನಃ ।
ತಸ್ಯ ದಂಷ್ಟ್ರಾ ಭರಾಕ್ರಾಂತಾ ದೇವದೇವಸ್ಯ ಧೀಮತಃ ॥೨೭॥
ಯದೃಚ್ಛಯಾ ಭವಃ ಪಶ್ಯನ್ ಜಗಾಮ ಜಗದೀಶ್ವರಃ ।
ದ್ರಂಷ್ಟ್ರಾಂ ಜಗ್ರಾಹ ದೃಷ್ಟ್ವಾ ತಾಂ ಭೂಷಣಾಽರ್ಥಮಥಾಽತ್ಮನಃ॥

---

೨೪–೨೫. ಹೀಗೆ ಸ್ತೋತ್ರಮಾಡಲ್ಪಟ್ಟ ಭೂಮಿಯು ದೇವತೆಗಳನ್ನು ಕುರಿತು ಹೀಗೆಂದಳು:—ಹಂದಿಯ ಸ್ವರೂಪಿಯಾದ ವಿಷ್ಣುವಿನಿಂದ ಕೆರೆಯಲ್ಪಟ್ಟ ಭೂಮಿಯ ಮಣ್ಣನ್ನು ಮಂತ್ರ ಪುರಸ್ಸರವಾಗಿ ಶಿರಸ್ಸಿನಲ್ಲಿ ಧಾರಣಮಾಡುವ ಮನುಷ್ಯನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ದೀರ್ಘಾಯುಸ್ಸುಳ್ಳವನಾಗಿಯೂ, ಬಲಿಷ್ಠನಾಗಿಯೂ, ಧನ್ಯನಾಗಿಯೂ, ಮಕ್ಕಳು ಮೊಮ್ಮಕ್ಕಳುಗಳಿಂದ ಕೂಡಿದವನಾಗಿಯೂ ಇರುತ್ತಾನೆ.

೨೬. ಇಂಥಾ ಮನುಷ್ಯನು ಕ್ರಮವಾಗಿ ಭೂಮಿಯಲ್ಲಿ ಸುಖವಾಗಿ ಬಾಳಿ, ಮರಣವನ್ನು ಪಡೆದ ಅನಂತರದಲ್ಲಿ ಸ್ವರ್ಗವನ್ನು ಸೇರಿ ದೇವತೆಗಳೊಂದಿಗೆ ಸುಖವಾಗಿ ಬಾಳುತ್ತಾನೆ. ಅನಂತರದಲ್ಲಿ ವಿಷ್ಣುವು ಹಂದಿಯ ರೂಪವನ್ನು ಬಿಟ್ಟು ಕ್ಷೀರಸಾಗರವನ್ನು ಸೇರಿದನು.

೨೭–೨೮. ವಿಷ್ಣುವು ಅದೋಷವಾದ ಹಂದಿಯ ರೂಪವನ್ನು ಬಿಟ್ಟು, ಕ್ಷೀರಸಾಗರಕ್ಕೆ ಹೊರಟು ಹೋಗಲಾಗಿ, ಅವನ ಕೋರೆದಾಡೆಯ ಭಾಗದಿಂದ ಭೂಮಿಯು ತಿರುಗಿ ಅಲ್ಲಾಡಲು ಪ್ರಾರಂಭಿಸಿತು. ಜಗತ್ತಿಗೆ

ದಧಾರ ಚ ಮಹಾದೇವಃ ಕೂರ್ಚಾಂತೇ ವೈ ಮಹೋರಸಿ ।
ದೇವಾಶ್ಚ ತುಷ್ಟುವುಃ ಸೇಂದ್ರಾ ದೇವದೇವಸ್ಯ ವೈಭವಂ ॥೨೯॥

ಧರಾ ಪ್ರತಿಷ್ಠಿತಾ ಹ್ಯೇವಂ ದೇವದೇವೇನ ಲೀಲಯಾ ।
ಭೂತಾನಾಂ ಸಂಪ್ಲವೇ ಚಾಽಪಿ ವಿಷ್ಣೋಶ್ಚೈವ ಕಲೇಬರಂ ॥೩೦॥

ಬ್ರಹ್ಮಣಶ್ಚ ತಥಾಽನ್ಯೇಷಾಂ ದೇವಾನಾಮಪಿ ಲೀಲಯಾ ।
ವಿಭುರಂಗ ವಿಭಾಗೇನ ಭೂಷಿತೋ ನ ಯಿದಿ ಪ್ರಭುಃ ॥೩೧॥

---

ಅಧಿಪತಿಯಾದ ಶಿವನು ಸ್ವೇಚ್ಛೆಯಾಗಿ ಅಲ್ಲಿಗೆ ಹೋಗಲು ಇದನ್ನು ನೋಡಿ, ಅನಂತರದಲ್ಲಿ ಅಲಂಕಾರಾರ್ಥವಾಗಿ ಆ ಕೋರೆದಾಡೆಗಳನ್ನು ಶಿವನು ತನ್ನ ದೊಡ್ಡ ವಕ್ಷಸ್ಥಳದಮೇಲೆ ಧರಿಸಿ ದರ್ಭೆಯಿಂದ ಹೊಸೆದ ಕಡ್ಡಿಯ ಅಂಚಿನಿಂದ ಅದನ್ನು ಹಿಡಿದುಕೊಂಡನು. ಆಗ ಇಂದ್ರನೇ ಮೊದಲಾದ ದೇವತೆಗಳು ದೇವ ದೇವನಾದ ಶಿವನ ಮಹಿಮೆಯನ್ನು ಸ್ತೋತ್ರಮಾಡಿದರು.

೩೦-೩೨. ದೇವ ದೇವನಾದ ಶಿವನಿಂದ ಅನಾಯಾಸವಾಗಿಯೇ ಲೀಲೆಯಿಂದ ಭೂಮಿಯು ಸ್ಥಿರವಾಗಿಡಲ್ಪಟ್ಟಿತು. ಭೂತಗಳು ಚಲಿಸಿರುವ ಪ್ರಳಯಕಾಲದಲ್ಲೂ ವಿಷ್ಣುವಿನ ಶರೀರವೂ ಬ್ರಹ್ಮ ಮೊದಲಾದ ಬೇರೆ ದೇವತೆಗಳ ಶರೀರವೂ ದೃಢವಾಗಿರುವಂತೆ ಶಿವನು ಅನಾಯಾಸವಾಗಿ ನಿಲ್ಲಿಸಿದನು. ಸ್ವಾಮಿಯೂ, ವ್ಯಾಪಕನೂ ಆದ ಶಿವನು ಬೇರೆ ಬೇರೆ ಅವಯವಗಳ ವಿಭಾಗದಿಂದ ಈ ಅಲಂಕಾರವನ್ನು ಧಾರಣ ಮಾಡದಿದ್ದರೆ, ಬ್ರಾಹ್ಮಣರಿಗೆ ಅವನ ಪೂಜೆಗೆ ಸೌಕರ್ಯವೂ ತನ್ಮೂಲಕವಾಗಿ ಅವರಿಗೆ ಮೋಕ್ಷವೂ ಹೇಗೆ ಸಿದ್ಧಿಸಬೇಕು? ಅದಕ್ಕಾಗಿಯೇ ಶಿವನು

ಕಥಂ ವಿಮುಕ್ತಿ ರ್ವಿಪ್ರಾಣಾಂ ತಸ್ಮಾದ್ದಂಷ್ಟ್ರೀ ಮಹೇಶ್ವರಃ ॥೩೨॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಚತುರ್ನವತಿತಮೋಽಧ್ಯಾಯಃ

---

ಕೋರೆದಾಡೆಯನ್ನು ಆಭರಣವನ್ನಾಗಿ ಧರಿಸಿದನು. ಇದರಿಂದ ಶಿವನು ದಂಷ್ಟ್ರೀ, ಎಂದು ಪ್ರಸಿದ್ಧಿಯನ್ನೂ ಪಡೆದನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ "ಶಿವನು ಹಂದಿಯ ಸ್ವರೂಪವನ್ನು ಧರಿಸಿದ್ದ ವಿಷ್ಣುವಿನ ಕೋರೆದಾಡೆಗಳನ್ನು ಅಲಂಕಾರಮಾಡಿ ಕೊಂಡಬಗೆ" ಎಂಬತ್ತೊಂಬತ್ತುನಾಲ್ಕನೆಯ ಅಧ್ಯಾಯವು ಮುಗಿದುದು.



अथ श्री लिंगमहापुराणे पूर्वभागे
पंचनवतितमोऽध्यायः

॥ ऋषय ऊचुः ॥

ನೃಸಿಂಹೇನ ಹತಃ ಪೂರ್ವಂ ಹಿರಣ್ಯಾಕ್ಷಾಗ್ರಜಃ ಶ್ರುತಂ ।
ಕಥಂ ನಿಷೂದಿತ ಸ್ತೇನ ಹಿರಣ್ಯಕಶಿಪು ರ್ವದ ॥ ೧ ॥

॥ ಸೂತ ಉವಾಚ ॥

ಹಿರಣ್ಯ ಕಶಿಪೋಃ ಪುತ್ರಃ ಪ್ರಹ್ಲಾದ ಇತಿ ವಿಶ್ರುತಃ ।
ಧರ್ಮಜ್ಞಃ ಸತ್ಯ(ತ್ವ)ಸಂಪನ್ನ ಸ್ತಪಸ್ವೀ ಚಾಽಭವ ತ್ಸುಧೀಃ ॥ ೨ ॥
ಜನ್ಮ ಪ್ರಭೃತಿ ದೇವೇಶಂ ಪೂಜಯಾಮಾಸ ಚಾಽವ್ಯಯಂ ।
ಸರ್ವಜ್ಞಂ ಸರ್ವಗಂ ವಿಷ್ಣುಂ ಸರ್ವದೇವ ಭವೋದ್ಭವಂ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತೈದನೆಯ ಅಧ್ಯಾಯವು.

೧. ಋಷಿಗಳು ಹೇಳಿದರು :— ಓ ಸೂತಮಹರ್ಷಿಯೇ, ಹಿಂದೆ ಹಿರಣ್ಯಾಕ್ಷನ ಅಣ್ಣನಾದ ಹಿರಣ್ಯಕಶಿಪುವನ್ನು ನೃಸಿಂಹಾವತಾರ ಮಾಡಿದ ವಿಷ್ಣುವಿನಿಂದ ಕೊಲ್ಲಲ್ಪಟ್ಟನೆಂದು ಕೇಳಿದ್ದೇವೆ. ನೃಸಿಂಹನು ಹಿರಣ್ಯಕಶಿಪುವನ್ನು ಕೊಂದ ಬಗೆ ಹೇಗೆ? ಎಂಬುದನ್ನು ದಯವಿಟ್ಟು ಹೇಳಿ.

೨-೩. ಸೂತನು ಹೇಳಿದನು :— ಹಿರಣ್ಯಕಶಿಪುವಿನ ಮಗನಾದ ಪ್ರಹ್ಲಾದನೆಂಬುವನು ಪ್ರಸಿದ್ಧನಾಗಿದ್ದನು. ಅವನು ಧರ್ಮವನ್ನರಿತವನೂ, ಸತ್ಯಸಂಧನೂ, ಸಾತ್ವಿಕನೂ, ಬುದ್ಧಿಶಾಲಿಯೂ, ಆಗಿದ್ದನು. ಅವನು ಹುಟ್ಟಿದಾಗಿನಿಂದಲೂ ನಾಶರಹಿತನಾದ, ದೇವತೆಗಳಿಗೆ ಒಡೆಯನಾದ, ಎಲ್ಲವನ್ನೂ ತಿಳಿದ, ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿರುವ, ಎಲ್ಲಾ ದೇವತೆಗಳ ಮತ್ತು ಪ್ರಪಂಚದ ಆವಿರ್ಭಾವಕ್ಕೂ ಕಾರಣನಾದ ವಿಷ್ಣುವನ್ನು ಪೂಜಿಸುತ್ತಿದ್ದನು.

ತಮಾದಿ ಪುರುಷಂ ಭಕ್ತ್ಯಾ ಪರಬ್ರಹ್ಮಸ್ವರೂಪಿಣಂ ।
ಬ್ರಹ್ಮಣೋಽಧಿ ಪತಿಂ ಸೃಷ್ಟಿ ಸ್ಥಿತಿ ಸಂಹಾರ ಕಾರಣಂ ॥ ೪ ॥
ಸೋಽಪಿ ವಿಷ್ಣೋ ಸ್ತಥಾ ಭೂತಂ ದೃಷ್ಟ್ವಾ ಪುತ್ರಂ ಸಮಾಹಿತಂ।
ನಮೋ ನಾರಾಯಣಾಯೇತಿ ಗೋವಿಂದೇತಿ ಮುಹುರ್ಮುಹುಃ ॥
ಸ್ತುವಂತಂ ಪ್ರಾಹ ದೇವಾರಿಃ ಪ್ರದಹನ್ನಿವ ಪಾಪಧೀಃ ।
ನ ಮಾಂ ಜಾನಾಸಿ ದುರ್ಬುದ್ಧೇ ಸರ್ವದೈತ್ಯಾ ಮರೇಶ್ವರಂ ॥ ೬ ॥
ಪ್ರಹ್ಲಾದ ವೀರ ದುಷ್ಪುತ್ರ ದ್ವಿಜ ದೇವಾಽರ್ತಿಕಾರಣಂ ।
ಕೋ ವಿಷ್ಣುಃ ಪದ್ಮಜೋ ವಾಽಪಿ ಶುಕ್ರಶ್ಚ ವರುಣೋಽಥವಾ ॥ ೭ ॥
ವಾಯುಃ ಸೋಮಸ್ತಥೇಶಾನಃ ಪಾವಕೋ ಮಮ ಯಃ ಸಮಃ।
ಮಾಮೇವಾಽರ್ಚಯ ಭಕ್ತ್ಯಾ ಚ ಸ್ವಲ್ಪಂ ನಾರಾಯಣಂ ಸದಾ ॥ ೮ ॥

---

೪–೬. ಆದಿಪುರುಷನಾದ, ಪರಬ್ರಹ್ಮಸ್ವರೂಪಿಯಾದ, ಬ್ರಹ್ಮನಿಗೂ ಅಧಿಪತಿಯಾದ, ಸೃಷ್ಟಿ, ಸ್ಥಿತಿ, ಸಂಹಾರಗಳಿಗೆ ಕಾರಣನಾದ, ವಿಷ್ಣುವನ್ನು ಪೂಜಿಸಿ ತೃಪ್ತಿಪಡೆಯುತ್ತಿದ್ದ, "ನಮೋ ನಾರಾಯಣಾಯ, ಗೋವಿಂದಾಯ" ಎಂದು ಬಾರಿ ಬಾರಿಗೂ ಜಪಿಸುತ್ತಾ ಸ್ತೋತ್ರ ಮಾಡುತ್ತಿದ್ದ, ಆ ಪ್ರಹ್ಲಾದನನ್ನು ನೋಡಿ, ದೇವತೆಗಳಿಗೆ ಶತ್ರುವಾದ, ಪಾಪ ಬುದ್ಧಿಯುಳ್ಳ, ಹಿರಣ್ಯಕಶಿಪುವು, ಆ ಬಾಲಕನನ್ನು ಸುಡುವಂತೆ ನೋಡುತ್ತಾ, ಎಲೈ ಬಾಲಕನೇ, ಎಲ್ಲಾ ರಾಕ್ಷಸರು ಮತ್ತು ದೇವತೆಗಳಿಗೂ ಒಡೆಯನಾದವನು ನಾನೇ ಎಂಬುದನ್ನು ತಿಳಿದಿಲ್ಲವೋ? ಎಂದು ಗದರಿಸಿದನು.

೭–೮. ವೀರನಾಗಿದ್ದರೂ ನನಗೆ ಕೆಟ್ಟಮಗನಾಗಿ ಹುಟ್ಟಿದ ಎಲೈ ಪ್ರಹ್ಲಾದನೇ, ಬ್ರಾಹ್ಮಣರು ಮತ್ತು ದೇವತೆಗಳ ಕಾಟಕ್ಕೆ ಕಾರಣನಾದ ನನಗೆ ವಿಷ್ಣುವಾಗಲಿ, ಬ್ರಹ್ಮನಾಗಲಿ, ಇಂದ್ರನಾಗಲಿ, ವರುಣನಾಗಲಿ, ವಾಯು, ಚಂದ್ರ, ಈಶ್ವರ, ಬೆಂಕಿ, ಇವರಾಗಲಿ, ನನಗೆ ಸಾಟಿಯೇ? ಎಲೈ ಪ್ರಹ್ಲಾದನೇ, ನಿನಗೆ ಬದುಕಬೇಕೆಂಬ ಇಚ್ಛೆಯಿದ್ದರೆ ನನ್ನ ಮಾತನ್ನು ಕೇಳು. ಅಲ್ಪನಾದ ನಾರಾಯಣನನ್ನು ಬಿಟ್ಟು ಯಾವಾಗಲೂ

ಪ್ರಹ್ಲಾದ ಜೀವಿತೇ ವಾಂಛಾ ತನ್ಯೈಷಾ ಶೃಣು ಚಾsಸ್ತಿ ಚೇತ್ ।
ಶ್ರುತ್ವಾsಪಿ ತಸ್ಯ ವಚನಂ ಹಿರಣ್ಯಕಶಿಪೋಃ ಸುಧೀಃ ॥ ೯ ॥

ಪ್ರಹ್ಲಾದಃ ಪೂಜಯಾಮಾಸ ನಮೋ ನಾರಾಯಣೇತಿ ಚ ।
ನಮೋ ನಾರಾಯಣಾಯೇತಿ ಸರ್ವ ದೈತ್ಯ ಕುಮಾರಕಾನ್ ॥೧೦॥

ಅಧ್ಯಾಪಯಾಮಾಸ ಚ ತಾಂ ಬ್ರಹ್ಮವಿದ್ಯಾಂ ಸು ಶೋಭನಾಂ ।
ದುರ್ಲಂಘ್ಯಾಂ ಚಾsತ್ಮನೋ ದೃಷ್ಟ್ವಾ ಶಕ್ರಾದಿಭಿರಪಿ ಸ್ವಯಂ ॥

ಪುತ್ರೇಣ ಲಂಘಿತಾ ಮಾಜ್ಞಾಂ ಹಿರಣ್ಯಃ ಪ್ರಾಹ ದಾನವಾನ್ ।
ಏನಂ ನಾನಾವಿಧೈ ರ್ವಧ್ಯಂ ದುಃಷ್ಪುತ್ರಂ ಹಂತು ಮರ್ಹಥ ॥೧೨॥

ಏವ ಮುಕ್ತಾ ಸ್ತದಾ ತೇನ ದೈತ್ಯೇನ ಸು ದುರಾತ್ಮನಾ ।
ನಿಜಘ್ನು ರ್ದೇವ ದೇವಸ್ಯ ಭೃತ್ಯಂ ಪ್ರಹ್ಲಾದ ಮವ್ಯಯಂ ॥೧೩॥

---

ನನ್ನನ್ನೇ ಭಕ್ತಿಯಿಂದ ಪೂಜಿಸು. ಬುದ್ಧಿವಂತನಾದ ಪ್ರಹ್ಲಾದನು ಹಿರಣ್ಯಕಶಿಪುವಿನ ಈ ಮಾತನ್ನು ಕೇಳಿದರೂ, ವಿಷ್ಣುವಿನ ಪೂಜೆಯನ್ನು ಬಿಡಲೇ ಇಲ್ಲ.

೧೦–೧೨. ಪ್ರಹ್ಲಾದನು "ನಾರಾಯಣನಿಗೆ ನಮಸ್ಕಾರ" ಎಂದು ಪದೇ ಪದೇ ಹೇಳುತ್ತಾ ನಾರಾಯಣನನ್ನೇ ಪೂಜಿಸುತ್ತಿದ್ದನು. ಅಲ್ಲದೆ ಈ ಮಂಗಳಕರವಾದ, ಪರಬ್ರಹ್ಮತತ್ವದ ತಿಳಿವಳಿಕೆಗೂ ಸಾಧನವಾದ, ವಿಷ್ಣುವಿನ ನಾಮ, ಜಪ, ಪೂಜೆಗಳನ್ನೇ ತನ್ನ ಸಹಪಾಠಿಗಳಿಗೂ, ಮಕ್ಕಳಿಗೂ ಉಪದೇಶಿಸಿದನು. ಈ ರೀತಿಯಾಗಿ ಇಂದ್ರನೇ ಮೊದಲಾದ ದೇವತೆಗಳಿಗೂ ಉಲ್ಲಂಘಿಸಲು ಅಸಾಧ್ಯವಾದ ತನ್ನ ಅಪ್ಪಣೆಯನ್ನು ಮೀರಿ ನಡೆಯುತ್ತಿರುವ ಮಗನಿಗೆ ಬುದ್ಧಿ ಕಲಿಸಲು ರಾಕ್ಷಸರಿಗೆ ಅಪ್ಪಣೆ ಮಾಡಿದನು. ಅಲ್ಲದೆ ಅನೇಕ ವಿಧವಾದ ಶಿಕ್ಷೆಗಳಿಂದ ಕೊಲ್ಲಲ್ಪಡಲು ಯೋಗ್ಯನಾಗಿರುವ ಈ ಕೆಟ್ಟ ಮಗನನ್ನು ನೀವು ಕೊಲ್ಲಿರಿ, ಎಂದೂ ಅಪ್ಪಣೆ ಮಾಡಿದನು.

೧೩–೧೫. ಹೀಗೆ ಹಿರಣ್ಯಕಶಿಪುವಿನಿಂದ ಅಪ್ಪಣೆಮಾಡಲ್ಪಟ್ಟ ದುಷ್ಟರಾದ ರಾಕ್ಷಸರು ದೇವದೇವನಾದ ವಿಷ್ಣುವಿನ ಭಕ್ತನೂ ಸೇವಕನೂ ಆದ

ತತ್ರ ತತ್ಪ್ರತಿಕೃತಂ ತದಾ ಸುರೈಃ ।
ದೈತ್ಯ ರಾಜ ತನಯುಂ ದ್ವಿಜೋತ್ತಮಾಃ ॥
ಕ್ಷೀರ ವಾರಿನಿಧಿ ಶಾಯಿನಃ ಪ್ರಭೋಃ ।
ನಿಷ್ಫಲಂ ತ್ವಥ ಬಭೂವ ತೇಜಸಾ ॥೧೪॥
ತದಾಽಥ ಗರ್ವ ಭಿನ್ನಸ್ಯ ಹಿರಣ್ಯಕಶಿಪೋಃ ಪ್ರಭುಃ ।
ತತ್ರೈವಾ ವಿರಭೂದ್ಧಂತುಂ ನೃಸಿಂಹಾ ಕೃತಿ ಮಾಸ್ಥಿತಃ ॥೧೫॥
ಜಘಾನ ಚ ಸುತಂ ಪ್ರೇಕ್ಷ್ಯ ಪಿತರಂ ದಾಸವಾಧಮಂ ।
ಬಿಭೇದ ತತ್ಕ್ಷಣಾದೇವ ಶರಜ್ಯೈಃ ನಿಶಿತೈಃ ಶಠೈಃ ॥೧೬॥
ತತೋ ನಿಹತ್ಯ ತಂ ದೈತ್ಯಂ ಸಭಾಂಧವ ಮಘಾಪಹಃ ।
ಪೀಡಯಾ ಮಾಸ ದೈತ್ಯೇಂದ್ರಂ ಯುಗಾಂತಾಗ್ನಿರಿವಾಪರಃ ॥೧೭॥
ನಾದೈಸ್ತಸ್ಯ ನೃಸಿಂಹಸ್ಯ ಘೋರೈ ರ್ವಿತ್ರಾಸಿತಂ ಜಗತ್ ।
ಆ ಬ್ರಹ್ಮ ಭುವನಾ ದ್ವಿಪ್ರಾಃ ಪ್ರಚಚಾಲ ಚ ಸುವ್ರತಾಃ ॥೧೮॥

---

ನಾಶವಿಲ್ಲದ ಪ್ರಹ್ಲಾದನಿಗೆ ಚಿತ್ರಹಿಂಸೆಯನ್ನು ಕೊಟ್ಟರು. ಆದರೆ ಕ್ಷೀರ ಸಾಗರದಲ್ಲಿ ಮಲಗಿರುವ ವಿಷ್ಣುವಿನ ತೇಜಸ್ಸಿನಿಂದ ಪ್ರಹ್ಲಾದನಿಗೆ ರಾಕ್ಷಸರು ಕೊಟ್ಟ ಹಿಂಸೆಗಳೆಲ್ಲವೂ ವ್ಯರ್ಥವಾದುವು. ಆಗ ಗರ್ವದಿಂದ ಮೆರೆಯುತ್ತಿದ್ದು ಈಗ ಭಗ್ನನಾಗಿರುವ ಹಿರಣ್ಯಕಶಿಪುವನ್ನು ಕೊಲ್ಲುವುದಕ್ಕಾಗಿ ವಿಷ್ಣುವು ನರಸಿಂಹಾವತಾರಮಾಡಿ ಅವನ ಹತ್ತಿರದಲ್ಲಿಯೇ ಆವಿರ್ಭವಿಸಿ ಬಂದನು.

೧೬–೧೮. ಬಾಲನಾದ ಪ್ರಹ್ಲಾದನನ್ನು ಕನಿಕರದಿಂದ ನೃಸಿಂಹನು ನೋಡಿ, ದುಷ್ಟರಾಕ್ಷಸನಾದ ಹಿರಣ್ಯಕಶಿಪುವನ್ನು ಆ ಕ್ಷಣದಲ್ಲಿ ತನ್ನ ಬಹಳ ಚೂಪಾದ ಬಾಣಗಳಂತಿರುವ ಉಗುರುಗಳಿಂದ ಸೀಳಿದನು. ಅನಂತರದಲ್ಲಿ ಹಿರಣ್ಯಕಶಿಪುವನ್ನು ಅವನ ನೆಂಟರಾದ ರಾಕ್ಷಸರನ್ನೂ ಎರಡನೆಯ ಪ್ರಳಯ ಕಾಲದ ಬೆಂಕಿಯೋ ಎಂಬಂತೆ ಕಾಣುತ್ತಾ ನಾರಾಯಣನು ನಾಶಮಾಡಿದನು. ನರಸಿಂಹನ ಭಯಂಕರವಾದ ಘರ್ಜನೆಗಳಿಂದ ಜಗತ್ತೆಲ್ಲವೂ ನಡುಗಿತು! ಬ್ರಹ್ಮಲೋಕದವರಿವಿಗೂ ಎಲ್ಲಾ ಲೋಕವೂ ಅಲ್ಲಾಡಿಹೋಯಿತು!

ದೃಷ್ಟ್ವಾ ಸುರಾಃಸುರ ಮಹೋರಗ ಸಿದ್ಧಸಾಧ್ಯಾ ।
ಸ್ತಸ್ಮಿನ್ ಕ್ಷಣೇ ಹರಿ ವಿರಿಂಚಿ ಮುಖಾ ನೃಸಿಂಹಂ ॥
ಧೈರ್ಯಂ ಬಲಂ ಚ ಸಮವಾಪ್ಯ ಯಯು ರ್ವಿಸೃಜ್ಯ ।
ಆ ದಿಙ್ಮುಖಾಂತ ಮಸುರಕ್ಷಣ ತತ್ಪರಾಶ್ಚ ॥೧೯॥

ತತಸ್ತೈ ರ್ಗತೈಃ ಸ್ಸೈಷ ದೇವೋ ನೃಸಿಂಹಃ ।
ಸಹಸ್ರಾಕೃತಿಃ ಸರ್ವಪಾ ತ್ಸರ್ವ ಬಾಹುಃ ॥
ಸಹಸ್ರೇಕ್ಷಣಃ ಸೋಮ ಸೂರ್ಯಾಗ್ನಿ ನೇತ್ರಃ ।
ತದಾ ಸಂಸ್ಥಿತಃ ಸರ್ವಮಾವೃತ್ಯ ಮಾಯೀ ॥೨೦॥

ತಂ ತುಷ್ಟುವುಃ ಸುರಶ್ರೇಷ್ಠಾ ಲೋಕಾಃಲೋಕಾಃಚಲೇ ಸ್ಥಿತಾಃ ।
ಸ ಬ್ರಹ್ಮಕಾಃ ಸಸಾಧ್ಯಾಶ್ಚ ಸಯಮಾಃ ಸಮರುದ್ಗಣಾಃ ॥೨೧॥

ಪರಾತ್ಪರತರಂ ಬ್ರಹ್ಮ ತತ್ತ್ವಾತ್ತ್ವಂ ತ್ತ್ವಮಯಂ ಭವಾನ್ ।
ಜ್ಯೋತಿಷಾಂ ತು ಪರಂ ಜ್ಯೋತಿಃ ಪರಮಾತ್ಮಾ ಜಗನ್ಮಯಃ ॥೨೨॥

---

೧೯-೨೧. ದೇವತೆಗಳು ಮತ್ತು ದೊಡ್ಡ ಸರ್ಪದೇವತೆಗಳು, ಸಿದ್ಧರು. ಸಾಧ್ಯರು, ಬ್ರಹ್ಮಾ, ಇಂದ್ರ, ಮೊದಲಾದ ದೇವತೆಗಳೂ ನೃಸಿಂಹ ನನ್ನು ನೋಡಿ, ಆಗ ಧೈರ್ಯವನ್ನೂ, ಮತ್ತು ಶಕ್ತಿಯನ್ನೂ, ಹೇಗೊ ಹಾಗೆ ಹೊಂದಿ, ದಿಕ್ಕಿನ ಕೊನೆಯ ಭಾಗದವರೆಗೂ ತಮ್ಮ ಪ್ರಾಣರಕ್ಷಣೆಗಾಗಿ ಓಡಿ ಹೋಗಿ, ರಾಕ್ಷಸರನ್ನು ನಿರ್ಮೂಲ ಮಾಡಲಾರಂಭಿಸಿದರು. ಅನಂತರ ಅವರು ಹೋಗಲಾಗಿ, ಸಾವಿರರೂಪುಳ್ಳ, ಎಲ್ಲರಿಗೂ ರಕ್ಷಕನಾದ ಎಲ್ಲಾ ಕಡೆಯಲ್ಲಿಯೂ ತೋಳುಳ್ಳ, ಸಾವಿರಾರು ಕಣ್ಣುಳ್ಳ, ಚಂದ್ರ, ಸೂರ್ಯ, ಅಗ್ನಿಗಳೇ ಕಣ್ಣಾಗಿ ಉಳ್ಳ, ಮಾಯಾಸ್ವರೂಪಧಾರಿಯಾದ ನೃಸಿಂಹನು ಎಲ್ಲವನ್ನೂ ಆವರಿಸಿಕೊಂಡಿದ್ದನು. ಶ್ರೇಷ್ಠರಾದ ದೇವತೆಗಳು ಲೋಕಾ ಲೋಕ, ಮುಂತಾದ ಪರ್ವತಗಳಲ್ಲಿದ್ದು, ಬ್ರಹ್ಮಾ, ಸಾಧ್ಯರು, ಯಮ, ಮರುತ್, ದೇವತೆಗಳು, ಇವರೆಲ್ಲರೂ ನರಸಿಂಹನನ್ನು ಸ್ತೋತ್ರಮಾಡಿದರು.

೨೨-೨೫. ಓ ಸ್ವಾಮಿಯೇ, ನೀನು ಪರಾತ್ಪರವಸ್ತುವೂ, ಅತ್ಯಂತ ಶ್ರೇಷ್ಠವಾದ ತತ್ತ್ವವೂ, ಆಗಿದ್ದೀಯೆ. ನೀನು ಎಲ್ಲಾ ತೇಜಸ್ಸುಗಳಿಗಿಂತಲೂ ಶ್ರೇಷ್ಠವಾದ ತೇಜಸ್ಸೂ ಆಗಿದ್ದೀಯೇ. ಪರ

ಸ್ಥೂಲಂ ಸೂಕ್ಷ್ಮಂ ಸುಸೂಕ್ಷ್ಮಂ ಚ ಶಬ್ದಬ್ರಹ್ಮಮಯಃ ಶುಭಃ ।
ವಾಗತೀತೋ ನಿರಾಲಂಬೋ ನಿರ್ದ್ವಂದ್ವೋ ನಿರುಪಪ್ಲವಃ ॥೨೩॥

ಯಜ್ಞಭುಗ್ಯಜ್ಞಮೂರ್ತಿಸ್ತ್ವಂ ಯಜ್ಞಿನಾಂ ಫಲದಃ ಪ್ರಭುಃ
ಭವಾನ್ಮತ್ಸ್ಯಾಕೃತಿಃ ಕೌರ್ಮ ಮಾಸ್ಥಾಯ ಜಗತಿ ಸ್ಥಿತಃ ॥೨೪॥

ವಾರಾಹೀಂ ಚೈವ ತಾಂ ಸೈಂಹೀ ಮಾಸ್ಥಾಯೇಹ ವ್ಯವಸ್ಥಿತಃ ।
ದೇವಾನಾಂ ದೇವರಕ್ಷಾರ್ಥಂ ನಿಹತ್ಯ ದಿತಿಜೇಶ್ವರಂ ॥೨೫॥

ದ್ವಿಜಶಾಪಚ್ಛಲೇನೈವ ಮವತೀರ್ಣೋಽಸಿ ಲೀಲಯಾ ।
ನ ದೃಷ್ಟಂ ಯತ್ತ್ವದನ್ಯಂ ಹಿ ಭವಾನ್ಸರ್ವಂ ಚರಾಽಚರಂ ॥೨೬॥

ಭವಾನ್ವಿಷ್ಣುರ್ಭವಾನ್ರುದ್ರೋ ಭವಾನೇವ ಪಿತಾಮಹಃ ।
ಭವಾನಾದಿರ್ಭವಾನಂತೋ ಭವಾನೇವ ವಯಂ ವಿಭೋ ॥೨೭॥

---

ಮಾತ್ರ, ಮತ್ತು ಜಗತ್ತುಗಳ ಸ್ವರೂಪನೂ ಆಗಿದ್ದೀಯೆ. ನೀನು ಸ್ಥೂಲ ಮತ್ತು ಸೂಕ್ಷ್ಮಶಬ್ದ ಬ್ರಹ್ಮಸ್ವರೂಪನೂ, ಮಂಗಳಕರವಾದುದು ಎಲ್ಲವೂ ಆಗಿದ್ದೀಯೆ. ನೀನು ಶಬ್ದದಿಂದ ವರ್ಣಿಸಲು ಅಸಾಧ್ಯನೂ, ಆಶ್ರಯವಿಲ್ಲದವನೂ, ದ್ವೈತವಿಲ್ಲದವನೂ, ತೊಂದರೆಯಿಲ್ಲದವನೂ, ಯಾಗದ ಫಲವನ್ನೂ, ಯಾಗದ ಸ್ವರೂಪವನ್ನೂ, ಯಜ್ಞದ ಆಹುತಿಗಳನ್ನೂ, ಸ್ವೀಕರಿಸುವವನೂ, ಸ್ವಾಮಿಯೂ ಆಗಿರುವೆ. ಮೀನಿನ ಆಕಾರವುಳ್ಳವನೂ, ಆಮೆಯ ಆಕಾರವುಳ್ಳವನೂ, ಆಗಿ ಜಗತ್ತಿನಲ್ಲಿ ಪ್ರಕಾಶಿಸಿದೆ! ಹಂದಿಯರೂಪ, ಸಿಂಹದರೂಪ, ಇವುಗಳನ್ನು ದರಿಸಿ, ಈ ಇಬ್ಬರು ರಾಕ್ಷಸರನ್ನೂ ಸಂಹರಿಸಿದೆ.

೨೬–೨೭. ನೀನು ಬ್ರಾಹ್ಮಣನ ಶಾಪದ ನೆಪದಿಂದ ಅನಾಯಾಸವಾಗಿಯೇ ಭೂಮಿಯಲ್ಲಿ ಅವತಾರಮಾಡಿದೆ. ನಿನಗಿಂತ ಬೇರೆಯಾದ ಪದಾರ್ಥವಾವುದೂ ಇಲ್ಲ. ನೀನೇ ಎಲ್ಲಾ ಚರಾಚರ ಪ್ರಪಂಚವೂ ಆಗಿದ್ದೀಯೆ. ನೀನೇ ವಿಷ್ಣು, ಬ್ರಹ್ಮ, ರುದ್ರ, ಆದಿ, ಅಂತ, ನಾವುಗಳು, ಜಗತ್ತು ಎಲ್ಲವೂ ಆಗಿದ್ದೀಯೆ. ಹೆಚ್ಚುಹೇಳಿ ಏನು ಪ್ರಯೋಜನ?

ಭವಾನೇವ ಜಗತ್ಸರ್ವಂ ಪ್ರಲಾಪೇನ ಕಿಮೀಶ್ವರ।
ಮಾಯಯಾ ಬಹುಧಾ ಸಂಸ್ಥ ಮದ್ವಿತೀಯ ಮಯಂ ಪ್ರಭೋ ॥
ಸ್ತೋಷ್ಯಾಮಸ್ತ್ವಾಂ ಕಥಂ ಭಾಸಿ ದೇವದೇವ ಮೃಗಾಧಿಪ।
ಸ್ತುತೋಽಪಿ ವಿವಿಧೈಸ್ತುತ್ಯೈ ರ್ಭಾವೈ ರ್ನಾನಾವಿಧೈಃ ಪ್ರಭುಃ॥೨೯॥
ನ ಜಗಾಮ ದ್ವಿಜಾಃ ಶಾಂತಿಂ ಮಾನಯನ್ಯೋನಿ ಮಾತ್ಮನಃ।
ಯೋ ನೃಸಿಂಹಸ್ತವಂ ಭಕ್ತ್ಯಾ ಪಠೇದ್ವಾರ್ಥಂ ವಿಚಾರಯೇತ್ ॥
ಶ್ರಾವಯೇದ್ವಾ ದ್ವಿಜಾನ್ ಸರ್ವಾನ್ ವಿಷ್ಣುಲೋಕೇ ಮಹೀಯತೇ
ತದಂತರೇ ಶಿವಂ ದೇವಾಃ ಸೇಂದ್ರಾಃ ಸಬ್ರಹ್ಮಕಾಃ ಪ್ರಭುಂ ॥೩೦॥
ಸಂಪ್ರಾಪ್ಯ ತುಷ್ಟುವುಃ ಸರ್ವಂ ವಿಜ್ಞಾಪ್ಯ ಮೃಗರೂಪಿಣಃ।
ತತೋ ಬ್ರಹ್ಮಾದಯ ಸ್ತೂರ್ಣಂ ಸಂಸ್ತೂಯ ಪರಮೇಶ್ವರಂ॥೩೨॥

---

ನೀನೇ ಸಮಸ್ತ ಪ್ರಪಂಚದ ಸ್ವರೂಪನೂ ಆಗಿ ಮಾಯೆಯಿಂದ ನಾನಾ ರೂಪನಾಗಿ ಕಾಣುತ್ತಿದ್ದೀಯೆ! ನೀನು ಎರಡನೆಯದಿಲ್ಲದವನಾಗಿ, ನೀನೇ ಸರ್ವವೂ ಆಗಿದ್ದೀಯೆ.

೨೯-೩೧. ಓ ದೇವದೇವನಾದ ನೃಸಿಂಹಸ್ವಾಮಿಯೇ, ನಿನ್ನ ಅಸಾಧಾರಣವಾದ ಪ್ರಕಾಶಸ್ವರೂಪವನ್ನು, ಸ್ತೋತ್ರಮಾಡಲು ನಾವು ಹೇಗೆ ಸಮರ್ಥರಾದೇವು? ಹೀಗೆ ಸ್ವಾಮಿಯು ಅನೇಕ ವಿಧವಾದ ಭಾವಗಳುಳ್ಳ ಸುತ್ತಿಗಳಿಂದ ಸ್ತೋತ್ರ ಮಾಡಲ್ಪಟ್ಟಾಗ್ಯೂ ತನ್ನ ಉಗ್ರ ಸ್ವರೂಪದಿಂದ ಶಾಂತಿಯನ್ನು ಹೊಂದಲೇ ಇಲ್ಲ! ಯಾರು ಈ ನೃಸಿಂಹನ ಸ್ತೋತ್ರವನ್ನು ಭಕ್ತಿಯಿಂದ ಓದುವರೋ, ಅದರ ಅರ್ಥವನ್ನು ತಿಳಿಯುತ್ತಾರೆಯೋ, ಅಥವಾ ಬ್ರಾಹ್ಮಣರಿಗೆ ಇದನ್ನು ಹೇಳುತ್ತಾರೋ, ಅವರು ವಿಷ್ಣು ಲೋಕದಲ್ಲಿ ಮೆರೆಯುತ್ತಾರೆ. ಈ ಮಧ್ಯದಲ್ಲಿ ಇಂದ್ರ, ಬ್ರಹ್ಮ, ಇವರಿಂದೊಡಗೂಡಿದ ದೇವತೆಗಳು ಸ್ವಾಮಿಯಾದ ಶಿವನನ್ನು ಸಮೀಪಿಸಿದರು.

೩೨-೩೪. ದೇವತೆಗಳೆಲ್ಲರೂ ನೃಸಿಂಹರೂಪಿಯಾದ ವಿಷ್ಣುವು ನಡೆಸಿದ ವೃತ್ತಾಂತವನ್ನೆಲ್ಲವನ್ನೂ ಶಿವನಿಗೆ ವಿಜ್ಞಾಪನೆ ಮಾಡಿದರು. ಅನಂತರದಲ್ಲಿ ಬ್ರಹ್ಮನೇ ಮೊದಲಾದವರು ಜಾಗ್ರತೆಯಾಗಿ ಪರಮೇಶ್ವರ

ಆತ್ಮತ್ರಾಣಾಯ ಶರಣಂ ಜಗ್ಮುಃ ಪರಮ ಕಾರಣಂ ।
ಮಂದರಸ್ಥಂ ಮಹಾದೇವಂ ಕ್ರೀಡಮಾನಂ ಸಹೋಮಯಾ ॥೩೩॥
ಸೇವಿತಂ ಗಣಗಂಧರ್ವೈಃ ಸಿದ್ಧೈರಪ್ಸರಸಾಂ ಗಣೈಃ ।
ದೇವತಾಭಿಃ ಸಹ ಬ್ರಹ್ಮಾ ಭೀತಭೀತಃ ಸಗದ್ಗದಂ ॥
ಪ್ರಣಮ್ಯ ದಂಡವದ್ಭೂಮೌ ತುಷ್ಟಾವ ಪರಮೇಶ್ವರಂ ॥೩೪॥

॥ ಬ್ರಹ್ಮೋವಾಚ ॥

ನಮಸ್ತೇ ಕಾಲಕಾಲಾಯ ನಮಸ್ತೇ ರುದ್ರಮನ್ಯವೇ ।
ನಮಃ ಶಿವಾಯ ರುದ್ರಾಯ ಶಂಕರಾಯ ಶಿವಾಯ ತೇ ॥೩೫॥
ಉಗ್ರೋಽಸಿ ಸರ್ವ ಭೂತಾನಾಂ ನಿಯಂತಾಽಸಿ ಶಿವೋಽಸಿ ನಃ ।
ನಮಃ ಶಿವಾಯ ಶರ್ವಾಯ ಶಂಕರಾಯಾರ್ತಿಹಾರಿಣೇ ॥೩೬॥

---

ರನ್ನು ಸ್ತೋತ್ರಮಾಡಿ, ತಮ್ಮ ರಕ್ಷಣೆಗಾಗಿ ಜಗತ್ತಿಗೆ ಮೂಲಕಾರಣನಾದ ಶಿವನನ್ನು ಮರೆಹೊಕ್ಕರು. ಆಗ ಶಿವನು ಮಂದರಪರ್ವತದಲ್ಲಿ ಪಾರ್ವತಿಯೊಂದಿಗೆ ಆಟವಾಡುತ್ತಿದ್ದನು. ಗಣಗಳು, ಗಂಧರ್ವರು, ಸಿದ್ಧರು, ಅಪ್ಸರೆಯರು, ಇವರೆಲ್ಲರಿಂದಲೂ ಸೇವಿಸಲ್ಪಡುತ್ತಿದ್ದ ಶಿವನ ಎದುರಿಗೆ ಬ್ರಹ್ಮನು ದೇವತೆಗಳೊಂದಿಗೆ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ, ಬಹಳ ಹೆದರಿಕೊಂಡು ಭಯಭಕ್ತಿಗಳಿಂದಕೂಡಿ ತೊದಲ್ನುಡಿಗಳಿಂದ ಶಿವನನ್ನು ಹೀಗೆ ಸ್ತೋತ್ರಮಾಡಿದನು.

೩೫–೩೬. ಬ್ರಹ್ಮನು ಹೇಳಿದನು:— ಯಮನನ್ನೂ ನಿಗ್ರಹಿಸಿದವನೂ, ಪ್ರಳಯಕಾಲದ ಯಮಸ್ವರೂಪನೂ, ಕೋಪದಿಂದ ಭಯಂಕರವಾದ ರುದ್ರಸ್ವರೂಪನೂ, ಶತ್ರುಗಳನ್ನು ಕೋಪದಿಂದ ನಾಶಮಾಡಬಲ್ಲವನೂ, ಶಿವನೂ, ದುಃಖರೋಗಗಳನ್ನು ನಾಶಮಾಡುವ ರುದ್ರನೂ, ಶಂಕರನೂ, ಧಾರ್ಮಿಕರಿಗೆ ಮಂಗಳವನ್ನುಂಟುಮಾಡುವವನೂ, ಶಿವನೂ, ನಿಯಮಗಳನ್ನು ಉಲ್ಲಂಘಿಸುವವರಿಗೆ ಉಗ್ರನೂ, ಎಲ್ಲಾ ಪ್ರಾಣಿಗಳಿಗೂ ನಿಯಾಮಕನೂ, ಶಂಕರನೂ, ಭಕ್ತರ ಕಷ್ಟಗಳನ್ನು ನಿವಾರಣೆಮಾಡು

ಮಯಸ್ಕರಾಯ ವಿಶ್ವಾಯ ವಿಷ್ಣವೇ ಬ್ರಹ್ಮಣೇ ನಮಃ ।
ಅಂತಕಾಯ ನಮಸ್ತುಭ್ಯ ಮುಮಾಯಾಃ ಪತಯೇ ನಮಃ ॥೩೭॥

ಹಿರಣ್ಯ ಬಾಹವೇ ಸಾಕ್ಷಾ ದ್ಧಿರಣ್ಯ ಪತಯೇ ನಮಃ ।
ಶರ್ವಾಯ ಸರ್ವರೂಪಾಯ ಪುರುಷಾಯ ನಮೋನಮಃ ॥೩೮॥

ಸದಸ ದ್ವ್ಯಕ್ತಿ ಹೀನಾಯ ಮಹತಃ ಕಾರಣಾಯ ತೇ ।
ನಿತ್ಯಾಯ ವಿಶ್ವರೂಪಾಯ ಜಾಯಮಾನಾಯ ತೇ ನಮಃ ॥೩೯॥

ಜಾತಾಯ ಬಹುಧಾ ಲೋಕೇ ಪ್ರಭೂತಾಯ ನಮೋನಮಃ ।
ರುದ್ರಾಯ ನೀಲರುದ್ರಾಯ ಕದ್ರುದಾಯ ಪ್ರಚೇತಸೇ ॥೪೦॥

ಕಾಲಾಯ ಕಾಲರೂಪಾಯ ನಮಃ ಕಾಲಾಂಗ ಹಾರಿಣೇ ।
ಮೀಢುಷ್ಟಮಾಯ ದೇವಾಯ ಶಿತಿಕಂಠಾಯ ತೇ ನಮಃ ॥೪೧॥

---

ವವನೂ, ಸುಖಕರನೂ, ವಿಶ್ವಸ್ವರೂಪನೂ, ವಿಷ್ಣುವೂ, ಬ್ರಹ್ಮನೂ, ಯಮಸ್ವರೂಪನೂ, ಪಾರ್ವತೀಪತಿಯೂ, ಆದ ಶಿವನಿಗೆ ನಮಸ್ಕಾರಗಳು.

೩೮–೪೦. ಚಿನ್ನದಂತೆ ಕಾಂತಿಸತ್ವಗಳುಳ್ಳ ಭುಜಗಳಿಂದ ಹಿರಣ್ಯಬಾಹು ಸ್ವರೂಪನೂ, ಸಾಕ್ಷಾತ್ ಹಿರಣ್ಯಪತಿಯೂ, ಶರ್ವನೂ, ಎಲ್ಲಾ ಪ್ರಪಂಚದ ಸ್ವರೂಪನೂ, ವ್ಯಕ್ತಿಗಳ ಶರೀರಗಳಲ್ಲಿ ಉಪಲಭ್ಯಮಾನನಾಗಿರುವ ಪುರುಷನೂ, ಅನಿತ್ಯವಸ್ತುಗಳಂತೆ ಇರುವಿಕೆ ಇಲ್ಲದಿರುವಿಕೆ ಈ ಎರಡೂ ಇಲ್ಲದೆ ನಿತ್ಯನಾದವನೂ, "ಮಹತ್" ಎಂಬ ಪ್ರಕೃತಿಯ ತತ್ತ್ವಕ್ಕೆ ಕಾರಣಭೂತನೂ, ನಿತ್ಯನೂ, ವಿಶ್ವಸ್ವರೂಪಿಯೂ, ಪ್ರಪಂಚ ಸ್ವರೂಪದಲ್ಲೇ ಹುಟ್ಟುವಂತೆ ತೋರುವವನೂ, ಹುಟ್ಟಿದವನೂ, ನಾನಾ ಬಗೆಯ ಅವತಾರಗಳಲ್ಲಿ ಹುಟ್ಟುವವನೂ, ರುದ್ರನೂ, ನೀಲರುದ್ರನೂ, ವರುಣನೂ, ಆದ ನಿನಗೆ ನಮಸ್ಕಾರಗಳು.

೪೧–೪೩. ಕಾಲಸ್ವರೂಪನೂ, ಪ್ರಳಯಕಾಲಸ್ವರೂಪನೂ, ಕಾಲದ ಭಾಗಗಳೆಲ್ಲವನ್ನೂ ಅಪಹರಿಸುವಂತೆ ಅತಿಕ್ರಮಿಸಿರುವವನೂ, ಎಲ್ಲಾ ಸುಖವನ್ನೂ ಅನುಗ್ರಹಿಸುವವನೂ, ದೇವನೂ, ಶಂಭುವೂ, ಪರಮಾತ್ಮನೂ

ಮಹೀಯಸೇ ನಮಸ್ತುಭ್ಯಂ ಹಂತ್ರೇ ದೇವಾರಿಣಾಂ ಸದಾ ।
ತಾರಾಯ ಚ ಸುತಾರಾಯ ತಾರಣಾಯ ನಮೋನಮಃ ॥೪೨॥

ಹರಿಕೇಶಾಯ ದೇವಾಯ ಶಂಭವೇ ಪರಮಾತ್ಮನೇ ।
ದೇವಾನಾಂ ಶಂಭವೇ ತುಭ್ಯಂ ಭೂತಾನಾಂ ಶಂಭವೇ ನಮಃ ॥೪೩॥

ಶಂಭವೇ ಹೈಮವತ್ಯಾಶ್ಚ ಮನ್ಯವೇ ರುದ್ರರೂಪಿಣೇ ।
ಕಪರ್ದಿನೇ ನಮಸ್ತುಭ್ಯಂ ಕಾಲಕಂಠಾಯ ತೇ ನಮಃ ॥೪೪॥

ಹಿರಣ್ಯಾಯ ಮಹೇಶಾಯ ಶ್ರೀಕಂಠಾಯ ನಮೋನಮಃ ।
ಭಸ್ಮದಿಗ್ಧ ಶರೀರಾಯ ದಂಡ ಮುಂಡೀಶ್ವರಾಯ ಚ ॥೪೫॥

ನಮೋ ಹ್ರಸ್ವಾಯ ದೀರ್ಘಾಯ ವಾಮನಾಯ ನಮೋನಮಃ ।
ನಮ ಉಗ್ರ ತ್ರಿಲೋಕಾಯ ಉಗ್ರಾಯ ಚ ನಮೋನಮಃ ॥೪೬॥

ಭೀಮಾಯ ಭೀಮರೂಪಾಯ ಭೀಮ ಕರ್ಮರತಾಯ ಚ ।
ಅಗ್ರೇವಧಾಯ ವೈ ಭೂತ್ವಾ ನಮೋ ದೂರೇ ವಧಾಯ ಚ ॥೪೭॥

---

ದೇವತೆಗಳಿಗೆ ಸುಖವನ್ನುಂಟು ಮಾಡುವವನೂ, ಭೂತಗಳಿಗೆ ಸುಖವನ್ನುಂಟುಮಾಡುವವನೂ, ಭಕ್ತರನ್ನು ಸಂಸಾರ ಸಾಗರದಿಂದ ದಾಟಿಸುವತಾರಕನೂ, ಸುತಾರನೂ, ಲೋಕೋದ್ಧಾರಕನೂ. ಹರಿಕೇಶನೂ, ಶಂಭುವೂ, ಆದ ನಿನಗೆ ನಮಸ್ಕಾರಗಳು.

೪೪–೪೬. ಪಾರ್ವತಿಗೂ ಸುಖವನ್ನುಂಟುಮಾಡುವವನೂ, ಯಾಗಸ್ವರೂಪನೂ, ರುದ್ರನೂ, ಜಟಾಧಾರಿಯೂ, ಕಪ್ಪಾದ ಕಣ್ಣುಳ್ಳವನೂ, ಚಿನ್ನದರೂಪನೂ, ಪರಮೇಶ್ವರನೂ, ಶ್ರೀಕಂಠನೂ, ಬೂದಿಬಳಿದ ದೇಹವುಳ್ಳವನೂ, ದಂಡ ಮುಂಡೀಶ್ವರನೆಂದು ಹೆಸರು ಪಡೆದಿರುವನೂ, ಕುಳ್ಳನೂ, ಉದ್ದವಾದವನೂ, ವಾಮನರೂಪನೂ, ಆದ ಶಿವನಿಗೆ ನಮಸ್ಕಾರಗಳು. ತೀಕ್ಷ್ಣವಾದ ಶೂಲವುಳ್ಳ, ಮೂರು ಲೋಕಗಳಲ್ಲೂ ಭಯಂಕರರೂಪುಳ್ಳ, ಶಿವನಿಗೆ ಅನೇಕ ನಮಸ್ಕಾರಗಳು.

೪೭–೪೮. ಭಯಂಕರಸ್ವರೂಪನೂ, ಶತ್ರುಗಳಿಗೆ ಭಯಂಕರವಾದ ರೂಪಧಾರಿಯೂ, ಭಯಂಕರವಾದ ಕೆಲಸದಲ್ಲಿಯೂ ಹಿಂಜರಿಯದ

ಧನ್ವಿನೇ ಶೂಲಿನೇ ತುಭ್ಯಂ ಗದಿನೇ ಹಲಿನೇ ನಮಃ ।
ಚಕ್ರಿಣೇ ವರ್ಮಿಣೇ ನಿತ್ಯಂ ದೈತ್ಯಾನಾಂ ಕರ್ಮಭೇದಿನೇ ॥೪೮॥
ಸದ್ಯಾಯ ಸದ್ಯರೂಪಾಯ ಸದ್ಯೋಜಾತಾಯ ತೇ ನಮಃ ।
ವಾಮಾಯ ವಾಮರೂಪಾಯ ವಾಮನೇತ್ರಾಯ ತೇ ನಮಃ ॥೪೯॥
ಅಘೋರರರೂಪಾಯ ವಿಕಟಾಯ ವಿಕಟಶರೀರಾಯ ತೇ ನಮಃ ।
ಪುರುಷರೂಪಾಯ ಪುರುಷೈಕ ತತ್ಪುರುಷಾಯ ವೈ ನಮಃ ॥೫೦॥
ಪುರುಷಾರ್ಥಪ್ರದಾನಾಯ ಪತಯೇ ಪರಮೇಷ್ಠಿನೇ ।
ಈಶಾನಾಯ ನಮಸ್ತುಭ್ಯ ಮೀಶ್ವರಾಯ ನಮೋನಮಃ ॥೫೧॥
ಬ್ರಹ್ಮಣೇ ಬ್ರಹ್ಮರೂಪಾಯ ನಮಃ ಸಾಕ್ಷಾಚ್ಛಿವಾಯ ತೇ ।
ಸರ್ವ ವಿಷ್ಣುಃ ನೃಸಿಂಹಸ್ಯ ರೂಪಮಾಸ್ಥಾಯ ವಿಶ್ವಕೃತ್ ॥೫೨॥

---

ಆಸಕ್ತಿಯುಳ್ಳವನೂ, ಶತ್ರುಗಳನ್ನು ಎದುರಿಗೆ ಕಂಡ ಕೂಡಲೇ ಅವರನ್ನು ನಾಶಮಾಡುವವನೂ, ದೂರದೇಶಗಳಲ್ಲಿರುವ ಶತ್ರುಗಳನ್ನು ಎಲ್ಲಿಂದ ಬೇಕಾದರೂ ನಾಶಮಾಡಬಲ್ಲವನೂ, ಶ್ರೇಷ್ಠಬಿಲ್ಲುಗಾರನೂ, ಶೂಲ ಧಾರಿಯೂ, ಗದಾಧಾರಿಯೂ, ನೇಗಿಲುಹಿಡಿದಿರುವವನೂ, ಚಕ್ರವನ್ನು ಹಿಡಿದಿರುವವನೂ, ರಾಕ್ಷಸರಕರ್ಮಗಳೆಲ್ಲವನ್ನೂ ನಾಶಮಾಡುವವನೂ, ಸರ್ವಸ್ವರೂಪನೂ ಆದ ಶಿವನಿಗೆ ಅನೇಕ ನಮಸ್ಕಾರಗಳು.

೪೯-೫೨. ಸದ್ಯ, ಸದ್ಯರೂಪ, ಸದ್ಯೋಜಾತ, ಎಂಬ ಮಂತ್ರಗಳಲ್ಲಿ ಪ್ರತಿಪಾದ್ಯನಾಗಿರುವ ದೇವಸ್ವರೂಪನೂ, ವಾಮ ಎಂಬ ಮಂತ್ರದಲ್ಲಿ ಆರಾಧ್ಯನಾದ ದೇವಸ್ವರೂಪನೂ ಆದ, ಸುಂದರರೂಪನೂ, ಸುಂದರವಾದ ಕಣ್ಣುಗಳುಳ್ಳವನೂ, ಶಾಂತಸ್ವರೂಪನೂ, ವಿಚಿತ್ರನೂ, ವಿಚಿತ್ರಶರೀರಧಾರಿಯೂ, ಆದ ಪುರುಷರೂಪನೂ, ಉತ್ತಮಪುರುಷ ರೂಪನೂ ಆದ ನಾಲ್ಕು ಪುರುಷಾರ್ಥಗಳನ್ನೂ, ಕೊಡುವ ಲೋಕೇಶನೂ, ಪರಬ್ರಹ್ಮಸ್ವರೂಪನೂ, ಆದ, ಈಶಾನಸ್ವರೂಪನೂ, ಈಶ್ವರನೂ, ಬ್ರಹ್ಮಸ್ವರೂಪನೂ, ದೊಡ್ಡ ಆಕಾರವುಳ್ಳವನೂ, ಆದ, ಸಾಕ್ಷಾತ್ ಮಂಗಳ ಸಸ್ವರೂಪನೂ, ವಿಷ್ಣು, ನರಸಿಂಹ ಮುಂತಾದ ಎಲ್ಲಾ ರೂಪಗಳನ್ನು ಹೊಂದಿ, ಪ್ರಪಂಚಕ್ಕೆ ಕ್ಷೇಮಕಾರಿಯೂ ಆದ, ಶಿವನಿಗೆ ಅನೇಕ ನಮಸ್ಕಾರಗಳು.

ಹಿರಣ್ಯಕಶಿಪುಂ ಹತ್ವಾ ಕರಜೈರ್ನಿಶಿತೈಃ ಸ್ವಯಂ ।
ದೈತ್ಯೇಂದ್ರೈರ್ಬಹುಭಿಃ ಸಾರ್ಧಂ ಹಿತಾರ್ಥಂ ಜಗತಾಂ ಪ್ರಭುಃ ॥೫೩॥
ಸೈಂಹೀಂ ಸಮಾನಯುನ್ಯೋನಿಂ ಬಾಧತೇ ನಿಖಿಲಂ ಜಗತ್ ।
ಯತ್ಕೃತ್ಯ ಮತ್ರ ದೇವೇಶ ತತ್ಕುರುಷ್ವ ಭವಾನಿಹ ॥೫೪॥
ಉಗ್ರೋಽಸಿ ಸರ್ವದುಷ್ಟಾನಾಂ ನಿಯಂತಾಽಸಿ ಶಿವೋಽಸಿ ನಃ ।
ಕಾಲಕೂಟಾದಿ ವಪುಷಾ ತ್ರಾಹಿ ನಃ ಶರಣಾಗತಾನ್ ॥೫೫॥
ಶುಕ್ರಂ ತು ವೃತ್ತಂ ವಿಶ್ವೇಶ ಕ್ರೀಡಾ ವೈ ಕೇವಲಂ ವಯಂ ।
ತವೋನ್ಮೇಷ ನಿಮೇಷಾಭ್ಯಾ ಮಸ್ಮಾಕಂ ಪ್ರಲಯೋದಯೌ ॥೫೬॥
ಉನ್ಮೀಲಯೇ ತ್ವತ್ತಯಿ ಬ್ರಹ್ಮ ನ್ವಿನಾಶೋಽಸ್ತಿ ನ ತೇ ಶಿವ ।
ಸಂತಪ್ತಾಃ ಸ್ಮೋ ವಯಂ ದೇವ ಹರಿಣಾಽಮಿತ ತೇಜಸಾ ॥೫೭॥

---

೫೩–೫೬. ಹಿರಣ್ಯಕಶಿಪುವನ್ನು ತೀಕ್ಷ್ಣವಾದ ಉಗುರುಗಳಿಂದ ನೃಸಿಂಹಸ್ವಾಮಿಯು ಲೋಕಹಿತಾರ್ಥವಾಗಿ ಕೊಂದಮೇಲೂ, ಶಾಂತನಾಗದೆ ನೃಸಿಂಹನು ತನ್ನ ಉಗ್ರರೂಪದಲ್ಲಿ ಜಗತ್ತಿಗೆ ಭಯಂಕರನಾಗಿದ್ದಾನೆ. ಈ ಸಂದರ್ಭದಲ್ಲಿ ಏನನ್ನು ಮಾಡಬೇಕೋ ಅದನ್ನು ತಾವೇ ದಯವಿಟ್ಟು ಮಾಡಬೇಕು. ಎಲ್ಲಾ ದುಷ್ಟರಿಗೂ, ನೀನು ಭಯಂಕರನಾಗಿಯೂ, ಸಕಲ ಲೋಕಗಳಿಗೆ ನಿಯಾಮಕನಾಗಿಯೂ, ಮಂಗಳಕರನಾಗಿಯೂ, ಇದ್ದೀಯೆ. ನೀನು ದಯವಿಟ್ಟು ಶರಣಾಗತರಾಗಿಬಂದ ನಮ್ಮನ್ನು ರಕ್ಷಿಸುವುದಕ್ಕಾಗಿ ಕಾಲಕೂಟವಿಷವನ್ನು ನುಂಗಿದ ಶರೀರಧಾರಣೆಯನ್ನು ಮಾಡಿ ಕಾಪಾಡಿದಂತೆ ಈಗಲೂ ಮಾಡಬೇಕು. ಓ ಶಿವನೇ, ನಿನ್ನ ನಡೆವಳಿಕೆಯು ಅತ್ಯಂತ ಪರಿಶುದ್ಧವಾದುದು. ನಾವು ನಿನಗೆ ಆಟದ ವಸ್ತುಗಳು. ನೀನು ರೆಪ್ಪೆಮುಚ್ಚಿತೆಗೆಯುವುದರೊಳಗಾಗಿ ನಮಗೆ ಪ್ರಳಯಕಾಲ, ಸೃಷ್ಟಿಕಾಲಗಳು ಉಂಟಾಗಿ ಸಾಗುತ್ತವೆ.

೫೭–೫೯. ನಿನ್ನ ರೆಪ್ಪೆಯ ಮುಚ್ಚುವಿಕೆಯಿಂದ ಪ್ರಪಂಚಗಳಿಗೆ ಲ್ಲಕ್ಕೊ ಪ್ರಳಯವು ಪುನಃ ಪುನಃ ಉಂಟಾಗುತ್ತಿದ್ದರೂ ನೀನುಮಾತ್ರ ನಿತ್ಯನಾಗಿರುವೆ! ಬಹಳ ತೇಜಸ್ವಿಯಾದ ನೃಸಿಂಹನಿಂದ ನಾವುಗಳೆಲ್ಲರೂ

ಸರ್ವ ಲೋಕ ಹಿತಾಯೈನಂ ತತ್ತ್ವಂ ಸಂಹರ್ತು ಮಿಚ್ಛಸಿ ।
॥ ಸೂತ ಉವಾಚ ॥
ವಿಜ್ಞಾಪಿತ ಸ್ತಥಾ ದೇವಃ ಪ್ರಹಸನ್ ಪ್ರಾಹ ತಾನ್ ಸುರಾನ್ ॥೫೮॥
ಅಭಯಂ ಚ ದದೌ ತೇಷಾಂ ಹನಿಷ್ಯಾಮೀತಿ ತಂ ಪ್ರಭುಃ ।
ಸೋಽಪಿ ಶಕ್ರಃ ಸುರೈಃ ಸಾರ್ಧಂ ಪ್ರಣಿಪತ್ಯ ಯಥಾಽಽಗತಂ ॥೫೯॥
ಜಗಾಮ ಭಗವಾನ್ಬ್ರಹ್ಮಾ ತಥಾಽನ್ಯೇ ಚ ಸುರೋತ್ತಮಾಃ ।
ಅಥೋತ್ಥಾಯ ಮಹಾದೇವಃ ಶಾರಭಂ ರೂಪಮಾಸ್ಥಿತಃ ॥೬೦॥
ಯಯೌ ಪ್ರತಿ ನೃಸಿಂಹಸ್ಯ ಗರ್ವಿತಸ್ಯ ಮೃಗಾಶಿನಃ ।
ಅಪಹೃತ್ಯ ತದಾ ಪ್ರಾಣಾನ್ ಶರಭಃ ಸುರಪೂಜಿತಃ ॥೬೧॥
ಸಿಂಹಾತ್ತತೋ ನರೋ ಭೂತ್ವಾ ಜಗಾಮ ಚ ಯಥಾ ಕ್ರಮಂ ।
ಏವಂ ಸ್ತುತ ಸ್ತದಾ ದೇವೈ ರ್ಜಗಾಮ ಸ ಯಥಾಕ್ರಮಂ ॥೬೨॥

---

ಬಹಳ ಸಂಕಟಕ್ಕೀಡಾಗಿದ್ದೇವೆ. ಎಲ್ಲಾ ಲೋಕದ ಕ್ಷೇಮಕ್ಕಾಗಿ ಈ ನೃಸಿಂಹನ ಉಗ್ರತನವನ್ನು ನಾಶಮಾಡಬೇಕು. ಎಂದು ಪ್ರಾರ್ಥಿಸುತ್ತೇವೆ.

೬೦. ಸೂತನು ಹೇಳಿದನು:— ಹೀಗೆ ದೇವತೆಗಳು ವಿಜ್ಞಾಪನೆ ಮಾಡಿಕೊಳ್ಳಲಾಗಿ, ಶಿವನು ಸ್ವಲ್ಪ ನಕ್ಕು ದೇವತೆಗಳೊಡನೆ ಹೀಗೆ ಪ್ರೀತಿಯ ಮಾತನ್ನಾಡಿದನು. ಮತ್ತು ನೃಸಿಂಹನನ್ನು ಅಡಗಿಸುತ್ತೇನೆಂದು ಅವರಿಗೆ ಸ್ವಾಮಿಯಾದ ಶಿವನು ಅಭಯವನ್ನು ಕೊಟ್ಟನು. ಇಂದ್ರನೂ ಕೂಡ ದೇವತೆಗಳೊಡನೆ ಶಿವನಿಗೆ ನಮಸ್ಕರಿಸಿ ಬಂದದಾರಿಯಲ್ಲಿಯೇ ಹಿಂತಿರುಗಿದನು. ಬ್ರಹ್ಮ ಮತ್ತು ಇತರ ದೇವಶ್ರೇಷ್ಠರೂ ಹಿಂತಿರುಗಿದರು. ಅನಂತರದಲ್ಲಿ ಶಿವನು ಎದ್ದು ಎಂಟುಕಾಲುಗಳುಳ್ಳ ಶರಭ ಮೃಗದ ರೂಪವನ್ನು ತಾಳಿದನು.

೬೧-೬೨. ಮೃಗಗಳನ್ನು ತಿನ್ನುವ ಕೊಬ್ಬಿದ ನರಸಿಂಹನ ಮೇಲೆ ಶರಭ ರೂಪವನ್ನು ಧರಿಸಿದ ಶಿವನು ಯುದ್ಧಕ್ಕೆ ಹೊರಟನು. ಕ್ಷಣಮಾತ್ರದಲ್ಲೇ ಶರಭಮೃಗರೂಪಿಯಾದ ಶಿವನು ನೃಸಿಂಹನ ಪ್ರಾಣವನ್ನು

ಯಃ ಪಠೇಚ್ಛೃಣುಯಾದ್ವಾಽಪಿ ಸಂಸ್ತವಂ ಶಾರ್ವಮುತ್ತಮಂ ।
ರುದ್ರಲೋಕಮನುಪ್ರಾಪ್ಯ ರುದ್ರೇಣ ಸಹ ಮೋದತೇ ॥೬೩॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ನೃಸಿಂಹಾವತಾರ ಶರಭಾವತಾರ ವಿಷಯ ವಿವರಣಂ ನಾಮ ಪಂಚನವತಿ ತಮೋಽಧ್ಯಾಯಃ

---

ತೆಗೆದನು. ಆದ್ದರಿಂದ ಶರಭಮೃಗದ ಆ ಶಿವನ ಅವತಾರವನ್ನು ದೇವತೆಗಳೆಲ್ಲರೂ ಪೂಜಿಸಿದರು. ನೃಸಿಂಹನು ಸಿಂಹರೂಪವನ್ನು ಬಿಟ್ಟು ಮನುಷ್ಯನಾಗಿ ಪೂರ್ವದಂತೆ ಹೊರಟುಹೋದನು. ಯಾರು ಶಿವನ ಸಂಬಂಧವಾದ ಶ್ರೇಷ್ಠವಾದ ಈ ಸ್ತೋತ್ರವನ್ನು ಓದುವರೋ ಅಥವಾ ಕೇಳುವರೋ ಅವರು ರುದ್ರಲೋಕವನ್ನು ಹೊಂದಿ ಶಿವನೊಂದಿಗೆ ಸಂತೋಷವಾಗಿರುವರು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೃಸಿಂಹಾವತಾರ ಶರಭಾವತಾರ ವಿಷಯಗಳನ್ನು ತಿಳಿಸುವ ತೊಂಬತ್ತೈದನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಷಷ್ಣವತಿ ತಮೋಽಧ್ಯಾಯಃ

॥ ಋಷಯಃ ಊಚುಃ ॥

ಕಥಂ ದೇವೋ ಮಹಾದೇವೋ ವಿಶ್ವಸಂಹಾರ ಕಾರಕಃ ।
ಶರಭಾಖ್ಯಂ ಮಹಾಘೋರಂ ವಿಕೃತಂ ರೂಪಮಾಸ್ಥಿತಃ ॥ ೧ ॥
ಕಿಂ ಕಿಂ ಧೈರ್ಯಂ ಕೃತಂ ತೇನ ಬ್ರೂಹಿ ಸರ್ವಮಶೇಷತಃ ।

॥ ಸೂತ ಉವಾಚ ॥

ಏವ ಮಭ್ಯರ್ಥಿತೋ ದೇವೈಃ ಮತಿಂ ಚಕ್ರೇ ಕೃಪಾಽಽಲಯಃ ॥ ೨ ॥
ಯತ್ತೇಜಸ್ತು ನೃಸಿಂಹಾಖ್ಯಂ ಸಂಹರ್ತುಂ ಪರಮೇಶ್ವರಃ ।
ತದರ್ಥ ಸ್ಮೃತವಾನ್ ರುದ್ರೋ ವೀರಭದ್ರಂ ಮಹಾಬಲಂ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತಾರನೆಯ ಅಧ್ಯಾಯವು.

೧-೨. ಋಷಿಗಳು ಹೇಳಿದರು:— ಮಹಾದೇವನಾದ ಪ್ರಪಂಚದ ಸಂಹಾರವನ್ನು ಮಾಡುವ ಶಿವನೂ, ಬಹಳ ಭಯಂಕರವಾದ ವಿಕಾರವಾದ ಶರಭಮೃಗದ ರೂಪವನ್ನು ಹೇಗೆ ಧರಿಸಿದನು? :— ಅವನು ಈ ರೂಪವನ್ನು ತಾಳಿ, ಯಾವಯಾವ ಬಗೆಯ ಧೈರ್ಯ ಪರಾಕ್ರಮವನ್ನು ತೋರಿಸಿದನು? ಈ ವಿಷಯಗಳೆಲ್ಲವನ್ನೂ ನೀವು ದಯವಿಟ್ಟು ಕೂಲಂಕಷವಾಗಿ ವಿವರದೊಡನೆ ಹೇಳಬೇಕು.

೩. ಸೂತನು ಹೇಳಿದನು :— ಹಿಂದೆ ಹೇಳಿದರೀತಿಯಲ್ಲಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ, ಕರುಣೆಗೆ ಆವಾಸನಾದ ಶಿವನು ನೃಸಿಂಹನೆಂಬ ತೇಜಸ್ಸನ್ನು ಸಂಹಾರ ಮಾಡಲು ಮನಸ್ಸುಮಾಡಿದನು. ಆದ್ದರಿಂದ ಅವನು ಮಹಾಬಲಿಷ್ಠನಾದ ವೀರಭದ್ರನನ್ನು ಜ್ಞಾಪಿಸಿಕೊಂಡನು.

ಆತ್ಮನೋ ಭೈರವಂ ರೂಪಂ ಮಹಾ ಪ್ರಲಯ ಕಾರಕಂ ।
ಆಜಗಾಮ ಪುರಾ ಸದ್ಯೋ ಗಣಾನಾ ಮಗ್ರತೋ ಹಸನ್ ॥ ೪ ॥

ಸಾಟ್ಟಹಾಸ್ಯೈ ರ್ಗಣವರ್ಯೈ ರುತ್ಪತದ್ಭಿ ರಿತಸ್ತತಃ ।
ನೃಸಿಂಹರೂಪೈ ರತ್ಯುಗ್ರೈಃ ಕೋಟಿಭಿಃ ಪರಿವಾರಿತಃ ॥ ೫ ॥

ತಾವದ್ಭಿ ರಭಿತೋ ವೀರೈ ನೃತ್ಯದ್ಭಿ ಶ್ಚ ಮುದಾಽನ್ವಿತೈಃ ।
ಕ್ರೀಡದ್ಭಿಶ್ಚ ಮಹಾಧೀರೈ ಬ್ರಹ್ಮಾದ್ಯೈಃ ಕಂದುಕೈರಿವ ॥ ೬ ॥

ಅದೃಷ್ಟಪೂರ್ವೈ ರನ್ಯೈಶ್ಚ ವೇಷ್ಟಿತೋ ವೀರವಂದಿತಃ ।
ಕಲ್ಪಾಂತ ಜ್ವಲನ ಜ್ವಾಲೋ ವಿಲಸ ಲ್ಲೋಚನ ತ್ರಯಃ ॥ ೭ ॥

ಆತ್ತಶಸ್ತ್ರೋ ಜಟಾಜೂಟೇ ಜ್ವಲದ್ಬಾಲೇಂದು ಮಂಡಿತಃ ।
ಬಾಲೇಂದು ದ್ವಿತಯಾ ಕಾರ ತೀಕ್ಷ್ಣದಂಷ್ಟ್ರಾಂ ಕುರದ್ವಯಃ ॥ ೮ ॥

---

೪–೬. ದೊಡ್ಡ ಪ್ರಳಯವನ್ನುಂಟುಮಾಡಬಲ್ಲ ಭಯಂಕರವಾದ ಸ್ವರೂಪವುಳ್ಳವನು. ಶಿವನ ಎದುರಿಗೆ ಗಣಗಳ ಮುಂದೆ ನಗುತ್ತಾ ಬಂದು ನಿಂತನು. ಅಟ್ಟಹಾಸ ಮಾಡುತ್ತಿರುವ, ಇಲ್ಲಿ ಅಲ್ಲಿ ಹಾರಾಡುತ್ತಿರುವ, ಶ್ರೇಷ್ಠವಾದ ಬಹಳ ಭಯಂಕರವಾದ, ನೃಸಿಂಹರೂಪವನ್ನು ತಾಳಿ, ಅನೇಕ ಕೋಟಿಗಟ್ಟಲೆಯ ಸಂಖ್ಯೆಯುಳ್ಳ ಗಣಗಳೊಡನೆ ಸುತ್ತು ವರಿಯಲ್ಪಟ್ಟು, ಭಯಂಕರನಾದ ವೀರಭದ್ರನು ಕಾಣಿಸಿಕೊಂಡನು. ಸುತ್ತಲೂ ಅಷ್ಟೇಮಂದಿ ವೀರರಿಂದಲೂ ನರ್ತನಮಾಡುತ್ತಾ ಸಂತೋಷ ದಿಂದುಬ್ಬಿರುವ, ಮಹಾಧೀರರಾದ ಬ್ರಹ್ಮನೇ ಮೊದಲಾದವರೊಡನೆ, ಚಂಡಿನಿಂದಲೋ ಎಂಬಂತೆ ಆಡುತ್ತಿರುವ, ಧೀರರಾದ ಗಣಗಳೊಡನೆ ಆ ವೀರಭದ್ರನು ಸುತ್ತುವರಿಯಲ್ಪಟ್ಟಿದ್ದನು.

೭–೮. ಹಿಂದೆ ಯಾವಾಗಲೂ ಕಾಣದಿದ್ದ, ಇನ್ನೂ ಕೆಲವು ವೀರರಿಂದ ಸುತ್ತುವರಿಯಲ್ಪಟ್ಟ, ಧೀರರಿಂದ ನಮಸ್ಕರಿಸಲ್ಪಟ್ಟ, ಪ್ರಳಯ ಕಾಲದ ಬೆಂಕಿಯಂತೆ ಜ್ವಲಿಸುತ್ತಿರುವ, ಪ್ರಕಾಶಮಾನವಾದ ಮೂರು ಕಣ್ಣುಳ್ಳ, ಶಸ್ತ್ರವನ್ನು ಹಿಡಿದಿರುವ, ಜಡೆಯ ಸಮೂಹದಲ್ಲಿ ಪ್ರಕಾಶ ಮಾನವಾದ ಬಾಲಚಂದ್ರನಿಂದ ಅಲಂಕರಿಸಲ್ಪಟ್ಟಿರುವ, ಎರಡನೆಯ ಎಳೆಯ ಚಂದ್ರಮನೋ ಎಂಬಂತಿರುವ ಚೂಪಾದ ಕೋರೇದಾಡೆಗಳ

ಆಖಂಡಲ ಧನುಃ ಖಂಡ ಸನ್ನಿಭ ಭ್ರೂಲತಾ ಯುತಃ ।
ಮಹಾಪ್ರಚಂಡ ಹುಂಕಾರ ಬಧಿರೀಕೃತ ದಿಙ್ಮುಖಃ ॥ ೯ ॥

ನೀಲಮೇಘಾಂಜನಾಕಾರ ಭೀಷಣ ಶ್ಮಶ್ರುರದ್ಭುತಃ ।
ವಾದ ಖಂಡ ಮಖಂಡಾಭ್ಯಾಂ ಭ್ರಾಮಯನ್ ತ್ರಿಶಿಖಂ ಮುಹುಃ ॥

ವೀರಭದ್ರೋಽಥ ಭಗವಾನ್ ವೀರಶಕ್ತಿ ವಿಜೃಂಭಿತಃ ।
ಸ್ವಯಂ ವಿಜ್ಞಾಪಯಾಮಾಸ ಕಿಮತ್ರ ಸ್ಮೃತಿಕಾರಣಂ ॥೧೧॥

ಆಜ್ಞಾಪಯ ಜಗತ್ಸ್ವಾಮಿನ್ ಪ್ರಸಾದಃ ಕ್ರಿಯತಾಂ ಮಯಿ ।

॥ ಶೀ ಭಗವಾನು ವಾಚ ॥

ಅಕಾಲೇ ಭಯ ಮುತ್ಪನ್ನಂ ದೇವಾನಾ ಮಪಿ ಭೈರವ ॥೧೨॥

---

ಮೊಳಕೆಗಳುಳ್ಳ, ಕಾಮನಬಿಲ್ಲಿನ ಮುರುಕಿಗೆ ಸಮಾನವಾದ ಬಳ್ಳಿಯಂತಿರುವ, ಹುಬ್ಬಿನಿಂದ ಕೂಡಿರುವ, ಬಹಳ ಪ್ರಚಂಡವಾದ ಹುಂಕಾರದಿಂದ ಕಿವುಡಾಗಿ ಮಾಡಲ್ಪಟ್ಟ ದಿಕ್ಕುಗಳ ಭಾಗಗಳುಳ್ಳ, ವೀರಭದ್ರನು ಕಾಣಿಸಿಕೊಂಡನು.

೧೦-೧೩. ಕಪ್ಪಾದ ಮೋಡ, ಕಪ್ಪು ಕಾಡಿಗೆ, ಇವುಗಳಂತೆ ಭಯಂಕರವಾದ ಮೀಸೆಗಡ್ಡಗಳುಳ್ಳ, ಆಶ್ಚರ್ಯಕರವಾದ, ಯಾವಾಗಲೂ ಸೋಲನ್ನೇ ಕಾಣದ, ತೋಳುಗಳಿಂದ ವಿವಾದವನ್ನು ಹೋಗಲಾಡಿಸುವ, ತ್ರಿಶೂಲವನ್ನು ಪುನಃ ಪುನಃ ತಿರುಗಿಸುತ್ತಿರುವ, ವೀರಶಕ್ತಿಯಿಂದ ಪ್ರಜ್ವಲಿಸುತ್ತಿರುವ, ವೀರಭದ್ರನು ಕಾಣಿಸಿಕೊಂಡು, ತಾನಾಗಿಯೇ ಶಿವನಿಗೆ ನಮಸ್ಕರಿಸಿ, "ತಾವು ನನ್ನನ್ನು ಸ್ಮರಿಸಲು ಕಾರಣವೇನು?" "ಜಗತ್ತಿಗೆ ಸ್ವಾಮಿಯೇ, ನನ್ನಲ್ಲಿ ಅನುಗ್ರಹಬುದ್ಧಿಯಿಂದ ಅಪ್ಪಣೆ ಮಾಡೋಣವಾಗಲಿ," ಎಂದು ವಿಜ್ಞಾಪನೆ ಮಾಡಿಕೊಂಡನು.

ಶ್ರೀ ಶಿವನು ಹೇಳಿದನು.:— ಎಲೈ ಭೈರವನೇ, ಆ ಕಾಲದಲ್ಲಿ ದೇವತೆಗಳಿಗೂ ಭಯವುಂಟಾಯಿತು. ಆ ನೃಸಿಂಹನೆಂಬ ಬೆಂಕಿಯು

ಜ್ವಲಿತಃ ಸ ನೃಸಿಂಹಾಗ್ನಿಃ ಶಮಯ್ಯೈನಂ ದುರಾಸದಂ ।
ಸಾಂತ್ವಯನ್ ಬೋಧಯಾದೌ ತಂ ತೇನ ಕಿಂ ನೋಪಶಾಮ್ಯತಿ ॥
ತತೋ ಮತ್ಪರಮಂ ಭಾವಂ ಭೈರವಂ ಸಂಪ್ರದರ್ಶಯ ।
ಸೂಕ್ಷ್ಮಂ ಸೂಕ್ಷ್ಮೇಣ ಸಂಹೃತ್ಯ ಸ್ಥೂಲಂ ಸ್ಥೂಲೇನ ತೇಜಸಾ ॥
ವಕ್ತ್ರಮಾನಯ ಕೃತ್ತಿಂ ಚ ವೀರಭದ್ರ ಮಮಾಽಜ್ಞಯಾ ।
ಇತ್ಯಾದಿಷ್ಟೋ ಗಣಾಧ್ಯಕ್ಷಃ ಪ್ರಶಾಂತ ವಪುರಾಸ್ಥಿತಃ ॥೧೫॥
ಜಗಾಮ ರಂಹಸಾ ತತ್ರ ಯತ್ರಾಽಸ್ತೇ ನರಕೇಸರೀ ।
ತತಸ್ತಂ ಬೋಧಯಾಮಾಸ ವೀರಭದ್ರೋ ಹರೋ ಹರಿಂ ॥೧೬॥
ಉವಾಚ ವಾಕ್ಯಮೀಶಾನಃ ಪಿತಾ ಪುತ್ರ ಮಿವೌರಸಂ ।

ಶ್ರೀ ವೀರಭದ್ರ ಉವಾಚ

---

ಜ್ವಲಿಸುತ್ತಿದೆ. ನಾಶಮಾಡಲು ಅಶಕ್ಯವಾದ, ಸಮೀಪಿಸಲೂ ಅಸಾಧ್ಯ ನೆಂದು ತೋರುತ್ತಿರುವ, ಇವನನ್ನು ನಾಶಮಾಡು. ಮೊದಲು ಒಳ್ಳೆಯ ಮಾತಿನಿಂದ ನೀನೇ ಶಾಂತನಾಗುತ್ತೀಯೋ ? ಇಲ್ಲವೋ ? ಎಂದು ಕೇಳು. ಏಕೆಂದರೆ ಒಳ್ಳೆಯ ಮಾತಿನಿಂದ ಎಲ್ಲವೂ ಉಪಶಾಂತಿಯನ್ನು ಪಡೆಯು ತ್ತದೆ.

೧೪–೧೬. ಶಾಂತನಾಗಿದ್ದರೆ ನನ್ನ ಶ್ರೇಷ್ಠಸ್ವರೂಪವಾದ ಭೈರವನ ಸ್ವರೂಪವನ್ನು ತೋರಿಸು. ಸೂಕ್ಷ್ಮವಾದ ಭಾಗವನ್ನು ಸೂಕ್ಷ್ಮವಾದ ತೇಜಸ್ಸಿನಿಂದಲೂ. ಸ್ಥೂಲಭಾಗವನ್ನು, ಸ್ಥೂಲವಾದ ತೇಜಸ್ಸಿ ನಿಂದಲೂ, ಸಂಹರಿಸಿ, ನೃಸಿಂಹಮುಖವನ್ನೂ, ಅದರ ಚರ್ಮವನ್ನೂ ಎಲೈ ವೀರಭದ್ರನೇ, ನನ್ನ ಅಪ್ಪಣೆಯಂತೆ ತೆಗೆದುಕೊಂಡು ಬಾ. ಹೀಗೆ ಅಪ್ಪಣೆಮಾಡಲ್ಪಟ್ಟ, ಗಣಗಳಿಗೆ ಪತಿಯಾದ, ವೀರಭದ್ರನು ಸೌಮ್ಯ ವಾದ ಆಕಾರವನ್ನು ತಾಳಿದನು. ಮತ್ತು ಎಲ್ಲಿ ನೃಸಿಂಹನಿದ್ದನೋ ಅಲ್ಲಿಗೆ ಜಾಗ್ರತೆಯಾಗಿ ಹೋದನು. ಅನಂತರದಲ್ಲಿ ವೀರಭದ್ರಸ್ವರೂಪಿ ಯಾದ ಶಿವನು ನಾರಾಯಣನನ್ನು ಹೀಗೆ ಎಚ್ಚರಿಸಿದನು.

೧೭–೨೦. ಶಿವರೂಪನಾದ ವೀರಭದ್ರನು, ತಂದೆಯು ತನ್ನ ಸ್ವಂತ ಮಗನಿಗೆ ಎಚ್ಚರಿಸುವಂತೆ, ನೃಸಿಂಹನನ್ನು ಕುರಿತು ಹೀಗೆ ಹೇಳಿದನು:—

ಜಗತ್ಸುಖಾಯ ಭಗವನ್ನವತೀರ್ಣೋಽಸಿ ಮಾಧವ ॥೧೭॥
ಸ್ಥಿತ್ಯರ್ಥೇನ ಚ ಯುಕ್ತೋಽಸಿ ಪರೇಣ ಪರಮೇಷ್ಠಿನಾ ।
ಜಂತುಚಕ್ರಂ ಭಗವತಾ ರಕ್ಷಿತಂ ಮತ್ಸ್ಯರೂಪಿಣಾ ॥೧೮॥
ಪುಚ್ಛೇನೈವ ಸಮಾಬಧ್ಯ ಭ್ರಮನ್ನೇಕಾರ್ಣವೇ ಪುರಾ ।
ಬಿಭರ್ಷಿ ಕೂರ್ಮರೂಪೇಣ ವಾರಾಹೇಣೋದ್ಧೃತಾ ಮಹೀ ॥೧೯॥
ಅನೇನ ಹರಿರೂಪೇಣ ಹಿರಣ್ಯಕಶಿಪು ರ್ಹತಃ ।
ವಾಮನೇನ ಬಲಿರ್ಬದ್ಧಸ್ತ್ವಯಾ ವಿಕ್ರಮತಾ ಪುನಃ ॥೨೦॥
ತ್ವಮೇವ ಸರ್ವಭೂತಾನಾಂ ಪ್ರಭಾ (ಭ) ವಃ ಪ್ರಭುರವ್ಯಯಃ ।
ಯದಾ ಯದಾ ಹಿ ಲೋಕಸ್ಯ ದುಃಖಂ ಕಿಂಚಿತ್ಪ್ರಜಾಯತೇ ॥೨೧॥

---

ಓ ಪೂಜ್ಯನಾದ ನಾರಾಯಣನೇ, ನೀನು ಲೋಕದ ಕ್ಷೇಮಕ್ಕಾಗಿ ಭೂಮಿಯಲ್ಲಿ ಅವತಾರಮಾಡಿದ್ದೀಯೆ. ಶ್ರೇಷ್ಠನಾದ ಬ್ರಹ್ಮನ ಇಚ್ಛೆಯಂತೆ ಜಗತ್ತನ್ನು ಕಾಪಾಡಲು ತೊಡಗಿದ್ದೀಯೆ. ಪೂಜ್ಯನಾದ ನೀನು ಮೀನಿನ ಸ್ವರೂಪವನ್ನು ಹೊಂದಿ ಪ್ರಾಣಿಗಳನ್ನು ಕಾಪಾಡಿದೆ. ಹಿಂದೆ ಒಂದಾಗಿದ್ದ ಮಹಾಸಮುದ್ರದಲ್ಲಿ ಆಮೆಯ ಸ್ವರೂಪದಿಂದ ಈಜುತ್ತಾ ನಿನ್ನ ಬಾಲದಿಂದಲೇ ಭೂಮಿಯನ್ನೆಲ್ಲವನ್ನೂ ಕಟ್ಟಿಹಾಕಿ ಜಗತ್ತನ್ನು ಕಾಪಾಡಿದೆ. ಅಲ್ಲದೆ ಹಂದಿಯ ರೂಪವನ್ನು ತಾಳಿ ಭೂಮಿಯನ್ನು ಉದ್ಧರಿಸಿದೆ. ಈ ಸಿಂಹದ ಸ್ವರೂಪದಿಂದ ಹಿರಣ್ಯಕಶಿಪುವನ್ನು ಕೊಂದಿದ್ದೀಯೆ. ಭೂಮಿಯನ್ನು ಅಳೆಯುತ್ತಾ ವಾಮನಾವತಾರವನ್ನುಮಾಡಿ ಬಲಿ ಎಂಬ ರಾಕ್ಷಸನನ್ನು ಕಟ್ಟಿಹಾಕಿದೆ.

೨೧-೨೪. ನೀನೇ ಎಲ್ಲಾ ಪ್ರಾಣಿಗಳಿಗೂ ಉತ್ಪತ್ತಿಕಾರಣನೂ, ನಾಶವಿಲ್ಲದ ಸ್ವರೂಪವುಳ್ಳವನೂ, ಆಗಿದ್ದೀಯೆ. ಯಾವಾಗ ಯಾವಾಗ ಲೋಕಕ್ಕೆ ಸ್ವಲ್ಪ ದುಃಖವುಂಟಾದರೂ, ಆಗಾಗ ತತ್‌ಕ್ಷಣದಲ್ಲಿಯೇ ಅವತರಿಸಿ ಜಗತ್ತನ್ನು ದುಃಖದಿಂದ ಪಾರುಮಾಡುತ್ತೀಯೆ. ಓ ಶಿವನ ಭಕ್ತನಾದ ವಿಷ್ಣುವೇ, ನಿನಗಿಂತಲೂ ಹೆಚ್ಚಾದವರೂ, ನಿನಗೆ ಸಮ

ತದಾ ತದಾ ಽವತೀರ್ಣಸ್ತ್ವಂ ಕರಿಷ್ಯಸಿ ನಿರಾಮಯಂ ।
ನಾಽಧಿಕಸ್ತ್ವತ್ಸಮೋಽಪ್ಯಸ್ತಿ ಹರೇ ಶಿವ ಪರಾಯಣ ॥೨೨॥

ತ್ವಯಾ ಧರ್ಮಾಶ್ಚ ವೇದಾಶ್ಚ ಶುಭೇ ಮಾರ್ಗೇ ಪ್ರತಿಷ್ಠಿತಾಃ ।
ಯದರ್ಥ ಮವತಾರೋಽಯಂ ನಿಹತಃ ಸೋಽಪಿ ಕೇಶವ ॥೨೩॥

ಅತ್ಯಂತಘೋರಂ ಭಗವನ್ ನರಸಿಂಹ ವಪುಸ್ತವ ।
ಉಪಸಂಹರ ವಿಶ್ವಾತ್ಮನ್ ತ್ವಮೇವ ಮಮ ಸನ್ನಿಧೌ ॥೨೪॥

॥ ಸೂತ ಉವಾಚ ॥

ಇತ್ಯುಕ್ತೋ ವೀರಭದ್ರೇಣ ನೃಸಿಂಹಃ ಶಾಂತಯಾ ಗಿರಾ ।
ತತೋಽಧಿಕಂ ಮಹಾಘೋರಂ ಕೋಪಂ ಪ್ರಜ್ವಾಲಯ ದ್ಧರಿಃ ॥೨೫॥

॥ ಶ್ರೀ ನೃಸಿಂಹ ಉವಾಚ ॥

ಆಗತೋಽಸಿ ಯತಸ್ತತ್ರ ಗಚ್ಛ ತ್ವಂ ಮಾ ಹಿತಂ ವದ ।
ಇದಾನೀಂ ಸಂಹರಿಷ್ಯಾಮಿ ಜಗದೇತಚ್ಚರಾಚರಂ ॥೨೬॥

---

ರಾದವರೂ, ಈ ಪ್ರಪಂಚದಲ್ಲಿ ಯಾರೂ ಇಲ್ಲ. ನಿನ್ನಿಂದ ಧರ್ಮಗಳು, ವೇದಗಳು, ಮಂಗಳಕರವಾದ ರೀತಿಯಲ್ಲಿ ಕಾಪಾಡಲ್ಪಟ್ಟಿವೆ. ಓ ನಾರಾಯಣನೇ, ನೀನು ಏತಕ್ಕಾಗಿ ಅವತಾರವಮಾಡಿದೆಯೋ ಆ ರಾಕ್ಷಸರು ಸಂಹಾರ ಮಾಡಲ್ಪಟ್ಟಿದ್ದಾರೆ. ಓ ಪೂಜ್ಯನಾದ ನರಸಿಂಹನೇ, ನಿನ್ನ ಶರೀರವು ಅತ್ಯಂತ ಭಯಂಕರವಾಗಿವೆ. ಓ ವಿಶ್ವಸ್ವರೂಪಿಯಾದ ನೃಸಿಂಹನೇ, ನಾನಿಲ್ಲಿರುವಾಗಲೇ ನಿನ್ನ ಈ ಘೋರ ರೂಪವನ್ನು ಶಾಂತಿಗೊಳಿಸು.

೨೫-೨೬. ಸೂತನು ಹೇಳಿದನು:— ಹೀಗೆ ವೀರಭದ್ರನು ಶಾಂತಿಯಿಂದ ಕೂಡಿದ ಒಳ್ಳೆಯ ಮಾತಿನಿಂದಲೇ ಹೇಳಿದರೂ ನೃಸಿಂಹನು ತನ್ನ ಆ ಸ್ವರೂಪಕ್ಕಿಂತಲೂ ಬಹಳ ಭಯಂಕರವಾದ ಕೋಪವನ್ನು ತೋರ್ಪಡಿಸಿದನು.

ಶ್ರೀ ನೃಸಿಂಹನು ಹೇಳಿದನು :— ನೀನು ಎಲ್ಲಿಂದ ಬಂದಿದ್ದೀಯೋ ಅಲ್ಲಿಗೇ ಹೋಗು. ನೀನು ನನಗೆ ಬುದ್ಧಿವಾದವನ್ನುಹೇಳಬೇಕಾಗಿಲ್ಲವು.

ಸಂಹರ್ತುರ್ನ ಹಿ ಸಂಹಾರಃ ಸ್ವತೋ ವಾ ಪರತೋಽಪಿ ವಾ ।
ಶಾಸಿತಂ ಮಮ ಸರ್ವತ್ರ ಶಾಸ್ತಾ ಕೋಽಪಿ ನ ವಿದ್ಯತೇ ॥೨೭॥

ಮತ್ಪ್ರಸಾದೇನ ಸಕಲಂ ಸಮರ್ಯಾದಂ ಪ್ರವರ್ತತೇ ।
ಅಹಂ ಹಿ ಸರ್ವಶಕ್ತೀನಾಂ ಪ್ರವರ್ತಕ ನಿವರ್ತಕಃ ॥೨೮॥

ಯದ್ಯದ್ವಿಭೂತಿ ಮತ್ಸತ್ವಂ ಶ್ರೀಮದೂರ್ಜಿತಮೇವ ವಾ
ತತ್ತದ್ವಿದ್ಧಿ ಗಣಾಽಧ್ಯಕ್ಷ ಮಮ ತೇಜೋ ವಿಜೃಂಭಿತಂ ॥೨೯॥

ದೇವತಾ ಪರಮಾರ್ಥಜ್ಞಾ ಮಮೈವ ಪರಮಂ ವಿದುಃ ।
ಮದಂಶಾಃ ಶಕ್ತಿಸಂಪನ್ನಾ ಬ್ರಹ್ಮ ಶಕ್ರಾದಯಃ ಸುರಾಃ ॥೩೦॥

ಮನ್ನಾಭಿ ಪಂಕಜಾಜ್ಜಾತಃ ಪುರಾ ಬ್ರಹ್ಮಾ ಚತುರ್ಮುಖಃ ।
ತಲ್ಲಲಾಟ ಸಮುತ್ಪನ್ನೋ ಭಗವಾನ್ ವೃಷಭಧ್ವಜಃ ॥೩೧॥

---

ಈಗಲೇ ಈ ಚರಾಚರಾತ್ಮಕವಾದ ಜಗತ್ತೆಲ್ಲವನ್ನೂ ಸಂಹಾರ ಮಾಡು ತ್ತೇನೆ. ಸಂಹಾರಕನಾದ ನನಗೆ ನೀನಾಗಲಿ ನಿನ್ನ ಕಡೆಯುವರಾಗಲೀ ಬೇರೆಯವರಾಗಲೀ ತಡೆಯುವವರಿಲ್ಲ! ನನಗೆ ವಿಧಿಸುವವನು ಯಾವನೂ ಇಲ್ಲ. ನನ್ನ ಅನುಗ್ರಹದಿಂದಲೇ ಈ ಎಲ್ಲಾ ಜಗತ್ತೂ ಎಲ್ಲೆ ಮೀರದೆ ಸಾಗುತ್ತಿದೆ. ನಾನೇ ಎಲ್ಲಕ್ಕೂ ಶಕ್ತನೂ, ಪ್ರೇರಕನೂ, ನಿವಾರಣೆ ಮಾಡು ವವನೂ ಆಗಿದ್ದೇನೆ.

೨೯–೩೨. ಈ ಪ್ರಪಂಚದಲ್ಲಿ ಯಾವ ಯಾವನು ವಿಶೇಷಮಹಿಮೆ ಯುಳ್ಳವನೂ, ಹೆಚ್ಚಿನ ಐಶ್ವರ್ಯವನ್ನು ಪಡೆದಿರುವವನೂ, ಅಥವಾ ವಿಶೇಷ ಬಲಿಷ್ಠನಾದವನೂ, ಇರುವನೋ ಅವರನ್ನೆಲ್ಲರನ್ನೂ ಎಲೈ ವೀರ ಭದ್ರನೇ, ನನ್ನ ತೇಜಸ್ಸಿನ ಅಂಶದಿಂದಲೇ ಹುಟ್ಟಿದವರೆಂದು ತಿಳಿ. ಪರಮ ಸತ್ಯಸ್ವರೂಪವನ್ನು ತಿಳಿದ ದೇವಿಯೂ, ನನ್ನ ಅಂಶವೆಂದು ಎಲ್ಲರಿಗೂ ಗೊತ್ತಿದೆ. ಬ್ರಹ್ಮ, ಇಂದ್ರ, ಮುಂತಾದ ದೇವತೆಗಳೂ ನನ್ನ ಅಂಶಸ್ವರೂಪರೇ ಆಗಿ ಸಾಮರ್ಥ್ಯವುಳ್ಳವರಾಗಿದ್ದಾರೆ. ನನ್ನ ಹೊಕ್ಕುಳಿನ ಕಮಲದಿಂದಲೇ ನಾಲ್ಕು ಮುಖವುಳ್ಳ ಬ್ರಹ್ಮನು ಹುಟ್ಟಿ ದನು. ಅವನ ಹಣೆಯಿಂದಲೇ ಹುಟ್ಟಿದವನು ಪೂಜ್ಯನಾದ ಶಿವನು.

ರಜಸಾಽಧಿಷ್ಠಿತಃ ಸ್ರಷ್ಟಾ ರುದ್ರಸ್ತಾಮಸ ಉಚ್ಯತೇ ।
ಅಹಂ ನಿಯಂತಾ ಸರ್ವಸ್ಯ ಮತ್ಪರಂ ನಾಽಸ್ತಿ ದೈವತಂ ॥೩೨॥

ವಿಶ್ವಾಽಧಿಕಃ ಸ್ವತಂತ್ರಶ್ಚ ಕರ್ತಾ ಹರ್ತಾಽಖಿಲೇಶ್ವರಃ ।
ಇದಂ ತು ಮತ್ಪರಂ ತೇಜಃ ಕಃ ಪುನಃ ಶ್ರೋತು ಮಿಚ್ಛತಿ ॥೩೩॥

ಅತೋ ಮಾಂ ಶರಣಂ ಪ್ರಾಪ್ಯ ಗಚ್ಛ ತ್ವಂ ವಿಗತ ಜ್ವರಃ ।
ಅವೇಹಿ ಪರಮಂ ಭಾವ ಮಿದಂ ಭೂತ ಮಹೇಶ್ವರಃ ॥೩೪॥

ಕಾಲೋಽಸ್ಮ್ಯಹಂ ಕಾಲ ವಿನಾಶ ಹೇತುಃ ।
ಲೋಕಾನ್ಸಮಾಹರ್ತು ಮಹಂ ಪ್ರವೃತ್ತಃ ॥
ಮೃತ್ಯೋ ರ್ಮೃತ್ಯುಂ ವಿದ್ಧಿ ಮಾಂ ವೀರಭದ್ರ ।
ಜೀವಂತ್ಯೇತೇ ಮತ್ಪ್ರಸಾದೇನ ದೇವಾಃ ॥೩೫॥

---

ರಜೋಗುಣದಿಂದ ಕೂಡಿದ ಇವನು ಪ್ರಪಂಚವನ್ನು ಸೃಷ್ಟಿಮಾಡುತ್ತಾನೆ. ರುದ್ರನು ತಮೋಗುಣದಿಂದ ಕೂಡಿದವನು. ನಾನೇ ಇವರೆಲ್ಲರಿಗೂ ನಿಯಾಮಕನು. ನನಗಿಂತಲೂ ಶ್ರೇಷ್ಠವಾದ ದೇವತೆಯೇ ಇಲ್ಲ.

೩೩–೩೬. ನಾನು ಪ್ರಪಂಚಕ್ಕೆಲ್ಲಕ್ಕಿಂತ ಅಧಿಕನೂ, ಸ್ವತಂತ್ರನೂ, ಎಲ್ಲವನ್ನೂ ಸೃಜಿಸುವವನೂ, ಎಲ್ಲವನ್ನೂ ನಾಶಮಾಡುವವನೂ, ಎಲ್ಲಕ್ಕೂ ಸ್ವಾಮಿಯೂ ಆಗಿದ್ದೇನೆ. ನನ್ನ ಉತ್ಕೃಷ್ಟ ತೇಜಸ್ಸಿನ ವಿಷಯದಲ್ಲಿ ಯಾವನು ತಾನೇ ಸಂದೇಹಪಟ್ಟಾನು? ಆದ್ದರಿಂದ ನೀನು ನನಗೆ ಶರಣಾಗತನಾಗಿ ಕಷ್ಟಗಳನ್ನು ಪರಿಹಾರ ಮಾಡಿಕೊಂಡು ಹೋಗು. ನನ್ನ ನಿಜವಾದ ಮತ್ತು ಅತ್ಯುತ್ಕೃಷ್ಟವಾದ ಸ್ವರೂಪವನ್ನು, ಎಲೈ ವೀರಭದ್ರನೇ, ತಿಳಿ. ನಾನು ಕಾಲಸ್ವರೂಪನಾಗಿಯೂ, ಕಾಲವನ್ನು ನಾಶಮಾಡಲು ಕಾರಣನಾಗಿಯೂ, ಲೋಕವನ್ನೆಲ್ಲವನ್ನು ನಾಶಮಾಡಲು ಹೊರಟಿದ್ದೇನೆ. ಎಲೈ ವೀರಭದ್ರನೇ, ನನ್ನನ್ನು ಸಾವಿನ ಅಧಿದೇವತೆಯಾದ ಯಮನಿಗೂ, ಸಾವನ್ನುಂಟುಮಾಡಲು ಶಕ್ತನೆಂದು ತಿಳಿ. ನನ್ನ ಅನುಗ್ರಹದಿಂದಲೇ ದೇವತೆಗಳೆಲ್ಲರೂ ಬದುಕಿದ್ದಾರೆ.

॥ ಸೂತ ಉವಾಚ ॥

ಸಾಽಹಂಕಾರ ಮಿದಂ ಶ್ರುತ್ವಾ ಹರೇರಮಿತ ವಿಕ್ರಮಃ ।
ವಿಹಸ್ಯೋ ವಾಚ ಸಾಽವಜ್ಞಂ ತತೋ ವಿ ಸ್ಫುರಿತಾಽಧರಃ ॥೩೬॥

॥ ಶ್ರೀ ವೀರಭದ್ರ ಉವಾಚ ॥

ಕಿಂ ನ ಜಾನಾಸಿ ವಿಶ್ವೇಶಂ ಸಂಹರ್ತಾರಂ ಪಿನಾಕಿನಂ ।
ಅಸದ್ವಾದೋ ವಿವಾದಶ್ಚ ವಿನಾಶ ಸ್ತ್ವಯಿ ಕೇವಲಃ ॥೩೭॥

ತವಾಽನ್ಯೋನ್ಯಾವ ತಾರಾಣಿ ಕಾನಿ ಶೇಷಾಣಿ ಸಾಂಪ್ರತಂ ।
ಕೃತಾನಿ ಯೇನ ತೇನಾಽಪಿ ಕಥಾ ಶೇಷೋ ಭವಿಷ್ಯತಿ ॥೩೮॥

ದೋಷಂ ತ್ವಂ ಪಶ್ಯ ಏತತ್ತ್ವಮವಸ್ಥಾ ಮೀದೃಶೀಂ ಗತಃ ।
ತೇನ ಸಂಹಾರ ದಕ್ಷೇಣ ಕ್ಷಣಾ ತ್ಸಂಕ್ಷಯ ಮೇಷ್ಯಸಿ ॥೩೯॥

---

ಸೂತನು ಹೇಳಿದನು :— ನೃಸಿಂಹನ ಅಹಂಕಾರದಿಂದ ಕೂಡಿದ ಈ ಮಾತನ್ನು ಕೇಳಿ ಅಪರಿಮಿತವಾದ ಶಕ್ತಿಯುಳ್ಳ ವೀರಭದ್ರನು ತಿರಸ್ಕಾರ ದೊಡನೆ ನೃಸಿಂಹನನ್ನು ನೋಡಿ, ಅದುರುತ್ತಿರುವ ತುಟಿಗಳುಳ್ಳವನಾಗಿ ನಕ್ಕು ಹೀಗೆ ಹೇಳಿದನು.

೩೭–೩೯. ವೀರಭದ್ರನು ಹೇಳಿದನು :— ಎಲೈ ನೃಸಿಂಹನೇ, ಪಿನಾಕ, ಎಂಬ ಆಯುಧವನ್ನು ಧರಿಸಿರುವ, ವಿಶ್ವೇಶ್ವರನಾದ, ಲೋಕ ಸಂಹಾರಕನಾದ, ಶಿವನು ನಿನಗೆ ಗೊತ್ತಿಲ್ಲವೋ? ಹೀಗೆ ಕೆಟ್ಟಮಾತು, ವಿವಾದಗಳು, ನಿನ್ನ ನಾಶಕ್ಕೆ ಕಾರಣವಾಗುತ್ತವೆ. ನಿನ್ನ ಮತ್ಸ್ಯ ಮುಂತಾದ ಅವತಾರಗಳು ಈಗ ಏನು ಉಳಿದಿವೆ? ನೀನು ಹೀಗೆ ಮಾತನಾಡಿದರೆ ನನ್ನಿಂದ ಈಗಲೂ ನಾಶವನ್ನು ಹೊಂದುತ್ತೀಯೆ. ಹಿಂದಿನ ನಿನ್ನ ದೋಷಗಳೆಲ್ಲವನ್ನೂ ತಿಳಿ. ಆದ್ದರಿಂದಲೇ ನೀನು ಇಂಥಾ ದುರವಸ್ಥೆಯನ್ನು ಹೊಂದಿರುವುದು. ಸಂಹಾರದಲ್ಲಿ ಸಮರ್ಥನಾದ ಶಿವನಿಂದ ಒಂದು ಕ್ಷಣಕಾಲದಲ್ಲಿಯೇ ನೀನೂ ನಾಶವನ್ನು ಹೊಂದುವೆ.

ಪ್ರಕೃತಿ ಸ್ತ್ವಂ ಪುಮಾನ್ರುದ್ರ ಸ್ತ್ವಯಿ ವೀರ್ಯಂ ಸಮಾಹಿತಂ ।
ತ್ವನ್ನಾಭಿ ಪಂಕಜಾಜ್ಜಾತಃ ಪಂಚವಕ್ತ್ರಃ ಪಿತಾಮಹಃ ॥೪೦॥
ಸೃಷ್ಟ್ಯರ್ಥೇನ ಜಗತ್ಪೂರ್ವಂ ಶಂಕರಂ ನೀಲಲೋಹಿತಂ ।
ಲಲಾಟೇ ಚಿಂತಯಾಮಾಸ ತಪಸ್ಯುಗ್ರೇ ವ್ಯವಸ್ಥಿತಃ ॥೪೧॥
ತಲ್ಲಲಾಟಾ ದಭೂ ಚ್ಛಂಭೋಃ (ಭುಃ) ಸೃಷ್ಟ್ಯರ್ಥಂ ತನ್ನ ದೂಷಣಂ।
ಅಂಶೋಽಹಂ ದೇವದೇವಸ್ಯ ಮಹಾಭೈರವ ರೂಪಿಣಃ ॥೪೨॥
ತ್ವತ್ಸಂಹಾರೇ ನಿಯುಕ್ತೋಽಸ್ಮಿ ವಿನಯೇನ ಬಲೇನ ಚ ।
ಏವಂ ರಕ್ಷೋ ವಿದಾರ್ಯೈವ ತ್ವಂ ಶಕ್ತಿ ಕಲಯಾ ಯುತಃ ॥೪೩॥
ಅಹಂಕಾರಾಽವಲೇಪೇನ ಗರ್ಜಸಿ ತ್ವ ಮತಂದ್ರಿತಃ ।
ಉಪಕಾರೋ ಹ್ಯ ಸಾಧೂನಾಂ ಅಪಕಾರಾಯ ಕೇವಲಂ ॥೪೪॥

---

೪೦–೪೩. ನೀನು ಪ್ರಕೃತಿಯು, ರುದ್ರನು, ಪುರುಷನು, ನಿನ್ನಲ್ಲಿ ಶಿವನ ವೀರ್ಯವು ಇಡಲ್ಪಟ್ಟಿತು. ನಿನ್ನ ನಾಭಿಕಮಲದಿಂದ ಐದು ಮುಖವುಳ್ಳ ಬ್ರಹ್ಮನು ಹುಟ್ಟಿದನು. ಹಿಂದೆ ಬ್ರಹ್ಮನು ಜಗತ್ತಿನ ಸೃಷ್ಟಿಗಾಗಿ ಭಯಂಕರವಾದ ತಪಸ್ಸನ್ನು ಕೈಗೊಂಡು ಕಪ್ಪಾದ ಕತ್ತುಳ್ಳ ಶಿವನನ್ನು ಹಣೆಯಲ್ಲಿ ಧ್ಯಾನಮಾಡಿದನು. ಆವನ ಹಣೆಯಿಂದ ಸೃಷ್ಟಿಗಾಗಿ ರುದ್ರನು ಹುಟ್ಟಿದನು. ಇದರಲ್ಲೇನೂ ದೋಷವಿಲ್ಲ. ಮಹಾಭೈರವಸ್ವರೂಪಿಯಾದ ದೇವದೇವನಾದ ಶಿವನ ಅಂಶವೇ ನಾನು. ಆವನಿಂದ ನಾನು ನಿನ್ನ ಸಂಹಾರವನ್ನು ಮಾಡಲು, ಮೊದಲು ವಿನಯೋಕ್ತಿಗಳನ್ನಾಡಿ, ನೀನು ಒಪ್ಪದಿದ್ದರೆ ಬಲವನ್ನು ಉಪಯೋಗಿಸು. ಎಂದು ಅಪ್ಪಣೆ ಮಾಡಲ್ಪಟ್ಟಿದ್ದೇನೆ. ಆದರೆ ನೀನು ಆದಿಶಕ್ತಿಯ ಅಂಶದಿಂದ ಹಿರಣ್ಯಕಶಿಪುವಿನ ಸಂಹಾರವನ್ನುಮಾಡಿದೆ. ಆದರೂ ಅಹಂಕಾರದಿಂದ ಹೀಗೆ ಮಾತನಾಡುತ್ತಿದ್ದೀಯೆ!

೪೪–೪೭. ನೀನು ಕೊಬ್ಬಿ ಅಹಂಕಾರದಿಂದ ಆಲಸ್ಯವಿಲ್ಲದೇ ಗರ್ಜಿಸುತ್ತಿದ್ದೀಯೆ. ಕೆಟ್ಟ ಜನರಿಗೆ ಉಪಕಾರಮಾಡಲು ಹೋದರೆ ಅದು ಅಪಕಾರವಾಗಿಯೇ ಪರಿಣಮಿಸುತ್ತದೆ. ಎಲೈ ಸಿಂಹನೇ, ನೀನು ಶಿವ

ಯದಿ ಸಿಂಹ ಮಹೇಶಾನಂ ಸ್ವಪುನ ರ್ಭೂತ ಮನ್ಯಸೇ ।
ನ ತ್ವಂ ಸ್ರಷ್ಟಾ ನ ಸಂಹರ್ತಾ ನ ಸ್ವತಂತ್ರೋ ಹಿ ಕುತ್ರಚಿತ್ ॥೪೫॥
ಕುಲಾಲ ಚಕ್ರವ ಚ್ಛಕ್ತ್ಯಾ ಪ್ರೇರಿತೋಽಸಿ ಪಿನಾಕಿನಾ ।
ಅದ್ಯಾಽಪಿ ತವ ನಿಕ್ಷಿಪ್ತಂ ಕಪಾಲಂ ಕೂರ್ಮರೂಪಿಣಃ ॥೪೬॥
ಹರಹಾರ ಲತಾ ಮಧ್ಯೇ ಮುಗ್ಧ ಕಸ್ಮಾನ್ನ ಬುಧ್ಯಸೇ ।
ವಿಸ್ಮೃತಂ ಕಿಂ ತದಂಶೇನ ದಂಷ್ಟ್ರೋತ್ಪಾತನ ಪೀಡಿತಃ ॥೪೭॥
ವಾರಾಹ ವಿಗ್ರಹಸ್ತೇಽದ್ಯ ಸಾಕ್ರೋಶಂ ತಾರಕಾರಿಣಾ ।
ದಗ್ಧೋಽಸಿ ಯಸ್ಯ ಶೂಲಾಗ್ರೇ ವಿಷ್ವಕ್ಸೇನ ಚ್ಛಲಾದ್ಭವಾನ್ ॥೪೮॥
ದಕ್ಷಯಜ್ಞೇ ಶಿರಃ ಚ್ಛಿನ್ನಂ ಮಯಾ ತೇ ಯಜ್ಞ ರೂಪಿಣಃ ।
ಅದ್ಯಾಽಪಿ ತವ ಪುತ್ರಸ್ಯ ಬ್ರಹ್ಮಣಃ ಪಂಚಮಂ ಶಿರಃ ॥೪೯॥

---

ನನ್ನು ನಿನ್ನ ಮೊಮ್ಮಗನನ್ನಾಗಿ ಗರ್ವದಿಂದ ತಕ್ಕ್ವ ತಿಳಿಯುವುದಾದರೆ, ನಿನ್ನ ಸೃಷ್ಟಿಮಾಡುವ ಶಕ್ತಿ, ಸಂಹಾರಶಕ್ತಿ, ಸ್ವಾತಂತ್ರ್ಯ ಎಲ್ಲವೂ, ಹಾಳಾಗುವುವು. ಶಿವನ ಶಕ್ತಿಯಿಂದಲೇ ನೀನು, ಕುಂಬಾರನ ಚಕ್ರದಂತೆ, ತಿರುಗಿಸಲ್ಪಡುತ್ತಿದ್ದೀಯೆ! ಆಮೆಯ ರೂಪವನ್ನು ಧರಿಸಿದ್ದ ನಿನ್ನ ಕಪೋಲವು, ಈಗಲೂ ಶಿವನ ಶಕ್ತಿಯು ಬೆಳ್ಳಿಯು ಹಾಗಿರುವ ಹಾರದಲ್ಲಿರುವುದು. ನಿನಗೆ ಗೊತ್ತಿಲ್ಲವೋ? ಶಿವನ ಒಂದು ಅಂಶದಿಂದಲೇ ವರಾಹರೂಪಿಯಾಗಿದ್ದ ನಿನ್ನ ಕೋರೆದಾಡೆಗಳನ್ನು ಕೀಳುವಾಗ ಆದ ನೋವು ನಿನಗೆ ಮರೆತು ಹೋಯಿತೋ?

೪೮–೪೯. ನಿನ್ನ ಹಂದಿಯ ಸ್ವರೂಪವು, ತಾರಕಾಸುರನನ್ನು ಕೊಂದ ಶಿವನ ಕೋಪಕ್ಕೆ ತುತ್ತಾಗಿ, ವಿಷ್ವಕ್ಸೇನನೆಂಬ ವೇಷಹಾಕಿಕೊಂಡಿದ್ದ ನಿನ್ನ ದೇಹವು ಅವನ ಶೂಲದ ತುದಿಯಿಂದ ಸುಡಲ್ಪಟ್ಟಿದೆ. ನಾನೇ ಯಾಗರೂಪಿಯಾದ ನಿನ್ನ ಮಗನಾದ ಬ್ರಹ್ಮನ ಐದನೆಯ ತಲೆಯನ್ನು ದಕ್ಷನು ಮಾಡಿದ ಯಾಗಕಾಲದಲ್ಲಿ ಕತ್ತರಿಸಿದೆನು.

ಭಿನ್ನಂ ತಮೋನಾಽಭಿಸಂಧಂ ತದಂಶಂ ತಸ್ಯ ತದ್ಬಲಂ ।
ನಿರ್ಜಿತಸ್ತ್ವಂ ದಧೀಚೇನ ಸಂಗ್ರಾಮೇ ಸಮರುದ್ಗಣಃ ॥೫೦॥
ಕಂಡೂಯಮಾನೇ ಶಿರಸಿ ಕಥಂ ತದ್ವಿಸ್ಮೃತಂ ತ್ವಯಾ ।
ಚಕ್ರಂ ವಿಕ್ರಮತೋ ಯಸ್ಯ ಚಕ್ರಪಾಣೇ ತವ ಸ್ವಯಂ ॥೫೧॥
ಕುತಃ ಪ್ರಾಪ್ತಂ ಕೃತಂ ಕೇನ ತ್ವಯಾ ತದಪಿ ವಿಸ್ಮೃತಂ ।
ತೇ ಮಯಾ ಸಕಲಾ ಲೋಕಾ ಗೃಹೀತಾಸ್ತ್ವಂ ಪಯೋನಿಧೌ ॥
ನಿದ್ರಾ ಪರವಶಃ ಶೇಷೇ ಸ ಕಥಂ ಸಾತ್ವಿಕೋ ಭವಾನ್ ।
ತ್ವದಾದಿಸ್ತಂಬ ಪರ್ಯಂತಂ ರುದ್ರಶಕ್ತಿ ವಿಜೃಂಭಿತಂ ॥೫೩॥

---

೫೦. ಪಾಪಕಾರ್ಯದಲ್ಲಿ ಕೂಡಿದ್ದ ದಕ್ಷಬ್ರಹ್ಮನ ಅಂಶವಾದ ಅವನ ಸೈನ್ಯವೂ ನನ್ನಿಂದಲೇ ನಾಶಮಾಡಲ್ಪಟ್ಟಿತು. ನೀನೂ ಕೂಡ ದೇವತೆಗಳೊಡನೆ ಯುದ್ಧದಲ್ಲಿ ದಧೀಚಿಮಹರ್ಷಿಯಿಂದ ಸೋಲಿಸಲ್ಪಟ್ಟೆ.

೫೧–೫೩. ದಧೀಚಿಮಹರ್ಷಿಯು ತಲೆಯನ್ನು ಕೆರೆದಿದ್ದರಿಂದಲೇ ನಿನಗೆ ಆ ಕಷ್ಟವು ಪ್ರಾಪ್ತವಾಯಿತು. ಇದನ್ನೂ ನೀನು ಹೇಗೆ ಮರತೆ? ಎಲೈ ಚಕ್ರವೇ ಕೈಯ್ಯಲ್ಲುಳ್ಳ ನೃಸಿಂಹನೇ, ನೀನು ಪರಾಕ್ರಮವನ್ನು ತೋರಿಸುವ ಕಾಲದಲ್ಲಿ ನಿನಗೆ ಪ್ರಿಯವಾದ ಚಕ್ರಾಯುಧವು ಯಾರಿಂದ ಯಾವಾಗ ಕೊಡಲ್ಪಟ್ಟಿತು? ಎಂಬುದನ್ನೂ ಮರೆತಹಾಗೆ ಕಾಣುತ್ತದೆ. ಆಗ ಸಕಲ ಲೋಕಗಳೂ ನನ್ನಿಂದಲೇ ರಕ್ಷಿಸಲ್ಪಟ್ಟವು. ಆದರೆ ನೀನು ಮಾತ್ರ ಸಮುದ್ರದಲ್ಲಿ ಶೇಷ ಸರ್ಪದಲ್ಲಿ ಮಲಗಿಕೊಂಡು ಆನಂದದಿಂದ ಗಾಢನಿದ್ರೆಯನ್ನು ಮಾಡುತ್ತಿದ್ದೆ! ನೀನು ಸಾತ್ವಿಕನು ಅಲ್ಲವು. ಸ್ತಂಬ ಎಂಬ ಸಣ್ಣ ಹುಳುವಿನವರೆಗೂ ಇರುವ ಸಮಸ್ತ ಜಗತ್ತೂ ಶಿವನ ಶಕ್ತಿಯಿಂದಲೇ ಬೆಳಗುತ್ತಿದೆ. ಬಹಳ ಶಕ್ತಿಯುಳ್ಳವನೆಂದು ತಿಳಿದುಕೊಂಡಿರುವ ನೀನೂ, ಅಗ್ನಿಯೂ ನೀವಿಬ್ಬರೂ ಅಜ್ಞಾನದಿಂದ ಶಿವನ ತೇಜಸ್ಸಿನ ಮಹಾಮಹಿಮೆಯ ಪ್ರಕಾಶವನ್ನು ನೋಡಲು ಅಸಮರ್ಥರೂ, ಯೋಗ್ಯತೆಯನ್ನು ಅರಿತಿಲ್ಲದವರೂ, ಆಗಿರುತ್ತೀರಿ. ಈ ಅಂಶವನ್ನು

ಶಕ್ತಿರ್ವಾ ನಭಿತಸ್ತ್ವಂ ಚ ಹ್ಯನಲಸ್ತ್ವಂ ಚ ವೋಹಿತಃ ।
ತತ್ತೇಜಸೋಽಪಿ ಮಾಹಾತ್ಮ್ಯಂ ಯುವಾಂ ದ್ರಷ್ಟುಂ ನ ಹಿ ಕ್ಷಮೌ
ಸ್ಥೂಲಾ ಯೇ ಹಿ ಪ್ರಪಶ್ಯಂತಿ ತದ್ವಿಷ್ಣೋಃ ಪರಮಂ ಪದಂ ।
ದ್ಯಾವಾ ಪೃಥಿವ್ಯಾ ಇಂದ್ರಾಽಗ್ನಿಯಮಸ್ಯ ವರುಣಸ್ಯ ಚ ॥೫೫॥
ಧ್ವಾಂತೋದರೇ ಶಶಾಂಕಸ್ಯ ಜನಿತ್ವಾ ಪರಮೇಶ್ವರಃ ।
ಕಾಲೋಽಸಿ ತ್ವಂ ಮಹಾಕಾಲಃ ಕಾಲಕಾಲೋ ಮಹೇಶ್ವರಃ ॥೫೬॥
ಅತಸ್ತ್ವ ಮುಗ್ರ ಕಲಯಾ ಮೃತ್ಯೋಃ ಮೃತ್ಯು ರ್ಭವಿಷ್ಯಸಿ ।
ಸ್ಥಿರಧನ್ವಾ ಕ್ಷಯೋ ವೀರೋ ವೀರೋ ವಿಶ್ವಾಽಧಿಕಃ ಪ್ರಭುಃ ॥

---

ಅಹೋಬಲನ ಚಮಕಭಾಷ್ಯದಲ್ಲಿ '' ಸಮಾನ ಪ್ರೀತಿಸಂಯುಕ್ತಾ ಅಗ್ನಾ ವಿಷ್ಣೂ ಶಿವಾರ್ಚಕೌ। ವಾಂ ಮಹೇಶಪ್ರಸಾದೇನ ದ್ಯುಮ್ನೈರ್ವಾಜಭಿ ರಾಜತಂ'' ಎಂದು ವಿವರಿಸಿದೆ. ನಿದ್ರಾಪರವನಾದ ನೀನು ಸಾತ್ವಿಕನೆನ್ನು ವುದೂ?ಆದರೂ

೫೫-೫೮. ಸ್ಥೂಲ ದೃಷ್ಟಿಯುಳ್ಳ ದ್ವೈತವಾದಿಗಳಾದ ಜನರು ವಿಷ್ಣು ವಿನ ಸ್ಥಾನವೇ ಸರ್ವಶ್ರೇಷ್ಠವೆಂದು ನಂಬುವರು. ಆದರೆ ಅದಿತಿದೇವಿಗೆ ವಾಮನ ರೂಪದಿಂದಲೂ, ಇಂದ್ರನಿಗೆ ಜಯಂತನರೂಪದಿಂದಲೂ, ಅಗ್ನಿಗೆ ಕಾರ್ತಿಕೇಯನಾಗಿಯೂ, ಯಮನಿಗೂ ಧರ್ಮರಾಜನಿಗೂ ನಾರಾಯಣನಾಗಿಯೂ, ವರುಣನಿಗೆ ಭೃಗುರೂಪದಿಂದಲೂ, ಕಳಂಕಮಧ್ಯನಾದ ಚಂದ್ರನಿಗೆ ಬುಧರೂಪನಾಗಿಯೂ ಅವತರಿಸಿದ, ಪರಮೇಶ್ವರನಾಗಿ, ಕಾಲ, ಮಹಾಕಾಲ, ಕಾಲಕಾಲ, ಮಹೇಶ್ವರ ಮುಂತಾದ ಭಯಂಕರ ಸ್ವರೂಪದ ಶಿವನ ಅಂಶದಿಂದ ಮೃತ್ಯುವೂ ಆಗುವೆ. ಆದರೂ ಸ್ಥಿರವಾದ ಧನುಸ್ಸುಳ್ಳವನೂ, ಪ್ರಪಂಚನಾಶಕ್ಕೆ ಕಾರಣನೂ, ವೀರನೂ, ತನಗಿಂತ ಮಿಗಿಲಾದ ವೀರರಿಲ್ಲದವನೂ, ಹೆಚ್ಚಾದ ಸ್ವಾಮಿಯೂ, ಸಂಕಟಗಳನ್ನು ನಿವಾರಣೆ ಮಾಡುವವನೂ, ಜ್ವರಾದಿ ರೋಗಗಳನ್ನು ನಾಶಮಾಡುವನೂ, ಭಯಂಕರವಾದ ಮೃಗ, ಹಕ್ಕಿ, ಐಶ್ವರ್ಯ, ಎಲ್ಲಾ ಸ್ವರೂಪವುಳ್ಳವನೂ,

ಉಪಹಸ್ತಾ ಜ್ವರಂ ಭೀಮೋ ಮೃಗಪಕ್ಷಿ ಹಿರಣ್ಮಯಃ ।
ಶಾಸ್ತಾಽ ಶೇಷಸ್ಯ ಜಗತೋ ನ ತ್ವಂ ನೈವ ಚತುರ್ಮುಖಃ ॥೫೮॥
ಇತ್ಥಂ ಸರ್ವಂ ಸಮಾಲೋಕ್ಯ ಸಂಹರಾಽತ್ಮಾನ ಮಾತ್ಮನಾ ।
ನೋ ಚೇ ದಿದಾನೀಂ ಕ್ರೋಧಸ್ಯ ಮಹಾ ಭೈರವರೂಪಿಣಃ ॥೫೯॥
ವಜ್ರಾಽಶನಿ ರಿವ ಸ್ಥಾಣೋ ಸ್ತ್ವೇವಂ ಮೃತ್ಯುಃ ಪತಿಷ್ಯತಿ ।

॥ ಸೂತ ಉವಾಚ ॥

ಇತ್ಯುಕ್ತೋ ವೀರಭದ್ರೇಣ ನೃಸಿಂಹಃ ಕ್ರೋಧ ವಿಹ್ವಲಃ ॥೬೦॥
ನನಾದ ತನು ವೇಗೇನ ತಂ ಗೃಹೀತುಂ ಪ್ರಚಕ್ರಮೇ ।
ಅತ್ರಾಂ ತರೇ ಮಹಾಘೋರಂ ವಿಪಕ್ಷ ಭಯಕಾರಣಂ ॥೬೧॥

---

ಸಕಲ ಜಗತ್ತಿಗೂ ನಿಯಾಮಕನಾಗಿರುವವನೂ, ಆ ಪರಶಿವನಲ್ಲದೇ ನೀನಾಗಲಿ, ಬ್ರಹ್ಮನಾಗಲಿ, ಅಲ್ಲವೆಂದು ಚೆನ್ನಾಗಿ ತಿಳಿ.

೫೯–೬೧. ಇದನ್ನೆಲ್ಲವನ್ನೂ ಆಲೋಚನೆ ಮಾಡಿ, ನಿನ್ನ ಈ ಘೋರ ಸ್ವರೂಪವನ್ನು ನೀನೇ ಉಪಸಂಹಾರ ಮಾಡಿಕೋ. ಹಾಗಿಲ್ಲದಿದ್ದರೆ ಮಹಾಭೈರವ ಸ್ವರೂಪನಾದ ಶಿವನ ಕೋಪವೆಂಬ ಬೆಂಕಿಗೆ ತುತ್ತಾಗುವೆ. ಸಮಯ ಬಂದಾಗ ವಜ್ರಾಯುಧದ ಹಾಗೆ ಕಠಿಣನೂ, ಸ್ಥಿರನೂ ಆದ ಶಿವನಿಂದ ಮರಣವನ್ನು ಹೊಂದುತ್ತೀಯೇ.

ಸೂತನು ಹೇಳಿದನು :– ಹೀಗೆ ವೀರಭದ್ರನು ಹೇಳಲಾಗಿ ಹೆಚ್ಚಾಗಿ ಕೋಪಗೊಂಡು ನೃಸಿಂಹನು ಬಹು ಜಾಗ್ರತೆಯಾಗಿ ಅವನನ್ನು ಹಿಡಿಯಲು ಹೊರಟನು. ಈ ಮಧ್ಯದಲ್ಲಿ ಬಹಳ ಭಯಂಕರವಾದ ಶತ್ರುಗಳಿಗೆ ಭಯವನ್ನುಂಟುಮಾಡುವ, ಶರಭನ ಆಕಾರವನ್ನು ವೀರಭದ್ರನು ತೆಗೆದುಕೊಂಡನು.

ಗಗನವ್ಯಾಪಿ ದುರ್ಧರ್ಷಂ ಶೈವತೇಜಃ ಸಮುದ್ಭವಂ ।
ವೀರಭದ್ರಸ್ಯ ತದ್ರೂಪಂ ತತ್ಕ್ಷಣಾದೇವ ದೃಶ್ಯತೇ ॥೬೨॥
ನ ತದ್ಧಿರಣ್ಮಯಂ ಸೌಮ್ಯಂ ನ ಸೌರಂ ನಾಽಗ್ನಿ ಸಂಭವಂ ।
ನ ತಟಿಚ್ಚಂದ್ರ ಸದೃಶ ಮನೌಪಮ್ಯಂ ಮಹೇಶ್ವರಂ ॥೬೩॥
ತದಾ ತೇಜಾಂಸಿ ಸರ್ವಾಣಿ ತಸ್ಮಿನ್ ಲೀನಾನಿ ಶಾಂಕರೇ ।
ತತೋಽವ್ಯಕ್ತೋ ಮಹಾತೇಜಾ ವ್ಯಕ್ತೋ ಸಂಭವತಸ್ತತಃ ॥೬೪॥
ರುದ್ರ ಸಾಧಾರಣಂ ಚೈವ ಚಿಹ್ನಿತಂ ವಿಕೃತಾಽಕೃತಿ ।
ತತಃ ಸಂಹಾರ ರೂಪೇಣ ಸುವ್ಯಕ್ತಃ ಪರಮೇಶ್ವರಃ ॥೬೫॥
ಪಶ್ಯತಾಂ ಸರ್ವದೇವಾನಾಂ ಜಯ ಶಬ್ದಾದಿ ಮಂಗಲೈಃ ।
ಸಹಸ್ರಬಾಹು ರ್ಜಟಿಲ ಶ್ಚಂದ್ರಾರ್ಧ ಕೃತ ಶೇಖರಃ ॥೬೬॥

---

೬೨–೬೫. ಆಕಾಶದವರೆಗೂ ವ್ಯಾಪಿಸಿರುವ, ಅಡಗಿಸಲು ಅಶಕ್ಯವಾದ, ಶಿವನಿಗೆ ಸಂಬಂಧಪಟ್ಟ ತೇಜಸ್ಸಿನಿಂದ ಹುಟ್ಟಿದ, ವೀರಭದ್ರನ ಭಯಂಕರವಾದ ಸ್ವರೂಪವು ತತ್‌ಕ್ಷಣದಲ್ಲಿ ಶರಭರೂಪವಾಗಿ ಕಾಣಿಸಿಕೊಂಡಿತು. ಅದು ಸುವರ್ಣಮಯವೂ ಅಲ್ಲ. ಚಂದ್ರನಿಂದ ಬಂದದ್ದೂ ಅಲ್ಲ. ಸೂರ್ಯನಿಗೆ ಸಂಬಂಧಪಟ್ಟದ್ದಾಗಲಿ, ಅಗ್ನಿಯಿಂದ ಹುಟ್ಟಿದ್ದಾಗಲಿ, ಅಲ್ಲವು. ಅದು ಮಿಂಚು ಅಥವಾ ಚಂದ್ರನಿಂದ ಬಂದದ್ದೂ ಅಲ್ಲ. ಚಂದ್ರನಿಗೆ ಸಮಾನವಾದದ್ದೂ ಅಲ್ಲ. ಅದು ಎಲ್ಲ ತೇಜಸ್ಸುಗಳನ್ನೂ ಒಳಗೊಂಡು ಎಲ್ಲವನ್ನೂ ಮೀರಿದುದಾಗಿತ್ತು. ಇದಕ್ಕೆ ಸರಿಸಮಾನವಾದ ಪದಾರ್ಥವೇ ಇಲ್ಲ. ಇದು ಶಿವನ ತೇಜಸ್ಸು ಮಾತ್ರ. ಶಿವನ ತೇಜಸ್ಸು ಉಂಟಾಗಲಾಗಿ ಉಳಿದ ತೇಜಸ್ಸುಗಳೆಲ್ಲವೂ ಇದರ ಪ್ರಕಾಶದಲ್ಲೇ ಅಡಗಿಹೋದವು. ಮೊದಲು ಕಾಣಿಸದ ಹಾಗಿದ್ದು ಆ ಮೇಲೆ ಕಾಣಿಸಿಕೊಂಡು ಬಹಳ ತೇಜಸ್ಸಿನಿಂದ ಬೆಳಗುತ್ತಾ ರುದ್ರನಿಗೆ ಸಮಾನವಾದ ಚಿಹ್ನೆಗಳಿಂದ ಕೂಡಿ, ವಿಕಾರವಾದ ಆಕಾರವುಳ್ಳದ್ದಾಗಿ ಆಗ ಸಂಹಾರಕಾರ್ಯಕ್ಕಾಗಿ ಪರಮೇಶ್ವರನೇ ಆ ರೂಪದಲ್ಲಿ ಕಾಣಿಸಿಕೊಂಡನು.

೬೬–೭೯. ಜಯ ಜಯಕಾರವೇ ಮುಂತಾದ ಮಂಗಳಘೋಷದೊಡನೆ ದೇವತೆಗಳು ನೋಡುತ್ತಿರಲಾಗಿ, ಸಾವಿರ ತೋಳುಗಳುಳ್ಳ,

ಸ ಮೃಗಾರ್ಧ ಶರೀರೇಣ ಪಕ್ಷಾಭ್ಯಾಂ ಚಂಚುನಾ ದ್ವಿಜಾಃ।
ಅತಿ ತೀಕ್ಷ್ಣ ಮಹಾದಂಷ್ಟ್ರೋ ವಜ್ರ ತುಲ್ಯ ನಖಾಯುಧಃ ॥೬೭॥
ಕಂಠೇಕಾಲೋ ಮಹಾ ಬಾಹುಃ ಚತುಷ್ಪಾ ದ್ವಹ್ನಿ ಸಂಭವಃ ।
ಯುಗಾಂತೋದ್ಯತ ಜೀಮೂತ ಭೀಮ ಗಂಭೀರ ನಿ ಸ್ವನಃ ॥೬೮॥
ಸಮಂ ಕುಪಿತ ವೃತ್ತಾಽಗ್ನಿ ವ್ಯಾವೃತ್ತ ನಯನ ತ್ರಯಃ ।
ಸ್ಪಷ್ಟ ದಂಷ್ಟ್ರೋಽಧರೋಷ್ಠಶ್ಚ ಹುಂಕಾರೇಣ ಯುತೋ ಹರಃ ॥
ಹರಿಸ್ತದ್ದರ್ಶನಾದೇವ ವಿನಷ್ಟ ಬಲ ವಿಕ್ರಮಃ ।
ಬಿಭ್ರದೌರ್ಮ್ಯಂ ಸಹಸ್ರಾಂಶೋಃ ರಥಃ ಖದ್ಯೋತ ವಿಭ್ರಮಂ ॥
ಅಥ ವಿಭ್ರಮ್ಯ ಪಕ್ಷಾಭ್ಯಾಂ ನಾಭಿ ಪಾದೇಽಭ್ಯುದಾರಯನ್ ।
ಪಾದಾ ವಾಬಧ್ಯ ಪುಚ್ಛೇನ ಬಾಹುಭ್ಯಾಂ ಬಾಹು ಮಂಡಲಂ ॥

---

ಜಡೆಗಳಿಂದ ಕೂಡಿದ, ಅರ್ಧ ಚಂದ್ರನೇ ತಲೆಯ ಆಭರಣವಾಗಿ ಉಳ್ಳ, ಶರಭ ಮೃಗವೇ ತನ್ನ ಅರ್ಧ ಶರೀರವಾಗುಳ್ಳ, ರೆಕ್ಕೆಗಳು ಮತ್ತು ಕೊಕ್ಕಿನಿಂದ ಕೂಡಿರುವ, ಬಹಳ ತೀಕ್ಷ್ಣವಾದ ಬಹುದೊಡ್ಡ ಕೋರೆದಾಡೆಗಳುಳ್ಳ, ವಜ್ರಾಯುಧಕ್ಕೆ ಸಮಾನವಾದ ಉಗುರೇ ಆಯುಧವಾಗುಳ್ಳ, ಕತ್ತಿನಲ್ಲಿ ಕಪ್ಪುಬಣ್ಣವುಳ್ಳ, ದೊಡ್ಡ ತೋಳುಗಳುಳ್ಳ, ನಾಲ್ಕು ಕಾಲುಗಳುಳ್ಳ, ಅಗ್ನಿಯಿಂದ ಹುಟ್ಟಿದ, ಪ್ರಳಯಕಾಲದಲ್ಲಿ ಉಂಟಾದ ಮೋಡವಂತೆ ಭಯಂಕರವೂ, ಗಂಭೀರವೂ ಆದ ದೊಡ್ಡ ಧ್ವನಿಯುಳ್ಳ, ಆ ಕಾಲ ಕಾರ್ಯಕ್ಕೆ ತಕ್ಕಂತೆ ಕೋಪಗೊಂಡ, ಬೆಂಕಿಯಂತೆ ಕೆಂಪಾಗಿ ತಿರುಗಿಸುತ್ತಿರುವ ಮೂರು ಕಣ್ಣುಗಳುಳ್ಳ, ಚೆನ್ನಾಗಿ ಒಪ್ಪುವಂತೆ ಕಾಣುತ್ತಿರುವ ಕೋರೆದಾಡೆ, ಕೆಳತುಟಿಗಳುಳ್ಳ, ಹೂಂಕಾರಮಾಡುತ್ತಿರುವ ಶಿವಸ್ವರೂಪಿಯಾದ ವೀರಭದ್ರನು ಶರಭ ರೂಪದಲ್ಲಿ ಕಾಣಿಸಿಕೊಂಡನು.

೭೦–೭೨. ವಿಷ್ಣುವು ಇಂಥಾ ಭಯಂಕರ ರೂಪಿಯಾದ ಶಿವನನ್ನು ನೋಡಿದ ಕೂಡಲೇ ತನ್ನ ಬಲ ಪರಾಕ್ರಮಗಳೆಲ್ಲವೂ ಕುಂದಿದವುಗಳಾಗಲು, ಸೂರ್ಯನ ಕಿರಣಗಳ ಮುಂದೆ ಮಿಣುಕು ಹುಳುವಿನಂತೆ, ತೇಜಸ್ಸಿಲ್ಲದವನಾದನು. ಆನಂತರದಲ್ಲಿ ಶರಭಮೃಗ ರೂಪಿಯಾದ ಶಿವನು ತನ್ನ ರೆಕ್ಕೆಗಳಿಂದ ಹಾರಿ ನೃಸಿಂಹನ ಹೊಕ್ಕುಳು ಕಾಲುಗಳನ್ನು ಸೀಳುವವ

ಭಿಂದನ್ನುರಸಿ ಬಾಹುಭ್ಯಾಂ ನಿಜಗ್ರಾಹ ಹರೋ ಹರಿಂ ।
ತತೋ ಜಗಾಮ ಗಗನಂ ದೇವೈಃ ಸಹ ಮಹರ್ಷಿಭಿಃ ॥೭೨॥

ಸಹಸ್ಯೈವ ಭಯಾದ್ವಿಷ್ಣುಂ ವಿಹಗಶ್ಚ ಯಥೋರಗಂ ।
ಉತ್ಕ್ಷಿಪ್ಯೋತ್ಕ್ಷಿಪ್ಯ ಸಂಗೃಹ್ಯ ನಿಪಾತ್ಯ ಚ ನಿಪಾತ್ಯ ಚ ॥೭೩॥

ಉಡ್ಡೀಯೋಡ್ಡೀಯ ಭಗವಾನ್ ಪಕ್ಷಾಘಾತ ವಿಮೋಹಿತಂ ।
ಹರಿಂ ಹರಂತಂ ವೃಷಭಂ ವಿಶ್ವೇಶಾನಂ ತ ಮೀಶ್ವರಂ ॥೭೪॥

ಅನುಯಾಂತಿ ಸುರಾಃ ಸರ್ವೇ ನಮೋವಾಕ್ಯೇನ ತುಷ್ಟುವುಃ।
ನೀಯಮಾನಃ ಪರವಶೋ ದೀನವಕ್ತ್ರಃ ಕೃತಾಂಜಲಿಃ ॥೭೫॥

ತುಷ್ಟಾವ ಪರಮೇಶಾನಂ ಹರಿಸ್ತಂ ಲಲಿತಾಕ್ಷರೈಃ ।

---

ನಾಗಿ, ತನ್ನ ಬಾಲದಿಂದ ಅವನ ಕಾಲುಗಳನ್ನು ಕಟ್ಟಿ, ತೋಳುಗಳಿಂದ ತೋಳುಗಳನ್ನೂ ಕಟ್ಟಿ, ಅವನ ವಕ್ಷಸ್ಥಳವನ್ನೂ ಬೇದಿಸಿ, ಶಿವನು ನೃಸಿಂಹನನ್ನು ನಿಗ್ರಹಿಸಿದನು. ಅನಂತರದಲ್ಲಿ ಶಿವನು ದೇವತೆಗಳೊಂದಿಗೆ ಆಕಾಶದಲ್ಲಿ ತೆರಳಿದನು.

೭೩–೭೫. ಗರುಡನು ಸರ್ಪವನ್ನು ಕಚ್ಚಿ ಕಾಲಿನಿಂದ ಎತ್ತಿಕೊಂಡು ಹೋಗುವ ಹಾಗೆ, ಶರಭರೂಪತಾಳಿದ ಶಿವನು ನೃಸಿಂಹನನ್ನು ಎತ್ತಿಕೊಂಡು, ಮೇಲೆ ಮೇಲೆ ಚೆಂಡಿನಂತೆ ಹಾರಿಸಿ ಹಿಡಿದುಕೊಳ್ಳುತ್ತಲೂ, ಕೆಡವಿ ಕೆಡವಿ ಎತ್ತಿಕೊಳ್ಳುತ್ತಲೂ. ಹಾರಿ ಹಾರಿ ಹೋಗುತ್ತಿರಲು, ರೆಕ್ಕೆಗಳ ಬಡಿತದಿಂದ ಮೂರ್ಛೆಹೊಂದಿದ ವಿಷ್ಣುವನ್ನು ತೆಗೆದುಕೊಂಡು ಹೋಗುತ್ತಿರುವ ಶಿವನನ್ನು ದೇವತೆಗಳು ಹಿಂಬಾಲಿಸಿದರು. ಮತ್ತು ಅವನನ್ನು ನಮಸ್ಕಾರ ಪೂರ್ವಕವಾಗಿ ಸ್ತೋತ್ರ ಮಾಡಿದರು. ಹೀಗೆ ಒಯ್ಯಲ್ಪಡುತ್ತಿರುವ ವಿಷ್ಣುವು ದೈನ್ಯದಿಂದ ಕೂಡಿದ ಮುಖಳ್ಳವನಾಗಿ, ಪರಾಧೀನನಾಗಿ, ಕೈಮುಗಿದು ಶಿವನನ್ನು ಪ್ರಾರ್ಥನೆ ಮಾಡಲು ಆರಂಭಿಸಿದನು.

೭೬–೭೮. ವಿಷ್ಣುವು ಪರಮೇಶ್ವರನಾದ ಶಿವನನ್ನು ಮನೋಹರವಾದ ಮಾತುಗಳಿಂದ ಹೀಗೆ ಸ್ತೋತ್ರಮಾಡಿದನು.

॥ ಶ್ರೀ ನೃಸಿಂಹ ಉವಾಚ ॥

ನಮೋರುದ್ರಾಯ ಶರ್ವಾಯ ಮಹಾಗ್ರಾಸಾಯ ವಿಷ್ಣವೇ ॥೭೬॥
ನಮ ಉಗ್ರಾಯ ಭಿಮಾಯ ನಮಃ ಕ್ರೋಧಾಯ ಮನ್ಯವೇ ।
ನಮೋ ಭವಾಯ ಶರ್ವಾಯ ಶಂಕರಾಯ ಶಿವಾಯ ತೇ ॥೭೭॥

ಕಾಲ ಕಾಲಾಯ ಕಾಲಾಯ ಮಹಾಕಾಲಾಯ ಮೃತ್ಯವೇ ।
ವೀರಾಯ ವೀರಭದ್ರಾಯ ಕ್ಷಯದ್ವೀರಾಯ ಶೂಲಿನೇ ॥೭೮॥

ಮಹಾದೇವಾಯ ಮಹತೇ ಪಶೂನಾಂ ಪತಯೇ ನಮಃ ।
ಏಕಾಯ ನೀಲಕಂಠಾಯ ಶ್ರೀಕಂಠಾಯ ಪಿನಾಕಿನೇ ॥೭೯॥

ನಮೋಽನಂತಾಯ ಸೂಕ್ಷ್ಮಾಯ ನಮಸ್ತೇ ಮೃತ್ಯುಮನ್ಯವೇ ।
ಪರಾಯ ಪರಮೇಶಾಯ ಪರಾತ್ಪರತರಾಯ ತೇ ॥೮೦॥

ಪರಾತ್ಪರಾಯ ವಿಶ್ವಾಯ ನಮಸ್ತೇ ವಿಶ್ವಮೂರ್ತಯೇ ।
ನಮೋ ವಿಷ್ಣು ಕಲತ್ರಾಯ ವಿಷ್ಣುಕ್ಷೇತ್ರಾಯ ಭಾನವೇ ॥೮೧॥

---

ಶ್ರೀ ನೃಸಿಂಹನು ಹೇಳಿದನು:— ರುದ್ರನೂ, ಆಶ್ರಿತರ ರೋಗ ನಾಶಕನೂ, ಸರ್ವನೂ, ಭಕ್ತರಿಗೆ ಸುಖಕರನೂ, ಪ್ರಪಂಚವನ್ನೆಲ್ಲವನ್ನೂ ನುಂಗಲು ಸಮರ್ಥನೂ, ವಿಷ್ಣುಸ್ವರೂಪನೂ, ಭಯಂಕರನೂ, ಕೋಪ ಸ್ವರೂಪನೂ, ಯಾಗದಸ್ವರೂಪನೂ, ಭವನೂ, ಶಂಕರನೂ, ಶಿವನೂ, ಯಮನೂ, ಕಾಲಸ್ವರೂಪನೂ, ಖಂಡ ಕಾಲಸ್ವರೂಪನೂ, ಮಹಾಕಾಲ ಸ್ವರೂಪನೂ, ಮೃತ್ಯುಸ್ವರೂಪನೂ, ವೀರನೂ, ವೀರಭದ್ರಸ್ವರೂಪನೂ ದುಷ್ಟ ವೀರರನ್ನು ನಾಶಮಾಡಿದವನೂ, ಶೂಲವನ್ನು ಹಿಡಿದಿರುವವನೂ ಆದ ಶಿವನಿಗೆ ಅನೇಕ ನಮಸ್ಕಾರಗಳು.

೭೯–೮೨. ಮಹಾದೇವನೂ, ಮಹಾತ್ಮನೂ, ಪಶುಗಳಿಗೆ ಪತಿಯೂ, ಸಮಾಭ್ಯಧಿಕರಹಿತನಾಗಿ ಅದ್ವಿತೀಯನಾಗಿ ಒಬ್ಬನೇ ಆದವನೂ, ಕಪ್ಪಾದ ಕತ್ತುಳ್ಳವನೂ, ಶ್ರೀಕಂಠನೂ, ಪಿನಾಕವೆಂಬ ಆಯುಧವನ್ನು ಧರಿಸಿರುವವನೂ, ವಿನಾಶವಿಲ್ಲದವನೂ, ಸೂಕ್ಷ್ಮನೂ, ಯಮನಮೇಲೆ ಕೂಡ ಕೋಪವನ್ನು ತೋರಿಸಬಲ್ಲವನೂ, ಶ್ರೇಷ್ಠನೂ, ಪರಮೇಶ್ವರನೂ, ಪರಾತ್ಪರವಸ್ತುವೂ, ವಿಶ್ವಸ್ವರೂಪಿಯೂ, ವಿಶ್ವದ ಆಕಾರವುಳ್ಳವನೂ,

ಕೈವರ್ತಾಯ ಕಿರಾತಾಯ ಮಹಾ ವ್ಯಾಧಾಯ ಶಾಶ್ವತೇ ।
ಭೈರವಾಯ ಶರಣ್ಯಾಯ ಮಹಾ ಭೈರವ ರೂಪಿಣೇ ॥೮೨॥

ನಮೋ ನೃಸಿಂಹ ಸಂಹರ್ತ್ರೇ ಕಾಮಕಾಲ ಪುರಾರಯೇ ।
ಮಹಾ ಪಾಶೌಘ ಸಂಹರ್ತ್ರೇ ವಿಷ್ಣುಮಾಯಾಂತ ಕಾರಿಣೇ ॥೮೩॥

ತ್ರ್ಯಂಬಕಾಯ ತ್ರ್ಯಕ್ಷರಾಯ ಶಿಪಿ ವಿಷ್ಟಾಯ ಮೀಢುಷೇ ।
ಮೃತ್ಯುಂಜಯಾಯ ಶರ್ವಾಯ ಸರ್ವಜ್ಞಾಯ ಮಖಾರಯೇ ॥

ಮಖೇಶಾಯ ವರೇಣ್ಯಾಯ ನಮಸ್ತೇ ವಹ್ನಿರೂಪಿಣೇ ।
ಮಹಾಘ್ರಾಣಾಯ ಜಿಹ್ವಾಯ ಪ್ರಾಣಾಪಾನ ಪ್ರವರ್ತಿನೇ ॥೮೫॥

ತ್ರಿಗುಣಾಯ ತ್ರಿಶೂಲಾಯ ಗುಣಾತೀತಾಯ ಯೋಗಿನೇ ।
ಸಂಸಾರಾಯ ಪ್ರವಾಹಾಯ ಮಹಾಯಂತ್ರ ಪ್ರವರ್ತಿನೇ ॥೮೬॥

---

ವಿಷ್ಣುವನ್ನೇ ಪತ್ನಿಯಾಗುಳ್ಳವನೂ, ವಿಷ್ಣುವನ್ನೇ ಸ್ಥಾನವಾಗುಳ್ಳವನೂ, ಸೂರ್ಯಸ್ವರೂಪನೂ, ಕಿರಾತರೂಪವನ್ನು ಧರಿಸಿದ ಬೇಡನೂ, ದೊಡ್ಡ ಬೇಟೆಗಾರನೂ, ನಿತ್ಯನೂ, ಭೈರವ ಸ್ವರೂಪನೂ, ಒಳ್ಳೆಯ ರಕ್ಷಕನೂ, ಬಹಳ ಭಯಂಕರ ಸ್ವರೂಪನೂ, ಆದ ಶಿವನಿಗೆ ಅನೇಕ ನಮಸ್ಕಾರಗಳು.

೮೩-೮೪. ನೃಸಿಂಹನನ್ನು ಸಂಹಾರಮಾಡಿದವನೂ, ಮನ್ಮಥ, ಯಮ, ತ್ರಿಪುರರನ್ನು ನಾಶಮಾಡಿದವನೂ ಆಗಿರುವ, ಯಮನ ದೊಡ್ಡ ಪಾಶಗಳನ್ನೂ ಸಂಹಾರಮಾಡಿದವನಾದ, ವಿಷ್ಣುವಿನ ಮಾಯೆಯನ್ನು ನಾಶಮಾಡಿದ, ಚಂದ್ರ, ಸೂರ್ಯ, ಅಗ್ನಿ, ರೂಪವಾದ ಮೂರು ಕಣ್ಣುಳ್ಳ, ಮೂರು ಅಕ್ಷರದ ಹೆಸರುಳ್ಳ, ಪಶುಗಳ ಒಳಗೂ ಪ್ರವೇಶಿಸಬಲ್ಲ, ಭಕ್ತರ ಇಷ್ಟಾರ್ಥಗಳನ್ನೆಲ್ಲವನ್ನೂ ನೆರವೇರಿಸ ಬಲ್ಲ, ಯಮನನ್ನು ಜಯಿಸಿದ ಸರ್ವನಾದ, ಎಲ್ಲವನ್ನೂ ತಿಳಿದವನೂ, ದಕ್ಷಯಾಗವನ್ನು ಹಾಳುಮಾಡಿದವನೂ, ಆದ ಶಿವನಿಗೆ ಅನೇಕ ನಮಸ್ಕಾರಗಳು.

೮೫-೮೮. ಸತ್ವ, ರಜಸ್ಸು, ತಮಸ್ಸು, ಎಂಬ ಮೂರು ಗುಣಗಳ ಸ್ವರೂಪನೂ, ಮೂರುಗುಣಗಳನ್ನೂ ಮೀರಿದವನೂ, ಯೋಗಿಯೂ, ಸಂಸಾರಸ್ವರೂಪನೂ, ಅನಾದಿ ಪ್ರವಾಹಸ್ವರೂಪನೂ, ಜಗತ್ತೆಂಬ ದೊಡ್ಡ ಯಂತ್ರದ ಚಾಲಕನೂ, ಚಂದ್ರ, ಅಗ್ನಿ, ಸೂರ್ಯರ ಸ್ವರೂಪನೂ,

ನಮಶ್ಚಂದ್ರಾಗ್ನಿ ಸೂರ್ಯಾಯ ಮುಕ್ತಿವೈಚಿತ್ರ್ಯಹೇತವೇ ।
ವರದಾಯಾವತಾರಾಯ ಸರ್ವಕಾರಣ ಹೇತವೇ ॥೮೭॥
ಕಪಾಲಿನೇ ಕರಾಲಾಯ ಪತಯೇ ಪುಣ್ಯಕೀರ್ತಯೇ ।
ಅಮೋಘಾಯಾಗ್ನಿ ನೇತ್ರಾಯ ಲಕುಲೀಶಾಯ ಶಂಭವೇ ॥೮೮॥
ಭಿಷಕ್ತಮಾಯ ಮುಂಡಾಯ ದಂಡಿನೇ ಯೋಗರೂಪಿಣೇ ।
ಮೇಘವಾಹಾಯ ದೇವಾಯ ಪಾರ್ವತೀ ಪತಯೇ ನಮಃ ॥೮೯॥
ಅವ್ಯಕ್ತಾಯ ವಿಶೋಕಾಯ ಸ್ಥಿರಾಯ ಸ್ಥಿರಧನ್ವಿನೇ ।
ಸ್ಥಾಣವೇ ಕೃತ್ತಿವಾಸಾಯ ನಮಃ ಪಂಚಾರ್ಥಹೇತವೇ ॥೯೦॥
ವರದಾಯೈಕಪಾದಾಯ ನಮಶ್ಚಂದ್ರಾರ್ಧ ಮೌಲಿನೇ ।
ನಮಸ್ತೇಽಧ್ವರ ರಾಜಾಯ ವಯಸಾಂ ಪತಯೇ ನಮಃ ॥೯೧॥

---

ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಎಂದು ವಿಚಿತ್ರವಾದ ಮುಕ್ತಿಗಳನ್ನು ಕೊಡಬಲ್ಲವನೂ, ವರವನ್ನು ಕೊಡುವವನೂ, ಅನೇಕ ಅವತಾರಗಳನ್ನೂ ಮಾಡಿದವನೂ, ಎಲ್ಲಾ ಕಾರಣ ಭೂತವಾದ ಪಂಚಭೂತಗಳಿಗೂ, ಮೂಲಕಾರಣನೂ, ಕಪಾಲವನ್ನು ಹಿಡಿದಿರುವವನೂ, ಭಯಂಕರನೂ, ಜಗತ್ತಿಗೆ ಪತಿಯೂ, ಪವಿತ್ರವಾದ ಕೀರ್ತಿಯುಳ್ಳವನೂ, ವ್ಯರ್ಥವಾಗದ ಹಾಗೆ ಫಲವನ್ನು ಕೊಡಬಲ್ಲವನೂ, ಲಕುಲೀಶ ಎಂಬ ಅವತಾರವನ್ನು ಮಾಡಿದವನೂ, ಶುಭಕರನಾದ ಶಂಭುವೂ ಆದ ಶಿವನಿಗೆ ಅನೇಕ ನಮಸ್ಕಾರಗಳು.

೮೯–೯೧. ಸಂಸಾರವೆಂಬ ರೋಗವನ್ನು ನಿವಾರಣೆ ಮಾಡುವವನೂ, ಕೂದಲನ್ನು ತೆಗಿಸಿದ ತಲೆಯುಳ್ಳವನೂ, ದೂರ್ವಾಸಾದಿ ರೂಪದಲ್ಲಿ ದಂಡವನ್ನು ಹಿಡಿದಿರುವವನೂ, ಯೋಗರೂಪವನ್ನು ಧಾರಣೆಮಾಡಿರುವವನೂ, ಮೇಘರೂಪವನ್ನು ಧರಿಸಿರುವ ವಿಷ್ಣುವೇ ವಾಹನವಾಗುಳ್ಳವನೂ, ದೇವನೂ, ಪಾರ್ವತೀಪತಿಯೂ, ಇಂದ್ರಿಯಗಳಿಗೆ ಅಗೋಚರನೂ, ದುಃಖವಿಲ್ಲದವನೂ, ಸ್ಥಿರನೂ, ಸ್ಥಿರವಾದ ಧನುಸ್ಸುಳ್ಳವನೂ, ಚಲಿಸದೇ ಇರುವವನೂ, ಆನೆಯ ಚರ್ಮವನ್ನು ಹೊದ್ದುಕೊಂಡಿರುವವನೂ, ಶಬ್ದವೇ ಮೊದಲಾದ ಐದು ಗುಣಗಳಿಗೂ ಕಾರಣನೂ, ವರ

**ಯೋಗೀಶ್ವರಾಯ ನಿತ್ಯಾಯ ಸತ್ಯಾಯ ಪರಮೇಷ್ಠಿನೇ ।**
**ಸರ್ವಾತ್ಮನೇ ನಮಸ್ತುಭ್ಯಂ ನಮಃ ಸರ್ವೇಶ್ವರಾಯ ತೇ ॥೯೨॥**

**ಏಕ ದ್ವಿತ್ರಿ ಚತುಃ ಪಂಚ ಕೃತ್ವಸ್ತೇಽಸ್ತು ನಮೋನಮಃ ।**
**ದಶಕೃತ್ವಸ್ತು ಸಾಹಸ್ರ ಕೃತ್ವಸ್ತೇ ಚ ನಮೋನಮಃ ॥೯೩॥**

**ನಮೋಽಪರಿಮಿತಂ ಕೃತ್ವಾಽನಂತ ಕೃತ್ವೋ ನಮೋನಮಃ ।**
**ನಮೋ ನಮೋ ನಮೋ ಭೂಯಃ ಪುನರ್ಭೂಯೋ ನಮೋ ನಮಃ ॥**

**॥ ಸೂತ ಉವಾಚ ॥**

**ನಾಮ್ನಾ ಮಷ್ಟ ಶತೇನೈವಂ ಸ್ತುತ್ವಾಽಮೃತ ಮಯೇನ ತು ।**
**ಪುನಸ್ತು ಪ್ರಾರ್ಥಯಾಮಾಸ ನೃಸಿಂಹಃ ಶರಭೇಶ್ವರಂ ॥೯೫॥**

**ಯದಾ ಯದಾ ಮಮಾಽಜ್ಞಾನ ಮತ್ಯಹಂಕಾರ ದೂಷಿತಂ ।**
**ತದಾ ತದಾಽಪನೇತವ್ಯಂ ತ್ವಯೈವ ಪರಮೇಶ್ವರ ॥೯೬॥**

---

ವನ್ನು ಕೊಡುವವನೂ, ಜ್ಞಾನಿಗಳಿಂದ ಹೊಂದಲ್ಪಡಬೇಕಾದ ಒಂದೇ ವಸ್ತುವೂ, ಅರ್ಧವಾದ ಚಂದ್ರನೇ ತಲೆಗೆ ಆಭರಣವಾಗುಳ್ಳವನೂ, ಯಾಗಕ್ಕೆ ಅಧಿದೇವತೆಯೂ, ಪಕ್ಷಿಗಳಿಗೆ ಅಧಿಪತಿಯೂ, ಆದ ಶಿವನಿಗೆ ಅನೇಕ ನಮಸ್ಕಾರಗಳು.

೯೨–೯೫. ಯೋಗೀಶ್ವರನೂ, ನಿತ್ಯನೂ, ಸತ್ಯನೂ, ಪರಬ್ರಹ್ಮ ಸ್ವರೂಪನೂ, ಎಲ್ಲರ ಆತ್ಮಸ್ವರೂಪನೂ, ಸರ್ವೇಶ್ವರನೂ ಆದ ಶಿವನಿಗೆ ಒಂದು ಸಲ, ಎರಡು ಸಲ, ಮೂರು ಸಲ, ನಾಲ್ಕು ಸಲ, ಐದು ಸಲ, ನಮಸ್ಕಾರ ಮಾಡುವೆನು. ನಿನಗೆ ಹತ್ತು ಸಲ, ಸಾವಿರ ಸಲ, ನಮಸ್ಕಾರಗಳು. ನಿನಗೆ ಲೆಖ್ಖವಿಲ್ಲದಷ್ಟು, ಲೆಕ್ಕಕ್ಕೆ ಕೊನೆಯೇ ಇಲ್ಲದಷ್ಟು ನಮಸ್ಕಾರಗಳು. ನಿನಗೆ ಪುನಃ ಪುನಃ ನಮಸ್ಕಾರಗಳು.

ಸೂತನು ಹೇಳಿದನು:–ನೃಸಿಂಹನು ಅಮೃತಮಯವಾದ ನೂರೆಂಟು ಶಿವನ ನಾಮಗಳನ್ನು ಹೀಗೆ ಉಚ್ಚರಿಸಿ, ಶರಭಮೃಗ ರೂಪವನ್ನು ತಾಳಿದ ಈಶ್ವರನನ್ನು ಪ್ರಾರ್ಥನೆ ಮಾಡಿಕೊಂಡನು.

೯೬–೯೮. ಓ ಪರಮೇಶ್ವರನೇ, ಯಾವಾಗ ಯಾವಾಗ ನನಗೆ ಅಹಂಕಾರವು ಹೆಚ್ಚಿ ಅಜ್ಞಾನವು ಉಂಟಾಗುವುದೋ, ಆವಾಗಲೆಲ್ಲವೂ ನೀನೇ ಕರುಣೆಯಿಂದ ಆ ಅಜ್ಞಾನವನ್ನು ಹೋಗಲಾಡಿಸಬೇಕು. ಹೀಗೆ

ಏವಂ ವಿಜ್ಞಾಪಯನ್ ಪ್ರೀತಃ ಶಂಕರಂ ನರಕೇಸರೀ ।
ನನ್ವಶಕ್ತೋ ಭವಾ ನ್ವಿಷ್ಣೋ ಜೀವಿತಾಂತಂ ಪರಾಜಿತಃ ॥೯೭॥
ತದ್ವಕ್ತ್ರ ಶೇಷ ಮಾತ್ರಾಂತಂ ಕೃತ್ವಾ ಸರ್ವಸ್ಯ ವಿಗ್ರಹಂ ।
ಶುಕ್ತಿ ಶಿತ್ಯಂ ತದಾಮುಂಗಂ ವೀರಭದ್ರಃ ಕ್ಷಣಾತ್ತತಃ ॥೯೮॥

॥ ದೇವಾ ಊಚುಃ ॥

ಅಥ ಬ್ರಹ್ಮಾದಯಃ ಸರ್ವೇ ವೀರಭದ್ರ ತ್ವಯಾ ದೃಶಾ ।
ಜೀವಿತಾಃ ಸ್ಮೋ ವಯಂ ದೇವಾಃ ಪರ್ಜನ್ಯೇನೇವ ಪಾದಪಾಃ ॥೯೯॥
ಯಸ್ಯ ಭೀಷಾ ದಹತ್ಯಗ್ನಿ ರುದೇತಿ ಚ ರವಿಃ ಸ್ವಯಂ ।
ವಾತೋ ವಾತಿ ಚ ಸೋऽಸಿ ತ್ವಂ ಮೃತ್ಯುರ್ಧಾವತಿ ಪಂಚಮಃ ॥

---

ನೃಸಿಂಹನು ಭಕ್ತಿ ಸಂತೋಷದಿಂದ ವಿಜ್ಞಾಪನೆ ಮಾಡಿಕೊಂಡು, ಮನ ಶ್ಶುದ್ಧಿಯನ್ನು ಪಡೆದನು. ವೀರಭದ್ರಸ್ವರೂಪನಾದ ಶಿವನು, ಎಲೈ ವಿಷ್ಣುವೇ, ನೀನು ಅಶಕ್ತನಾಗಿ ಸಾಯುವಷ್ಟು ಸೋಲನ್ನು ನನ್ನ ಕೈಯಲ್ಲಿ ಅನುಭವಿಸಿದೆ. ಹೀಗೆಂದು ಹೇಳಿ, ನೃಸಿಂಹನ ದೇಹವೆಲ್ಲವೂ ನಷ್ಟವಾಗಿ ಮುಖ ಮಾತ್ರ ಉಳಿದಿರಲು, ಮೂಳೆಗಳಿಂದ ಬೆಳಗಿರುವ ಆ ತಲೆಯ ಭಾಗವು ಚಲಿಸುತ್ತಿರಲು ಅದನ್ನು ತೆಗೆದುಕೊಂಡು ಹಾರದಲ್ಲಿ ತನಗೆ ಅಲಂಕಾರವಾಗಿ ಮಾಡಿಕೊಂಡನು.

೯೯–೧೦೧. ಆಗ ದೇವತೆಗಳು ಹೇಳಿದರು :–ಬ್ರಹ್ಮನೇ ಮೊದಲಾದ ನಾವೆಲ್ಲರೂ, ಓ ವೀರಭದ್ರಸ್ವರೂಪವನ್ನು ಧರಿಸಿದ ಶಿವನೇ, ನಿನ್ನ ಕೃಪಾದೃಷ್ಟಿಯಿಂದಲೇ ಈಗ ಬಂದಿದ್ದ ನಮ್ಮ ವಿಪತ್ತಿನಿಂದ ಪಾರಾಗಿ, ಮೇಘದಿಂದ ಮರಗಳಂತೆ, ಬದುಕಿದೆವು. ನಿನ್ನ ಭಯದಿಂದಲೇ ಬೆಂಕಿಯು ಸುಡುತ್ತದೆ. ಸೂರ್ಯನೂ ಜ್ವಲಿಸುತ್ತಾನೆ. ಗಾಳಿಯು ಬೀಸುತ್ತದೆ. ಐದನೆಯದಾದ ಸಾವೂ ಕೂಡ ಭಯದಿಂದ ಓಡುತ್ತದೆ! ನೀನು ಇಂದ್ರಿಯಗಳಿಗೆ ಅಗೋಚರವಾದ , ಸ್ವರೂಪವುಳ್ಳವನೂ, ಆಕಾಶದ ಸ್ವರೂಪನೂ, ಕಾಲದ ಎಲ್ಲೆಯನ್ನು ಮೀರಿದವನೂ, ಸದಾಶಿವನೂ,

ಯದವ್ಯಕ್ತಂ ಪರಂ ವ್ಯೋಮ ಕಲಾಽತೀತಂ ಸದಾಶಿವಂ।
ಭಗವಂಸ್ತ್ವಾಮೇವ ಭವಂ ವದಂತಿ ಬ್ರಹ್ಮವಾದಿನಃ ॥೧೦೧॥

ಕೇ ವಯಮೇವ ಧಾತುಕ್ಯೇ ವೇದನೇ ಪರಮೇಶ್ವರಃ ।
ನ ವಿದ್ಧಿ ಪರಮಂ ಧಾಮ ರೂಪಲಾವಣ್ಯ ವರ್ಣನೇ ॥೧೦೨॥

ಉಪಸರ್ಗೇಷು ಸರ್ವೇಷು ತ್ರಾಯಸ್ವಾಽಸ್ಮಾನ್ ಗಣಾಧಿಪ ।
ಏಕಾದಶಾಽತ್ಮನ್ ಭಗವಾನ್ವರ್ತತೇ ರೂಪವಾನ್ ಹರಃ ॥೧೦೩॥

ಈ ದೃಶಾಂಸ್ತೇಽವತಾರಾಣಿ ದೃಷ್ಟ್ವಾ ಶಿವ ಬಹೂಂಸ್ತವಃ ।
ಕದಾಚಿತ್ಸಂದಿಹೇನ್ನಾಽಸ್ಮಾನ್ ತ್ತ್ವಚ್ಚಿಂತಾಽಸ್ತು ಮಯಾ ತಥಾ ॥

ಗುಂಜಾ ಗಿರಿವರ ತಟೋಽಮಿತ ರೂಪಾಣಿ ಸರ್ವಶಃ।
ಅಭ್ಯ ಸಂಹರ ಗಮ್ಯಂ ತೇ ನ ನೀತವ್ಯಂ ಪರಾಽಪರಾ ॥೧೦೫॥

---

ಬ್ರಹ್ಮಜ್ಞಾನಿಗಳಿಂದ ಪೂಜ್ಯನಾದ, ಭವ ಅಥವಾ ಸಂಸಾರಕ್ಕೆ ಮೂಲ ಕಾರಣನೆಂದು ಕರೆಯಲ್ಪಡುವವನೂ, ಆಗಿದ್ದೀಯೆ.

೧೦೨–೧೦೫. ನಾವೆಲ್ಲಿ? ಜಗತ್ತನ್ನು ಉದ್ಧಾರಮಾಡುವ ನಿನ್ನ ಪರಮೇಶ್ವರನ ಸ್ವರೂಪವನ್ನು ತಿಳಿಯುವುದು ಎನ್ನುವುದೆಲ್ಲಿ? ನಿನ್ನ ರೂಪ, ಲಾವಣ್ಯಗಳನ್ನು ವರ್ಣಿಸುವ ವಿಷಯದಲ್ಲಿ, ನಿನಗಿಂತಲೂ ಅತ್ಯುತ್ಕೃಷ್ಟವಾದ ತೇಜಸ್ಸು ಮತ್ತೊಂದಿಲ್ಲ. ಎಂದು ಮಾತ್ರ ಹೇಳಬಲ್ಲೆವು. ಗಣಗಳಿಗೆ ಅಧಿಪತಿಯಾದ ಓ ಶಿವನೇ, ನಮ್ಮನ್ನು ಎಲ್ಲ ವಿಪತ್ತಿನಲ್ಲೂ ನೀನೇ ದಯವಿಟ್ಟು ಕಾಪಾಡಬೇಕು. ನೀನು ಪೂಜ್ಯನೂ, ಹನ್ನೊಂದು ರುದ್ರರ ಸ್ವರೂಪನೂ, ಬಹಳ ರೂಪವಂತನೂ ಆಗಿದ್ದೀಯೆ. ಇಂಥಾ ನಿನ್ನ ಅನೇಕ ಅವತಾರಗಳನ್ನು ನೋಡಿದ ನಮಗೆ ನೀನು ನಮ್ಮ ಸಂಕಟವೆಂಬ ಕತ್ತಲೆಯನ್ನು ಹೋಗಲಾಡಿಸುವ ವಿಷಯದಲ್ಲಿ ಸಂದೇಹವೆಂಬುದಿಲ್ಲ. ನಿನ್ನ ವಿಶ್ವರೂಪದ ಧ್ಯಾನವನ್ನು ನಾವೆಂದೂ ಬಿಡುವುದೂ ಇಲ್ಲ. ಎಲ್ಲಾ ಕಡೆಯಲ್ಲಿಯೂ, ಗುಲಗಂಜಿಗಳು ಹೇರಳವಾಗಿರುವ, ಶ್ರೇಷ್ಠವಾದ ಪರ್ವತದ ತಪ್ಪಲು ಪ್ರದೇಶಗಳು ಎಷ್ಟು ಮನೋಹರವಾಗಿರುವುವೋ ಅಷ್ಟೇ ಚೆನ್ನಾಗಿರುವ ನಿನ್ನ ಅನೇಕ ರೂಪಗಳನ್ನು ದಯವಿಟ್ಟು ಈಗ ತೋರಿಸಬೇಡ. ಪರಾಪರವಸ್ತುವಾದ ನಿನ್ನ ನಿಜರೂಪವು ಸಾಮನ್ಯರಿಗೆ ಗೋಚರವಾಗದಿರಲಿ.

ದ್ವೇ ತನೂ ತವ ರುದ್ರಸ್ಯ ವೇದಜ್ಞಾ ಬ್ರಾಹ್ಮಣಾ ವಿದುಃ ।
ಘೋರಾಽನ್ಯಾ ಶಿವಾಽನ್ಯಾ ತೇ ಪ್ರತ್ಯೇಕ ಮನೇಕಧಾ ॥೧೦೬॥

ಇಹಾಽಸ್ಮಾನ್ಪಾಹಿ ಭಗವನ್ನಿತ್ಯಾಽಹತ ಮಹಾಬಲಃ ।
ಭವತಾ ಹಿ ಜಗತ್ಸರ್ವಂ ವ್ಯಾಪ್ತಂ ಸ್ವೇನೈವ ತೇಜಸಾ ॥೧೦೭॥

ಬ್ರಹ್ಮ ವಿಷ್ಣ್ವಿಂದ್ರ ಚಂದ್ರಾದಿ ವಯಂ ಚ ಪ್ರಮುಖಾಃ ಸುರಾಃ ।
ಸುರಾಽಸುರಾಃ ಸಂಪ್ರಸೂತಾ ಸ್ತ್ವತ್ತಃ ಸರ್ವೇ ಮಹೇಶ್ವರ ॥೧೦೮॥

ಬ್ರಹ್ಮಾ ಚ ಇಂದ್ರೋ ವಿಷ್ಣುಶ್ಚ ಯಮಾದ್ಯಾನ ಸುರಾಽಸುರಾನ್ ।
ತತೋ ನಿಗೃಹ್ಯ ಚ ಹರಿಂ ಸಿಂಹ ಇತ್ಯುಪ ಚೇತಸಂ ॥೧೦೯॥

ಯತೋ ಬಿಭರ್ಷಿ ಸಕಲಂ ವಿಭಜ್ಯ ತನು ಮಷ್ಟಧಾ ।
ಅತೋಽಸ್ಮಾನ್ಪಾಹಿ ಭಗವನ್ಸುರಾ ನ್ದಾನೈರಭೀಪ್ಸಿತೈಃ ॥೧೧೦॥

---

೧೦೬–೧೦೯. ವೇದಪಾರಂಗತರಾದ ಬ್ರಾಹ್ಮಣರು ಶಿವನಾದ ನಿನಗೆ ಎರಡು ಶರೀರಗಳುಂಟೆಂದು ಹೇಳುತ್ತಾರೆ. ಭಯಂಕರವಾದದ್ದೊಂದು, ಮಂಗಳಕರ ಮತ್ತು ಸೌಮ್ಯವಾದದ್ದು ಮತ್ತೊಂದು, ಇವು ಒಂದೊಂದೂ ಅನೇಕವಾಗಿವೆ. ಓ ಪೂಜ್ಯನೇ, ಯಾವಾಗಲೂ ಮಹಾಬಲಿಷ್ಠರನ್ನೂ ನಾಶಮಾಡಿದ ಶ್ರೇಷ್ಠ ಸ್ವರೂಪವುಳ್ಳ ನೀನು ನಮ್ಮನ್ನು ದಯವಿಟ್ಟು ಕಾಪಾಡು. ನಿನ್ನ ತೇಜಸ್ಸಿನಿಂದಲೇ ಎಲ್ಲಾ ಪ್ರಪಂಚವೂ ವ್ಯಾಪಿಸಲ್ಪಟ್ಟದೆ. ಓ ಮಹೇಶ್ವರನೇ, ನಿನ್ನಿಂದಲೇ ಬ್ರಹ್ಮ, ವಿಷ್ಣು, ಇಂದ್ರ, ಚಂದ್ರ, ನಾವುಗಳೂ ಎಲ್ಲರೂ ಹುಟ್ಟಿದ್ದೇವೆ. ಬ್ರಹ್ಮ, ಇಂದ್ರ, ವಿಷ್ಣು, ಮುಂತಾದ ನಮ್ಮೆಲ್ಲರ ಕ್ಷೇಮಕ್ಕಾಗಿ ನಮಗೆ ಶತ್ರುಗಳಾದ ರಾಕ್ಷಸರನ್ನೂ ನೀನು ನಾಶಮಾಡಿರುವುದಲ್ಲದೇ ಎಲ್ಲರನ್ನೂ ಅಹಂಕಾರದಿಂದ ತಿರಸ್ಕರಿಸಿ ಅಲಕ್ಷ್ಯಮಾಡಿದ್ದ ನರಸಿಂಹನನ್ನೂ ನಾಶಮಾಡಿದೆ.

೧೧೦–೧೧೪. ನೀನು ನಿನ್ನ ಶರೀರವನ್ನು ಎಂಟು ವಿಧವಾಗಿ ಇಟ್ಟುಕೊಂಡು ಲೋಕವನ್ನೆಲ್ಲವನ್ನು ಧಾರಣೆ ಮಾಡುತ್ತೀಯೆ. ಆದ್ದರಿಂದ ದೇವತೆಗಳಾದ ನಮ್ಮನ್ನು ಇಷ್ಟವಾದ ವರಗಳನ್ನು ಕೊಟ್ಟು, ದಯವಿಟ್ಟು ಕಾಪಾಡಬೇಕು. ವೀರಭದ್ರಸ್ವರೂಪಿಯಾದ ಶಿವನು ಈ ಮಾತನ್ನೆಲ್ಲ

**ಉವಾಚ ತಾನ್ ಸುರಾನ್ ದೇವೋ ಮಹರ್ಷೀಂಶ್ಚ ಪುರಾತನಾನ್ ।**
**ಯಥಾ ಜಲೇ ಜಲಂ ಕ್ಷಿಪ್ತಂ ಕ್ಷೀರಂ ಕ್ಷೀರೇ ಘೃತಂ ಘೃತೇ ॥೧೧೧॥**

**ಏಕ ಏವ ತದಾ ವಿಷ್ಣುಃ ಶಿವಲೀನೋ ನ ಚಾಽನ್ಯಥಾ ।**
**ಏಷ ಏವ ನೃಸಿಂಹಾತ್ಮಾ ಸದರ್ಪಶ್ಚ ಮಹಾಬಲಃ ॥೧೧೨॥**

**ಜಗತ್ಸಂಹಾರ ಕಾರೇಣ ಪ್ರವೃತ್ತೋ ನರ ಕೇಸರೀ ।**
**ಯೋಜನೀಯೋ ನಮಸ್ತಸ್ಮೈ ಮದ್ಭಕ್ತಿ ಸಿದ್ಧಿ ಕಾಂಕ್ಷಿಭಿಃ ॥೧೧೩॥**

**ಏತಾವ ದುಕ್ತ್ವಾ ಭಗವಾ ನ್ವೀರಭದ್ರೋ ಮಹಾಬಲಃ ।**
**ಅಪಶ್ಯನ್ಸರ್ವ ಭೂತಾನಾಂ ತತ್ರೈವಾಂತರಧೀಯತ ॥೧೧೪॥**

**ನೃಸಿಂಹ ಕೃತ್ತಿವಸನಸ್ತದಾ ಪ್ರಭೃತಿ ಶಂಕರಃ ।**
**ವಕ್ತ್ರಂ ತನ್ಮುಂಡ ಮಾಲಾಯಾಂ ನಾಯಕತ್ವೇನ ಕಲ್ಪಿತಂ ॥೧೧೫॥**

**ತತೋ ದೇವಾ ನಿರಾತಂಕಾಃ ಕೀರ್ತಯಂತಃ ಕಥಾಮಿಮಾಂ ।**
**ವಿಸ್ಮಯೋತ್ಫುಲ್ಲ ನಯನಾ ಜಗ್ಮುಃ ಸರ್ವೇ ಯಥಾಽಽಗತಂ ॥೧೧೬॥**

---

ವನ್ನೂ ಕೇಳಿ, ದೇವತೆಗಳನ್ನೂ, ಪ್ರಾಚೀನರಾದ ಋಷಿಗಳನ್ನೂ ಕುರಿತು ಹೀಗೆ ಹೇಳಿದನು. ನೀರಿನಲ್ಲಿ ಬಿದ್ದ ನೀರು ಹೇಗೋ, ಹಾಲಿನಲ್ಲಿ ಸೇರಿಸಿದ ಹಾಲು ಹೇಗೋ, ತುಪ್ಪದಲ್ಲಿ ಹಾಕಿದ ತುಪ್ಪವು ಹೇಗೋ, ಹಾಗೆ ಹಾಗೆ ವಿಷ್ಣುವೂ ಶಿವನಾದ ನನ್ನಲ್ಲೇ ಅಡಗಿರುತ್ತಾನೆ. ಇವನೇ ನೃಸಿಂಹ ಸ್ವರೂಪವನ್ನೂ ತಾಳಿ, ದರ್ಪದಿಂದ ಬಹಳ ಶಕ್ತಿಯನ್ನು ತೋರ್ಪಡಿಸಿ, ಜಗತ್ತನ್ನು ಸಂಹರಿಸಲು ಹೊರಟನು. ಆದರೂ ಅವನು ಈಗ ನಾಶಮಾಡಲ್ಪಟ್ಟು ನನ್ನಲ್ಲೇ ಅಡಗಿರುವುದರಿಂದ, ನನ್ನಲ್ಲಿ ಭಕ್ತಿಯುಟ್ಟು ಸಿದ್ಧಿಯನ್ನು ಅಪೇಕ್ಷಿಸುವ ಜನರು ಅವನನ್ನೂ ಪೂಜಿಸಬೇಕು. ಹೀಗೆ ಹೇಳಿ ಮಹಾ ಬಲಿಷ್ಠನಾದ, ವೀರಭದ್ರನ ಅವತಾರಮಾಡಿದ, ಶಿವನು ಎಲ್ಲರಿಗೂ ಕಾಣದಂತೆ ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು.

೧೧೫–೧೧೬. ಆಹೊತ್ತಿನಿಂದ ಆರಂಭಿಸಿ ಶಿವನು ನೃಸಿಂಹನ ಚರ್ಮವನ್ನೇ ತನ್ನ ಹೊದೆಯುವ ಬಟ್ಟೆಯಾಗಿ ಮಾಡಿಕೊಂಡನು. ನೃಸಿಂಹನ ಮುಖವು ಶಿವನ ಮುಂಡಮಾಲೆಯಲ್ಲಿ ಮಧ್ಯಮಣಿಯಾಯಿತು. ಅನಂತರ ದೇವತೆಗಳು ಆತಂಕವಿಲ್ಲದವರಾಗಿ ಈ ಕಥೆಯನ್ನು ಹೇಳಿ ಕೇಳುತ್ತಾ ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವರಾಗಿ ತಮ್ಮ ತಮ್ಮ ಸ್ಥಾನಗಳಿಗೆ

ಯ ಇದಂ ಪರಮಾಖ್ಯಾನಂ ಪುಣ್ಯಂ ದೇವೈಃ ಸಮನ್ವಿತಂ ।
ಪಠಿತ್ವಾ ಶೃಣುತೇ ಚೈವ ಸರ್ವದುಃಖ ವಿನಾಶನಂ ॥೧೧೭॥

ಧನ್ಯಂ ಯಶಸ್ಯ ಮಾಯುಷ್ಯ ಮಾರೋಗ್ಯಂ ಪುಷ್ಟಿ ವರ್ಧನಂ ।
ಸರ್ವವಿಘ್ನ ಪ್ರಶಮನಂ ಸರ್ವವ್ಯಾಧಿ ವಿನಾಶನಂ ॥೧೧೮॥

ಅಪಮೃತ್ಯು ಪ್ರಶಮನಂ ಮಹಾಶಾಂತಿ ಕರಂ ಶುಭಂ ।
ಅರಿಚಕ್ರ ಪ್ರಶಮನಂ ಸರ್ವಾಽಧಿ ಪ್ರವಿನಾಶನಂ ॥೧೧೯॥

ತತೋ ದುಃಸ್ವಪ್ನ ಶಮನಂ ಸರ್ವಭೂತ ನಿವಾರಣಂ ।
ವಿಷಗ್ರಹ ಕ್ಷಯಕರಂ ಪುತ್ರ ಪೌತ್ರಾದಿ ವರ್ಧನಂ ॥೧೨೦॥

ಯೋಗಸಿದ್ಧಿಪ್ರದಂ ಸಮ್ಯಕ್ ಶಿವಜ್ಞಾನ ಪ್ರಕಾಶಕಂ ।
ಶೇಷ ಲೋಕಸ್ಯ ಸೋಪಾನಂ ವಾಂಛಿತಾರ್ಥೈಕ ಸಾಧನಂ ॥೧೨೧॥

---

ತೆರಳಿದರು. ಯಾವನು ಈ ಶ್ರೇಷ್ಠವಾದ ದೇವತೆಗಳ ವಿಷಯವನ್ನೊಳಗೊಂಡ ಪುಣ್ಯಕರವಾದ ಕಥೆಯನ್ನು ಓದುವನೋ ಅಥವಾ ಕೇಳುವನೋ ಅವನಿಗೆ ಸರ್ವ ದುಃಖಗಳೂ ತೊಲಗುವುವು. ಮತ್ತು ಅವನ ಜನ್ಮವು ಕೃತಾರ್ಥವಾಗಿ, ಯಶಸ್ಸು, ಆಯುಸ್ಸು, ಆರೋಗ್ಯ, ದೇಹಪುಷ್ಟಿ, ಎಲ್ಲವೂ ಬರುವುವು. ಮತ್ತು ಅವನ ತೊಂದರೆಗಳೆಲ್ಲವೂ ಪರಿಹಾರವಾಗಿ, ಸಕಲ ರೋಗಗಳೂ ನಾಶವಾಗುವುವು.

೧೧೯–೧೨೨. ಅವನ ಅಕಾಲ ಮೃತ್ಯುವು ತಪ್ಪುವುದು. ಅವನಿಗೆ ಮಹಾ ಶಾಂತಿಯೂ, ಮಂಗಳವೂ ಉಂಟಾಗುವುವು. ಅವನಿಗೆ ಕೆಟ್ಟ ಶತ್ರುಗಳು ಎದುರು ಬೀಳುವುದಿಲ್ಲ. ಅವನ ಮನೋವ್ಯಥೆಗಳೆಲ್ಲವೂ ಪರಿಹಾರವಾಗುವುವು. ಅವನಿಗೆ ಕೆಟ್ಟ ಸ್ವಪ್ನಗಳು ಬೀಳುವುದಿಲ್ಲ. ಭೂತಪ್ರೇತಗಳ ಕಾಟವೂ ಉಂಟಾಗುವುದಿಲ್ಲ. ವಿಷ ಅಥವಾ ಕೆಟ್ಟ ಗ್ರಹಗಳ ಕಾಟ ಇವು ಒಂದೂ ಇರುವುದಿಲ್ಲ. ಅವನಿಗೆ ಮಕ್ಕಳು ಮೊಮ್ಮಕ್ಕಳೂ ಆಗಿ ವಂಶಾಭಿವೃದ್ಧಿಯಾಗುವುದು. ಅವನಿಗೆ ಯೋಗ ಸಿದ್ಧಿಯೂ ಶಿವನ ವಿಷಯವಾದ ವಿಶೇಷ ಜ್ಞಾನವೂ, ಉತ್ತಮ ಲೋಕಪ್ರಾಪ್ತಿಯೂ, ಸಕಲ ಇಷ್ಟಾರ್ಥ ಸಿದ್ಧಿಯೂ, ವಿಷ್ಣುಮಾಯೆಯಿಂದ ಪಾರಾಗೋಣವೂ, ದೇವತಾರಹಸ್ಯದ ತಿಳಿವಳಿಕೆಯೂ, ಅವನಿಗೆ ಬೇಕಾದ್ದೆಲ್ಲವೂ ಲಭಿಸು

ವಿಷ್ಣುಮಾಯಾ ನಿರಸನಂ ದೇವತಾ ಪರಮಾರ್ಥದಂ ।
ವಾಂಛಾ ಸಿದ್ಧಿಪ್ರದಂ ಚೈವ ಬುದ್ಧಿ ಪ್ರಜ್ಞಾಽದಿ ಸಾಧನಂ ॥೧೨೨॥

ಇದಂ ತು ಶರಭಾಽಕಾರಂ ಪರಂ ರೂಪಂ ಪಿನಾಕಿನಃ ।
ಪ್ರಕಾಶಿತವ್ಯಂ ಭಕ್ತೇಷು ಚಿರೇಷೂದ್ಯಮಿತೇಷು ಚ ॥೧೨೩॥

ತೈರೇವ ಪಠಿತವ್ಯಂ ಚ ಶ್ರೋತವ್ಯಂ ಚ ಶಿವಾಽತ್ಮಭಿಃ ।
ಶಿವೋತ್ಸವೇಷು ಸರ್ವೇಷು ಚತುರ್ದಶ್ಯಷ್ಟಮೀಷು ಚ ॥೧೨೪॥

ಪಠೇ ತ್ಪ್ರತಿಷ್ಠಾ ಕಾಲೇಷು ಶಿವಸನ್ನಿಧಿ ಕಾರಣಂ ।
ಚೋರವ್ಯಾಘ್ರಾಽಹಿ ಹಿಂಸಾಂತ ಕೃತೋ ರಾಜಭಯೇಷು ಚ ॥

ಅತ್ರಾಽನ್ಯೋತ್ಪಾತ ಭೂಕಂಪ ದವಾಗ್ನಿ ಪಾಂಸು ವೃಷ್ಟಿಷು ।
ಉಲ್ಕಾಪಾತೇ ಮಹಾಪಾತೇ ವಿನಾವೃಷ್ಟ್ಯಾಽತಿ ವೃಷ್ಟಿಷು ॥೧೨೬॥

---

ವುದು. ಜ್ಞಾನ, ಐಶ್ವರ್ಯ, ಅಭಿವೃದ್ಧಿಗಳ ಸಿದ್ಧಿಯೂ ಉಂಟಾಗುವುದು.

೧೨೩–೧೨೫. ಪರಮೇಶ್ವರನಾದ ಶಿವನು ಬಹಳ ಕಾಲ ತನ್ನಲ್ಲಿ ಭಕ್ತರಾದವರಿಗೆ ಈ ಶ್ಲಾಘ್ಯವಾದ ಶರಭಮೃಗದ ಸ್ವರೂಪವನ್ನು ತೋರಿಸುವನು. ಶಿವನಲ್ಲಿ ಯಾರು ಅಚಲವಾದ ಉತ್ಸಾಹವನ್ನೂ ಭಕ್ತಿಯನ್ನೂ ಇಟ್ಟಿರುವರೋ ಅವರೇ ಇದನ್ನು ಓದಬೇಕು. ಅಥವಾ ಕೇಳಬೇಕು. ಶಿವೋತ್ಸವ ಕಾಲದಲ್ಲಿಯೂ, ಚತುರ್ದಶೀ, ಅಷ್ಟಮೀ ಮುಂತಾದ ತಿಥಿಗಳಲ್ಲಿಯೂ, ಶಿವ ಪ್ರತಿಷ್ಠೆಮಾಡುವ ಸಂದರ್ಭಗಳಲ್ಲಿಯೂ, ಇದನ್ನು ಕೇಳಬೇಕು, ಅಥವಾ ಹೇಳಬೇಕು. ಹೀಗೆ ಮಾಡುವವನಿಗೆ ಕಳ್ಳರು, ಹುಲಿ, ಹಾವು, ಸಿಂಹ, ಮುಂತಾದ್ದರಿಂದ ಭಯವೂ ರಾಜನ ದೆಸೆಯಿಂದ ಭಯವಾಗಲಿ ಸಂಭವಿಸುವುದಿಲ್ಲ.

೧೨೬–೧೨೮. ಇತರರಿಂದ ತೊಂದರೆ, ಭೂಕಂಪ, ಕಾಡುಕಿಚ್ಚು, ವಿಶೇಷವಾದ ಧೂಳು, ಬಹಳ ಮಳೆ, ಬೆಂಕಿಯ ಜ್ವಾಲೆಗೆ ಸಿಕ್ಕುವಿಕೆ, ಬಿರುಗಾಳಿ, ಮಳೆಯಿಲ್ಲದಿರುವುದು, ಅಥವಾ ಹೆಚ್ಚಾಗುವುದು. ಇಂಥಾ ಸಮಯಗಳಲ್ಲಿ ಆತ್ಮರಕ್ಷಣೆಗಾಗಿ ಇದನ್ನು ಹೇಳಬೇಕು. ಅಥವಾ ಕೇಳ

ಅತಸ್ತತ್ರ ಪಠೇದ್ವಿದ್ವಾನ್ ಶಿವಭಕ್ತೋ ದೃಢವ್ರತಃ ।
ಯಃ ಪಠೇಚ್ಛೃಣುಯಾದ್ವಾಽಪಿ ಸ್ತವಂ ಸರ್ವ ಮನುತ್ತಮಂ ॥
ಸ ರುದ್ರತ್ವಂ ಸಮಾಸಾದ್ಯ ರುದ್ರಸ್ಯಾನು ಚರೋ ಭವೇತ್ ॥೧೨೮॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಷಷ್ಟಿನವತಿತಮೋಽಧ್ಯಾಯಃ

---

ಬೇಕು. ಆದ್ದರಿಂದ ಶಿವನ ಭಕ್ತನೂ, ದೃಢವಾದ ಮನೋ ನಿಶ್ಚಯವುಳ್ಳವನೂ, ವಿದ್ವಾಂಸನೂ, ಆದ ಮಾನವನು ಇದನ್ನು ಓದಲಿ, ಅಥವಾ ಕೇಳಲಿ, ಅವನು ರುದ್ರನೇ ಆಗಿ, ಶಿವನ ಪರಿವಾರಗಳಲ್ಲಿ ಶ್ರೇಷ್ಠವಾದ ಸ್ಥಾನವನ್ನು ಗಳಿಸುವುದರಲ್ಲಿ ಸಂದೇಹವಿಲ್ಲ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ '' ಶಿವನು ಶರಭಮೃಗ ಸ್ವರೂಪವನ್ನು ಹೊಂದಿದ ಕಥೆ '' ಎಂಬ ತೊಂಬತ್ತಾರನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸಪ್ತನವತಿತಮೋಽಧ್ಯಾಯಃ

**॥ ಋಷಯ ಊಚುಃ ॥**

**ಜಲಂಧರಂ ಜಟಾಮೌಲಿಃ ಪುರಾ ಜಂಭಾರಿ ವಿಕ್ರಮಂ ।**
**ಕಥಂ ಜಘಾನ ಭಗವಾನ್ ಭಗನೇತ್ರ ಹರೋ ಹರಃ ॥ ೧ ॥**
**ವಕ್ತು ಮರ್ಹಸಿ ಚಾಽಸ್ಮಾಕಂ ರೋಮಹರ್ಷಣ ಸುವ್ರತ ।**

**॥ ಸೂತ ಉವಾಚ ॥**

**ಜಲಂಧರ ಇತಿ ಖ್ಯಾತೋ ಜಲಮಂಡಲ ಸಂಭವಃ ॥ ೨ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತೇಳನೆಯ ಅಧ್ಯಾಯವು.

೧. ಋಷಿಗಳು ಹೇಳಿದರು :—ಓ ಸೂತ ಮಹರ್ಷಿಯೇ, ಪೂರ್ವದಲ್ಲಿ ಭಗನ ಕಣ್ಣುಗಳನ್ನು ಅಪಹರಿಸಿದ ಜಟಾಧಾರಿಯೂ ಆದ, ಆ ಪರಮೇಶ್ವರನು ಜಂಭಾಸುರನ ಶತ್ರುವಾದ, ಇಂದ್ರನಿಗೆ ಸಮಾನನಾದ ಜಲಂಧರನೆಂಬ ರಾಕ್ಷಸನನ್ನು ಸಂಹರಿಸಿದ ಬಗೆಯನ್ನು ಹರ್ಷಸೂಚಕವಾದ ರೋಮಾಂಚವನ್ನುಂಟುಮಾಡುವ ಆಶ್ಚರ್ಯಕರವಾಗಿ ಕಥೆಗಳನ್ನು ಹೇಳುವ ರೋಮಹರ್ಷಣನೆಂದು ಪ್ರಸಿದ್ಧನಾಗಿರುವ ನೀನು ನಮಗೆ ಹೇಳುವವನಾಗು.

೨. ಸೂತನು ಹೇಳಿದನು :—ಎಲೈ ಋಷಿಗಳೇ, ಹಿಂದೆ ಒಂದಾನೊಂದು ಕಾಲದಲ್ಲಿ ಜಲದ ಮಧ್ಯದಲ್ಲಿ ಜನ್ಮವನ್ನು ತಾಳಿದ ಕಾರಣದಿಂದಲೇ ಜಲಂಧರನೆಂಬ ಹೆಸರಿನಿಂದ ಪ್ರಖ್ಯಾತನಾದ ಓರ್ವ ರಾಕ್ಷಸನು ತಪಸ್ಸನ್ನು ಆಚರಿಸಿ, ಪರಾಕ್ರಮವನ್ನು ಪಡೆದು ಯಮನಿಗೆ ಸಮಾನನಾಗಿದ್ದನು.

ಆಸೀದಂತಕ ಸಂಕಾಶ ಸ್ತಪಸಾ ಲಬ್ಧ ವಿಕ್ರಮಃ ।
ತೇನ ದೇವಾಃ ಸ ಗಂಧರ್ವಾಃ ಸಯಕ್ಷೋರಗ ರಾಕ್ಷಸಾಃ ॥ ೩ ॥
ನಿರ್ಜಿತಾಃ ಸಮರೇ ಸರ್ವೇ ಬ್ರಹ್ಮಾ ಚ ಭಗವಾನಜಃ ।
ಜಿತ್ವೈವ ದೇವಸಂಘಾತಂ ಬ್ರಹ್ಮಾಣಂ ವೈ ಜಲಂಧರಃ ॥ ೪ ॥
ಜಗಾಮ ದೇವದೇವೇಶಂ ವಿಷ್ಣುಂ ವಿಶ್ವಹರಂ ಗುರುಂ ।
ತಯೋಃ ಸಮಭವ ದ್ಯುದ್ಧಂ ದಿವಾರಾತ್ರ ಮವಿಶ್ರಮಂ ॥ ೫ ॥
ಜಲಂಧರೇ ಶಯೋಸ್ತೇನ ನಿರ್ಜಿತೋ ಮಧುಸೂದನಃ ।
ಜಲಂಧರೋಽಪಿ ತಂ ಜಿತ್ವಾ ದೇವದೇವಂ ಜನಾರ್ದನಂ ॥ ೬ ॥
ಪ್ರೋವಾಚೇದಂ ದಿತೇಃ ಪುತ್ರಾನ್ ನ್ಯಾಯಧೀರ್ಜೇತು ಮೀಶ್ವರಂ ।
ಸರ್ವೇ ಜಿತಾ ಮಯಾ ಯುದ್ಧೇ ಶಂಕರೋ ಹ್ಯಜಿತೋ ರಣೇ॥ ೭ ॥

---

೩. ದೇವತೆಗಳೆಲ್ಲರೂ, ಗಂಧರ್ವರೇ ಮೊದಲಾದವರಿಂದಲೂ, ಯಕ್ಷರೇ ಮೊದಲಾದವರಿಂದಲೂ, ಕೂಡಿದವರಾಗಿ ಜಲಂಧರನೊಂದಿಗೆ ಯುದ್ಧವನ್ನು ಮಾಡಲು ಅವರೆಲ್ಲರನ್ನೂ ಆ ರಾಕ್ಷಸನು ಜಯಿಸಿ, ಬ್ರಹ್ಮನನ್ನೂ ಜಯಿಸಿದನು.

೪. ಈ ಪ್ರಕಾರವಾಗಿ ದೇವತೆಗಳನ್ನೂ ಮತ್ತು ಬ್ರಹ್ಮನನ್ನೂ ಜಯಿಸಿ, ಆ ಜಲಂಧರನು ಇಂದ್ರನಿಗೆ ಪ್ರಭುವಾಗಿಯೂ, ಜಗತ್ಸಂಹಾರಕನಾಗಿಯೂ ಮತ್ತು ಹಿತೋಪದೇಶಕನೂ, ಆದ ವಿಷ್ಣುವಿನ ಸಮೀಪವನ್ನು ಕುರಿತು ಯುದ್ಧಕ್ಕೋಸ್ಕರ ತೆರಳಿದನು.

೫. ಜಲಂಧರನೂ ಮತ್ತು ವಿಷ್ಣುವೂ ಇಬ್ಬರಿಬ್ಬರಿಗೂ ಅಹೋರಾತ್ರಿಯೂ ವಿಶ್ರಾಮವಿಲ್ಲದೆ ಯುದ್ಧವು ಜರುಗಿತು. ಅಂತ್ಯದಲ್ಲಿ ಜಲಂಧರನು ವಿಷ್ಣುವನ್ನೂ ಸೋಲಿಸಿದನು.

೬. ನ್ಯಾಯಕುಶಲನಾದ ಆ ಜಲಂಧರನು ದೇವತೆಗಳಿಗೆಲ್ಲರಿಗೂ ಪ್ರಭುವಾದ ಆ ವಿಷ್ಣುವನ್ನೂ ಜಯಿಸಿ, ಅನಂತರದಲ್ಲಿ ಈಶ್ವರನನ್ನೂ ಜಯಿಸಲು ಇಚ್ಛಿಸಿ, ದಿತಿಯ ಪುತ್ರರಾದ ರಾಕ್ಷಸರನ್ನು ಕುರಿತು ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.

೭-೮. ಎಲೈ ದೈತ್ಯರೇ, ಸಮಸ್ತ ದೇವತೆಗಳನ್ನೂ ಮತ್ತು ವಿಷ್ಣು

ತಂ ಜಿತ್ವಾ ಶರ್ವ ಮೀಶಾನಂ ಗಣಪ್ಯೈ ರ್ನಂದಿನಾ ಕ್ಷಣಾತ್ ।
ಅಹಮೇವ ಭವತ್ವಂ ಚ ಬ್ರಹ್ಮತ್ವಂ ವೈಷ್ಣವಂ ತಥಾ ॥ ೮ ॥
ವಾಸವ ತ್ವಂ ಚ ಯುಷ್ಮಾಕಂ ದಾಸ್ಯೇ ದಾನವ ಪುಂಗವಾಃ ।
ಜಲಂಧರ ವಚಃ ಶ್ರುತ್ವಾ ಸರ್ವೇ ತೇ ದಾನವಾಧಮಾಃ ॥ ೯ ॥
ಜಗರ್ಜು ರುಚ್ಚೈಃ ಪಾಪಿಷ್ಠಾಃ ಮೃತ್ಯುದರ್ಶನ ತತ್ಪರಾಃ ।
ದೈತ್ಯೈ ರೇತೈ ಸ್ತಥಾಽನ್ಯೈಶ್ಚ ರಥ ನಾಗ ತುರಂಗಮೈಃ ॥೧೦॥
ಸನ್ನದ್ಧೈಃ ಸಹ ಸನ್ನಹ್ಯ ಶರ್ವಂ ಪ್ರತಿ ಯಯೌ ಬಲೀ ।
ಭವೋಽಪಿ ದೃಷ್ಟ್ವಾ ದೈತ್ಯೇಂದ್ರಂ ಮೇರುಕೂಟ ಮಿವ ಸ್ಥಿತಂ ॥೧೧॥

---

ವನ್ನೂ ಸಹ ನಾನು ಯುದ್ಧದಲ್ಲಿ ಜಯಿಸಿದೆನು. ಆದರೆ ಈಶ್ವರನನ್ನು ಮಾತ್ರ ಜಯಿಸಿರುವುದಿಲ್ಲ. ಆದುದರಿಂದ ಸಮಸ್ತರಿಗೂ ಪ್ರಭುವಾದ ಆ ಈಶ್ವರನನ್ನೂ ನಂದಿಯೊಂದಿಗೂ ಮತ್ತು ಪ್ರಮಥಗಣಗಳೊಂದಿಗೂ ಜಯಿಸಿ, ನಾನೇ ನಿಮಗೆ ಈಶ್ವರನ ಪದವಿಯನ್ನೂ, ಬ್ರಹ್ಮನ ಪದವಿಯನ್ನೂ ಮತ್ತು ವಿಷ್ಣುವಿನ ಪದವಿಯನ್ನೂ ಕೊಡುವೆನು. ಹೀಗೆ ನಿಮಗೆಲ್ಲರಿಗೂ, ಎಲೈ ದಾನವ ಶ್ರೇಷ್ಠರೇ, ಇದಲ್ಲದೇ ಇಂದ್ರನಪದವಿಯನ್ನೂ ತಪ್ಪದೆ ದೊರಕಿಸುವೆನು.

೯. ಹೀಗೆಂದು ಹೇಳಿದ ಆ ಜಲಂಧರನ ಮಾತನ್ನು ಕೇಳಿ, ನೀಚರೂ, ಪಾಪಿಗಳೂ ಮತ್ತು ಮರಣೋನ್ಮುಖರೂ ಆದ ಸಮಸ್ತ ರಾಕ್ಷಸರೂ ಗಟ್ಟಿಯಾಗಿ ಗರ್ಜಿಸಿದರು.

೧೦. ತರುವಾಯ ರಥವೇನು, ಆನೆಗಳೇನು ಮತ್ತು ಕುದುರೆಗಳೇನು, ಇವುಗಳಿಂದ ಸಿದ್ಧರಾದ, ಆ ದೈತ್ಯಗಣಗಳೊಂದಿಗೆ ಪರಾಕ್ರಮಶಾಲಿಯಾದ ಜಲಂಧರನು ಯುದ್ಧಕ್ಕೋಸ್ಕರ ಈಶ್ವರನ ಸಮೀಪವನ್ನು ಪಡೆದನು.

೧೧–೧೨. ಭಗನ ಕಣ್ಣುಗಳನ್ನು ಅಪಹರಿಸಿದ ಮತ್ತು ಜಗದ್ರಕ್ಷಕನಾದ ಪರಮೇಶ್ವರನೂ ಸಹ, ಮೇರು ಪರ್ವತದ ಶಿಖರದಂತೆ ಬೃಹದಾಕಾರವಾದ ದೇಹವುಳ್ಳ, ಆ ದೈತ್ಯನನ್ನು ನೋಡಿ, ಅವನ ಅವಧ್ಯತ್ವ

ಅವಧ್ಯತ್ವಮಪಿ ಶ್ರುತ್ವಾ ತಥಾಽನ್ಯೈ ರ್ಭಗನೇತ್ರ ಹಾ ।
ಬ್ರಹ್ಮಣೋ ವಚನಂ ರಕ್ಷನ್ ರಕ್ಷಕೋ ಜಗತಾಂ ಪ್ರಭುಃ ॥೧೨॥
ಸಾಂಬಃ ಸನಂದೀ ಸಗಣಃ ಪ್ರೋವಾಚ ಪ್ರಹಸನ್ನಿವ ।
ಕಿಂ ಕೃತ್ಯ ಮಸುರೇಶಾನ ಯುದ್ಧೇನಾನೇನ ಸಾಂಪ್ರತಂ ॥೧೩॥
ಮದ್ಬಾಣೈ ರ್ಭಿನ್ನ ಸರ್ವಾಂಗೋ ಮರ್ತುಮಭ್ಯುದ್ಯತೇ ಮುದಾ ।
ಜಲಂಧರೋಽಪಿ ತದ್ವಾಕ್ಯಂ ಶ್ರುತ್ವಾ ಶ್ರೋತ್ರ ವಿದಾರಣಂ ॥೧೪॥
ಸುರೇಶ್ವರ ಮುವಾಚೇದಂ ಸುರೇತರ ಬಲೇಶ್ವರಃ ।
ವಾಕ್ಯೇನಾಲಂ ಮಹಾಬಾಹೋ ದೇವದೇವ ವೃಷಧ್ವಜ ॥೧೫॥

---

ವನ್ನೂ ಕೇಳಿ, ಬ್ರಹ್ಮನ ಮಾತನ್ನು ಕಾಪಾಡುವವನಾಗಿ, ಪಾರ್ವತಿಯಿಂದಲೂ, ನಂದಿಯಿಂದಲೂ, ಪ್ರಮಥಗಣಗಳಿಂದಲೂ ಕೂಡಿದವನಾಗಿ, ನಗುತ್ತಾ ಹೀಗೆಂದು ಹೇಳಿದನು. (ಬ್ರಹ್ಮನು ಹಿಂದೆ ಆ ರಾಕ್ಷಸನಿಗೆ ಯಾರಿಂದಲೂ ವಧೆಯು ಆಗದಂತೆ ವರವನ್ನು ಕೊಟ್ಟಿದ್ದನೆಂದು ತಿಳಿಯಬೇಕು.)

೧೩. ಎಲೈ ದೈತ್ಯೇಂದ್ರನೇ, ಈಗ ಯುದ್ಧದಿಂದ ಏನು ಪ್ರಯೋಜನವು? ನೀನು ನನ್ನ ಬಾಣದಿಂದ ಕತ್ತರಿಸಲ್ಪಟ್ಟ ಸಮಸ್ತ ಅವಯವವುಳ್ಳವನಾಗಿ ಸಂತೋಷದಿಂದ ಪ್ರಾಣತ್ಯಾಗ ಮಾಡಲು ಉದ್ಯುಕ್ತನಾಗಿರುವೆ!

೧೪. ರಾಕ್ಷಸರ ಸೇನೆಯ ಪತಿಯಾದ ಜಲಂಧರನೂ ಸಹ ಕರ್ಣಕಠೋರವಾದ ಆ ಮಾತುಗಳನ್ನು ಕೇಳಿ, ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.

೧೫. ಎಲೈ ವೃಷಧ್ವಜನಾದ ಪರಮೇಶ್ವರನೇ, ಮಾತುಗಳನ್ನು ಸಾಕುಮಾಡು. ಚಂದ್ರ ಕಿರಣಗಳಿಗೆ ಸಮಾನವಾದ (ಚಂದ್ರ ಕಿರಣಗಳಂತೆ ಶೀತಲವಾದ) ನಿನ್ನ ಶಸ್ತ್ರಗಳಿಂದ ರಣರಂಗಕ್ಕೆ ಬಂದಿರುವ ನೀನು ನನ್ನನ್ನು ಜಯಿಸುವವನಾಗು.

ಚಂದ್ರಾಂಶು ಸನ್ನಿಭೈಃ ಶಸ್ತ್ರೈಃ ಹರ ಯೋದ್ಧು ಮಿಹಾಗತಃ ।
ನಿಶಮ್ಯಾಸ್ಯ ವಚಃ ಶೂಲೀ ಪಾದಾಂಗುಷ್ಠೇನ ಲೀಲಯಾ ।
ಮಹಾಽಂಭಸಿ ಚಕಾರಾಶು ರಥಾಂಗಂ ರೌದ್ರಮಾಯುಧಂ ॥೧೬॥

ಕೃತ್ವಾಽರ್ಣವಾಂಭಸಿ ಸಿತಂ ಭಗವಾನ್ ರಥಾಂಗಂ ।
ಸ್ಮೃತ್ವಾ ಜಗತ್ತ್ರಯ ಮನೇನ ಹತಾಃ ಸುರಾಶ್ಚ ॥
ದಕ್ಷಾಂತಕಾಂಧಕ ಪುರತ್ರಯ ಯಜ್ಞ ಹರ್ತಾ ।
ಲೋಕತ್ರಯಾಂತಕ ಕರಃ ಪ್ರಹಸಂಸ್ತದಾಽಽಹ ॥೧೭॥

ಪಾದೇನ ನಿರ್ಮಿತಂ ದೈತ್ಯ ಜಲಂಧರ ಮಹಾರ್ಣವೇ ।
ಬಲವಾನ್ ಯದಿ ಚೋದ್ಧರ್ತುಂ ತಿಷ್ಠ ಯೋದ್ಧುಂ ನ ಚಾನ್ಯಥಾ ॥
ತಸ್ಯ ತದ್ವಚನಂ ಶ್ರುತ್ವಾ ಕ್ರೋಧೇನಾ ದೀಪ್ತ ಲೋಚನಃ ।
ಪ್ರದಹನ್ನಿವ ನೇತ್ರಾಭ್ಯಾಂ ಪ್ರಾಹಾಲೋಕ್ಯ ಜಗತ್ತ್ರಯಂ ॥೧೮॥

---

೧೬. ಶೂಲಧಾರಿಯಾದ ಶಿವನು ಜಲಂಧರನ ಮಾತನ್ನು ಕೇಳಿ, ತನ್ನ ಕಾಲಿನ ಅಂಗುಷ್ಠದಿಂದ ಲೀಲಾಜಾಲವಾಗಿ ಸಮುದ್ರದ ನೀರಿನಲ್ಲಿ ಭಯಂಕರವಾಗಿರುವ ಆಯುಧವಾದ ಚಕ್ರವನ್ನು ನಿರ್ಮಿಸಿದನು.

೧೭. ದಕ್ಷನ ಯಜ್ಞವನ್ನೂ, ಅಂಧಕಾಸುರನನ್ನೂ, ತ್ರಿಪುರರನ್ನೂ ಸಂಹರಿಸಿದವನೂ, ಪ್ರಳಯಕಾಲದಲ್ಲಿ ಲೋಕತ್ರಯ ಸಂಹಾರಕನೂ, ಆದ ಶಿವನು ಸಮುದ್ರ ಜಲದಲ್ಲಿ ಶುಭ್ರವಾದ ಆ ಚಕ್ರವನ್ನು ನಿರ್ಮಾಣ ಮಾಡಿ, ಆ ಚಕ್ರದಿಂದ ಲೋಕತ್ರಯವೂ ಮತ್ತು ದೇವತೆಗಳೂ, ಸಹ ನಾಶಮಾಡಲ್ಪಡಲಿ, (ಆ ಚಕ್ರದ ಶಕ್ತಿಯು ಈ ಪ್ರಕಾರವಾಗಿರಲಿ.) ಎಂದು ಸಂಕಲ್ಪಿಸಿ, ಜಲಂಧರನನ್ನು ಕುರಿತು ಹೀಗೆಂದು ಹೇಳಿದನು.

೧೮. ಎಲೈ ದೈತ್ಯನೇ, ಸಮುದ್ರದ ನೀರಿನಲ್ಲಿ ಕಾಲಿನಿಂದ ಈ ಚಕ್ರವನ್ನು ನಿರ್ಮಿಸಿರುವೆನು. ಇದನ್ನು ಮೇಲಕ್ಕೆತ್ತಲು ನೀನು ಶಕ್ತನಾದರೆ ನನ್ನೊಂದಿಗೆ ಯುದ್ಧವನ್ನು ಮಾಡು. ಇಲ್ಲದಿದ್ದರೆ ಎಂದಿಗೂ ಯುದ್ಧವನ್ನು ಮಾಡಬೇಡ.

೧೯. ಶಿವನ ಆ ಮಾತನ್ನು ಕೇಳಿ, ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ಜಲಂಧರನು, ತನ್ನ ಕಣ್ಣುಗಳಿಂದ ಮೂರುಲೋಕಗಳನ್ನೂ ಸುಡುತ್ತಿರುವನೋ ಎಂಬಂತೆ ಶಿವನನ್ನು ನೋಡಿ, ಮುಂದೆ ಹೇಳುವಂತೆ ಹೇಳಿದನು.

॥ ಜಲಂಧರ ಉವಾಚ ॥

ಗದಾ ಮುದ್ಧೃತ್ಯ ಹತ್ವಾ ಚ ನಂದಿನಂ ತ್ವಾ ಚ ಶಂಕರ ।
ಹತ್ವಾ ಲೋಕಾನ್ ಸುರೈಃ ಸಾರ್ಧಂ ಡುಂಡುಭಾನ್ ಗರುಡೋ ಯಥಾ ॥೨೦॥

ಹಂತಾಽಂ ಚರಾಚರಂ ಸರ್ವಂ ಸಮರ್ಥೋಽಹಂ ಸ ವಾಸವಂ ।
ಕೋ ಮಹೇಶ್ವರ ಮದ್ಬಾಣೈ ರಚ್ಛೇದ್ಯೋ ಭುವನತ್ರಯೇ ॥೨೧॥

ಬಾಲ ಭಾವೇ ಚ ಭಗವಾಂಸ್ತಪಸೈವ ವಿನಿರ್ಜಿತಃ ।
ಬ್ರಹ್ಮಾ ಬಲೀ ಯೌವನೇ ವೈ ಮುನಯಃ ಸುರಪುಂಗವೈಃ ॥೨೨॥

ದಗ್ಧಂ ಕ್ಷಣೇನ ಸಕಲಂ ತ್ರೈಲೋಕ್ಯಂ ಸ ಚರಾಚರಂ ।
ತಪಸಾ ಕಿಂ ತ್ವಯಾ ರುದ್ರ ನಿರ್ಜಿತೋ ಭಗವಾನಪಿ ॥೨೩॥

---

೨೦–೨೧. ಎಲೈ ಪರಮೇಶ್ವರನೇ, ಈ ಗದೆಯನ್ನು ಮೇಲಕ್ಕೆತ್ತಿ ನಿನ್ನನ್ನೂ ಮತ್ತು ನಂದಿಯನ್ನೂ ಸಂಹರಿಸಿ, ದೇವತೆಗಳೊಂದಿಗೆ ಸರ್ವ ಲೋಕಗಳನ್ನೂ, ಗರುಡನು ಸರ್ಪಗಳನ್ನು ಸಂಹರಿಸುವೋ ಪಾದಿಯಲ್ಲಿ, ಸಂಹರಿಸುವೆನು. ಎಲೈ ಪರಮೇಶ್ವರನೇ, ನಾನು ಚರಾಚರವಾದ ಸಮಸ್ತವನ್ನೂ ಇಂದ್ರನೊಂದಿಗೆ ನಾಶಮಾಡಲು ಸಮರ್ಥನಾಗಿರುವೆನು. ಈ ಮೂರುಲೋಕಗಳಲ್ಲಿ ನನ್ನ ಬಾಣಗಳಿಂದ ಅವಧ್ಯನಾದವನು ಯಾರು ತಾನೇ ಇರುವನು?

೨೨–೨೩. ಎಲೈ ಮಹೇಶ್ವರನೇ, ಬಾಲ್ಯದಲ್ಲಿಯೇ ತಪಸ್ಸಿನಿಂದ ಬ್ರಹ್ಮನನ್ನೂ, ವಿಷ್ಣುವನ್ನೂ, ಜಯಿಸಿರುವೆನು. ಯೌವನದಲ್ಲಿ ನಾನು ಬಲಿಷ್ಠನಾದ ಬ್ರಹ್ಮನನ್ನೂ ಜಯಿಸಿರುವೆನು. ನೀನು ತಪಸ್ಸಿನಿಂದಲಾದರೂ ವಿಷ್ಣುವನ್ನಾದರೂ ಜಯಿಸಿರುವೆಯೋ? ಇಂದ್ರನೂ, ಅಗ್ನಿಯೂ, ಯಮನೂ, ಕುಬೇರನೂ, ವಾಯುವೂ, ವರುಣನೂ, ಇವರೇ ಮೊದಲಾದವರು, ಸರ್ಪಗಳು ಗರುಡನ ಗಂಧವನ್ನು ಹೇಗೋ ಹಾಗೆ, ನನ್ನ ಪ್ರಭಾವವನ್ನು ಸಹಿಸಲಾರದವರಾದರು. ಸ್ವರ್ಗಲೋಕ

ಇಂದ್ರಾಗ್ನಿ ಯಮ ವಿತ್ತೇಶ ವಾಯು ವಾರೀಶ್ವರಾದಯಃ ।
ನ ಸೇಹಿರೇ ಯಥಾ ನಾಗಾಃ ಗಂಧಂ ಪಕ್ಷಿ ಪತೇರಿವ ॥೨೪॥

ನ ಲಬ್ಧ್ವಾ ದಿವಿ ಭೂಮೌ ಚ ಬಾಹವೋ ಮಮ ಶಂಕರ ।
ಸಮಸ್ತಾನ್ ಪರ್ವತಾನ್ ಪ್ರಾಪ್ಯ ಧರ್ಷಿತಾಶ್ಚ ಗಣೇಶ್ವರಾಃ ॥೨೫॥

ಗಿರೀಂದ್ರೋ ಮಂದರಃ ಶ್ರೀಮಾನ್ ನೀಲೋ ಮೇರುಃ ಸುಶೋಭನಃ
ಧರ್ಷಿತೋ ಬಾಹುದಂಡೇನ ಕಂಡೂನೋ ದಾರ್ಥಮಾಪತತ್॥೨೬॥

ಗಂಗಾ ನಿರುದ್ಧಾ ಬಾಹುಭ್ಯಾಂ ಲೀಲಾರ್ಥಂ ಹಿಮವದ್ಗಿತೌ ।
ನಾರೀಣಾಂ ಮಮ ಭೃತ್ಯೈಶ್ಚ ವಜ್ರೋ ಬದ್ಧೋ ದಿವೌಕಸಾಂ॥೨೭॥

ವಡವಾಯಾಃ ಮುಖಂ ಭಗ್ನಂ ಗೃಹೀತ್ವಾ ವೈ ಕರೇಣ ತು ।
ತತ್ಕ್ಷಣಾದೇವ ಸಕಲಂ ಚೈಕಾರ್ಣವ ಮಭೂದಿದಂ ॥೨೮॥

ಐರಾವತಾದಯೋ ನಾಗಾಃ ಕ್ಷಿಪ್ತಾಃ ಸಿಂಧೋಃ ಜಲೋಪರಿ ।
ಸ ರಥೋ ಭಗವಾನಿಂದ್ರಃ ಕ್ಷಿಪ್ತಶ್ಚ ಶತಯೋಜನಂ ॥೨೯॥

---

ದಲ್ಲಿಯೂ ಮತ್ತು ಭೂಲೋಕದಲ್ಲಿಯೂ, ಪ್ರತಿ ಕಕ್ಷಿಗಳನ್ನು ಕಾಣದೇ ನನ್ನ ತೋಳುಗಳು ಸಕಲ ಪರ್ವತಗಳನ್ನೂ ಚೂರುಚೂರನ್ನಾಗಿ ಮಾಡಿದವು. ಪರ್ವತಗಳಲ್ಲಿ ಪ್ರಧಾನವಾದ ಮಂದರಪರ್ವತವೂ, ನೀಲಪರ್ವತವೂ, ಮೇರುವೂ ನನ್ನ ತೋಳುಗಳ ತೀಟೆಯನ್ನು ಹೋಗಲಾಡಿಸಲು ಅಸಮರ್ಥಗಳಾಗಿ ಕೆಳಕ್ಕುರುಳಿದವು.

೨೭–೨೮. ವಿನೋದಕ್ಕೋಸ್ಕರ ಹಿಮವತ್ಪರ್ವತದಲ್ಲಿ ಗಂಗಾನದಿಯನ್ನು ನನ್ನ ತೋಳುಗಳಿಂದ ತಡೆದಿರುವೆನು, ನನ್ನ ಸ್ತ್ರೀಯರ ಸೇವಕರೇ ದೇವತೆಗಳ ವಜ್ರಾಯುಧವನ್ನೂ ಕೂಡ ಅಶಕ್ತವಾದದ್ದನಾಗಿ ಮಾಡಿರುವರು! ವಾಡವಾಗ್ನಿಯ ಮುಖವನ್ನು ಕೈಯಿಂದ ಹಿಡಿದುಕೊಂಡು ಮುರಿದೆನು. ಆಗ ಸಮುದ್ರವೆಲ್ಲವೂ ಒಂದಾಯಿತು. ಉಕ್ಕಿ ಏಕಾಕಾರವಾಯಿತು!

೨೯–೩೦. ಐರಾವತವೇ ಮೊದಲಾದ ಆನೆಗಳನ್ನು ಸಮುದ್ರದಲ್ಲಿ ಎಸೆದಿರುವೆನು. ರಥಸಹಿತನಾದ ಇಂದ್ರನನ್ನು ನೂರು ಯೋಜನಗಳ

ಗರುಡೋಽಪಿ ಮಯಾ ಬದ್ಧೋ ನಾಗಪಾಶೇನ ವಿಷ್ಣುನಾ ।
ಊರ್ವಶ್ಯಾದ್ಯಾ ಮಯಾ ನೀತಾಃ ನಾರ್ಯಃ ಕಾರಾಗೃಹಾಂತರಂ ॥೩೦॥
ಕಥಂ ಚಿಲ್ಲಬ್ಧವಾನ್ ಶಕ್ರಃ ಶಚೀಮೇಕಾಂ ಪ್ರಣಮ್ಯ ಮಾಂ ।
ಮಾಂ ನ ಜಾನಾಸಿ ದೈತ್ಯೇಂದ್ರಂ ಜಲಂಧರ ಮುಮಾಪತೇ ॥೩೧॥

॥ ಸೂತ ಉವಾಚ ॥

ಏವಮುಕ್ತೋ ಮಹಾದೇವಃ ಪ್ರಾಹರದ್ವೈ ರಥಂ ತದಾ ।
ತಸ್ಯ ನೇತ್ರಾಗ್ನಿ ಭಾಗೈಕ ಕಲಾರ್ಧಾರ್ಧೇನ ಚಾಕುಲಂ ॥೩೨॥
ದೈತ್ಯಾನಾ ಮತುಲ ಬಲೈ ರ್ಹಯೈಶ್ಚ ನಾಗೈಃ ।
ದೈತ್ಯೇಂದ್ರಾ ಸ್ತ್ರಿಪುರ ರಿಪೋರ್ನಿರೀಕ್ಷಣೇನ ॥

---

ದೂರದಲ್ಲಿ ಹಾರಿಸಿರುವೆನು. ಪರಾಕ್ರಮಿಯಾದ ನಾನು ನಾಗಪಾಶದಿಂದ ಗರುಡನನ್ನು ಸಹ ಕಟ್ಟಿ ಬಿಗಿದಿರುವೆನು. ಊರ್ವಶಿಯೇ ಮೊದಲಾದ ಅಪ್ಸರ ಸ್ತ್ರೀಯರನ್ನೂ ಬಂದೀಖಾನೆಯಲ್ಲಿ ಬಂಧಿಸಿರುವೆನು.

೩೧. ಇದಲ್ಲದೇ ಇಂದ್ರನೂ ಕೂಡ ನನಗೆ ತಲೆ ಬಾಗಿಸಿ ಪ್ರಾರ್ಥನೆ ಮಾಡಿ, ಶಚಿಯೊಬ್ಬಳನ್ನು ಮಾತ್ರ ತನ್ನವಳನ್ನಾಗಿ ಉಳಿಸಿಕೊಂಡಿರುವನು. ಎಲೈ ಪಾರ್ವತೀ ಪತಿಯೇ, ಇಂತಹ ಪರಾಕ್ರಮಿಯಾದ ನನ್ನನ್ನು ದೈತ್ಯರ ಪ್ರಭುವಾದ ಜಲಂಧರನೆಂದು ನೀನು ತಿಳಿದುಕೊಂಡಿಲ್ಲವೇ ?

೩೨. ಜಲಂಧರನು ಹೀಗೆಂದು ಹೇಳಲಾಗಿ, ಪರಮೇಶ್ವರನು ತನ್ನ ನೇತ್ರಾಗ್ನಿಯ ಒಂದು ಕಲೆಯ ನಾಲ್ಕನೆಯ ಒಂದು ಅಂಶದಿಂದ ಆ ಜಲಂಧರನ ರಥವನ್ನು ದಹಿಸಿದನು.

೩೩. ಕ್ಷಣಮಾತ್ರದಲ್ಲಿಯೇ ಆ ತ್ರಿಪುರ ಸಂಹಾರಕನಾದ ಈಶ್ವರನ ತೃತೀಯ ನೇತ್ರದ ನಿರೀಕ್ಷಣೆಯಿಂದ ಅನೇಕ ಸೇನೆಗಳಿಂದಲೂ, ಕುದುರೆಗಳಿಂದಲೂ ಮತ್ತು ಆನೆಗಳಿಂದಲೂ ಕೂಡಿರುವ ಆ ರಾಕ್ಷಸಾಧಿಪತಿ

ನಾಗಾದ್ಯೈಃ ಶಸ ಮನುಸಂವೃತಶ್ಚ ನಾಗ್ರೈಃ ।
ದೇವೇಶಂ ವಚನ ಮುವಾಚ ಚಾಲ್ಪಬುದ್ಧಿಃ ॥೩೩॥

ಕಿಂ ಕಾರ್ಯಂ ಯುಧಿ ಮನು ದೇವ ದೈತ್ಯ ಸಂಘೈಃ ।
ಹಂತುಂ ಯುತ್ಸಕಲ ವಿಧಂ ಕ್ಷಣಾ ತ್ಸಮರ್ಥಃ ॥
ಯತ್ತಸ್ಮಾದ್ಭಯ ಮಿಹ ನಾಸ್ತಿ ಯೋದ್ಧುಮೀಶ ।
ವಾಂಛೈಷಾ ವಿಪುಲತರಾ ನ ಸಂಶಯೋಽತ್ರ ॥೩೪॥

ತಸ್ಮಾತ್ತ್ವಂ ಮದನಾರಿ ದಕ್ಷ ಶತ್ರೋ ।
ಯಜ್ಞಾರೇ ತ್ರಿಪುರ ರಿಪೋ ಮನ್ಯೈವ ವೀರೈಃ ॥
ಭೂತೇಂದ್ರೈ ಹರಿವದನೇನ ದೇವಸಂಘೈಃ ।
ಯೋದ್ಧುಂ ತೇ ಬಲಮಿಹ ಚಾಸ್ತಿ ಚೇದ್ಧಿ ತಿಷ್ಠ ॥೩೫॥

---

ಗಳೆಲ್ಲರೂ, ದಹಿಸಲ್ಪಟ್ಟರು. ತರುವಾಯ ಆನೆಗಳಿಂದ ಯುಕ್ತನಾದ ಆ ಜಲಂಧರನು ಈಶ್ವರನನ್ನು ಕುರಿತು ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.

೩೪. ಎಲೈ ದೇವೇಶನಾದ ಶಿವನೇ, ನಾನು ಯುದ್ಧದಲ್ಲಿ ದೈತ್ಯರ ಸಹಾಯದಿಂದ ಏನನ್ನು ತಾನೇ ಮಾಡಿಯೇನು? (ಯುದ್ಧದಲ್ಲಿ ಮಿಕ್ಕ ರಾಕ್ಷಸರ ಸಹಾಯವಿಲ್ಲದೇ ನಾನೊಬ್ಬನೇ ಯುದ್ಧವನ್ನು ಮಾಡಲು ಸಮರ್ಥನಾಗಿದ್ದೇನೆ. ಎಂದು ಅರ್ಥವು). ಈ ಕ್ಷಣದಲ್ಲಿಯೇ ಈ ಸಮಸ್ತ ಬಲವನ್ನೂ ಸಂಹರಿಸಲು ಸಮರ್ಥನಾಗಿರುವೆನು. ಆದುದರಿಂದ ಯಾವ ರೀತಿಯ ಹೆದರಿಕೆಯೂ ನನಗಿಲ್ಲವು. ಅಲ್ಲದೆ ಯುದ್ಧವನ್ನು ಮಾಡುವುದರಲ್ಲಿಯೂ ಅತಿಶಯವಾದ ಅಪೇಕ್ಷೆಯು ನನಗಿರುವುದು. ಇದರಲ್ಲಿ ಯಾವ ಸಂದೇಹವೂ ನನಗಿಲ್ಲವು.

೩೫. ಆದ್ದರಿಂದ ಎಲೈ ಮನ್ಮಥಶತ್ರುವೂ, ದಕ್ಷನ ಶತ್ರುವೂ, ದಕ್ಷಯಜ್ಞ ವಿಧ್ವಂಸಕನೂ, ತ್ರಿಪುರಾಸುರರ ಶತ್ರುವೂ, ಆದ ಪರಮೇಶ್ವರನೇ, ವೀರರಾದ ನನ್ನ ಸೈನಿಕರೊಂದಿಗೆ ಗಣಾಧಿಪತಿಗಳಿಂದಲೂ, ನಂದಿಯಿಂದಲೂ, ದೇವತೆಗಳಿಂದಲೂ, ಕೂಡಿರುವ ನೀನು ಯುದ್ಧವನ್ನು ಮಾಡಲು ನೀನು ಶಕ್ತನಾಗಿದ್ದಲ್ಲಿ ಯುದ್ಧಕ್ಕೋಸ್ಕರ ಸಿದ್ಧನಾಗಿ ನಿಲ್ಲುವವನಾಗು.

ಇತ್ಯುಕ್ತ್ವಾಽಥ ಮಹಾದೇವಂ ಮಹಾದೇವಾರಿ ನಂದನಃ ।
ನ ಚ ಚಾಲ ನ ಸಸ್ಮಾರ ನಿಹತಾನ್ ಬಾಂಧವಾನ್ ಯುಧಿ ॥೩೬॥
ದುರ್ಮದೇನಾ ವಿನೀತಾತ್ಮಾ ದೋರ್ಭ್ಯಾಮಾಸ್ಫೋಟ್ಯ ದೋರ್ಬ
ಲಾತ್ ।
ಸುದರ್ಶನಾಖ್ಯಂ ಯಚ್ಚಕ್ರಂ ತೇನ ಹಂತುಂ ಸಮುದ್ಯತಃ ॥೩೭॥
ದುರ್ಧರೇಣ ರಥಾಂಗೇನ ಕೃಚ್ಛ್ರೇಣಾಪಿ ದ್ವಿಜೋತ್ತಮಾಃ ।
ಸ್ಥಾಪಯಾಮಾಸ ವೈ ಸ್ಕಂಧೇ ದ್ವಿಧಾ ಭೂತಸ್ಯ ತೇನ ವೈ ॥೩೮॥
ಕುಲಿಶೇನ ಯಥಾ ಚ್ಛಿನ್ನೋ ದ್ವಿಧಾ ಗಿರಿವರೋ ದ್ವಿಜಾಃ ।
ಪಪಾತ ದೈತ್ಯೋ ಬಲವಾನ್ ಅಂಜನಾದ್ರಿರಿವಾಪರಃ ॥೩೯॥

---

೩೬. ರಾಕ್ಷಸನಾದ ಜಲಂಧರನು ಈಶ್ವರನನ್ನು ಕುರಿತು ಹೀಗೆಂದು ಹೇಳಿ ಯುದ್ಧ ಭೂಮಿಯಿಂದ ಚಲಿಸಲೂ ಇಲ್ಲ. ಯುದ್ಧದಲ್ಲಿ ಹತರಾದ ತನ್ನ ಬಂಧುಗಳನ್ನು ಸ್ಮರಿಸಲೂ ಇಲ್ಲ.

೩೭. ಕೊಬ್ಬಿನಿಂದ ಅವಿಧೇಯನಾದ ಆ ರಾಕ್ಷಸನು ತನ್ನ ಬಾಹುಗಳನ್ನು ತಟ್ಟುತ್ತಾ ಶಬ್ದಮಾಡಿ, ಬಾಹು ಬಲದಿಂದ ಸುದರ್ಶನ ವೆಂಬ ಹೆಸರುಳ್ಳ ಪರಮೇಶ್ವರನ ಚಕ್ರವನ್ನು ಗ್ರಹಿಸಲು ಉದ್ಯುಕ್ತನಾದನು.

೩೮–೩೯. ಎಲೈ ಬ್ರಾಹ್ಮಣೋತ್ತಮರೇ, ಚಕ್ರವನ್ನು ಮೇಲಕ್ಕೆತ್ತಲು ಉದ್ಯುಕ್ತನಾದ ಆ ಜಲಂಧರನು ಮೇಲಕ್ಕೆತ್ತುವುದಕ್ಕೆ ಕಷ್ಟವಾಗಿದ್ದರೂ, ಅತಿ ಪ್ರಯಾಸದಿಂದ ಆ ಚಕ್ರವನ್ನು ಮೇಲಕ್ಕೆತ್ತಿ ತನ್ನ ಹೆಗಲಿನ ಮೇಲೆ ಇರಿಸಿಕೊಂಡನು. ತತ್‌ಕ್ಷಣವೇ ಅವನು ಆ ಚಕ್ರದಿಂದ ಇಬ್ಭಾಗವಾಗಿ ಸೀಳಲ್ಪಟ್ಟು, ಇಂದ್ರನ ವಜ್ರಾಯುಧದಿಂದ ಸೀಳಲ್ಪಟ್ಟ ಪರ್ವತದೋಪಾದಿಯಲ್ಲಿ, ಇನ್ನೊಂದು ಅಂಜನ ಪರ್ವತವೋ ಎಂಬಂತೆ ಕೆಳಕ್ಕೆ ಬಿದ್ದನು.

ತಸ್ಯ ರಕ್ತೇನ ರೌದ್ರೇಣ ಸಂಪೂರ್ಣ ಮಭವತ್ಕ್ಷಣಾತ್ ।
ತದ್ರಕ್ತ ಮಖಿಲಂ ರುದ್ರ ನಿಯೋಗಾನ್ಮಾಂಸ ಮೇವ ಚ ॥೪೦॥
ಮಹಾ ರೌರವ ಮಾಸಾದ್ಯ ರಕ್ತಕುಂಡ ಮಭೂದಹೋ ।
ಜಲಂಧರಂ ಹತಂ ದೃಷ್ಟ್ವಾ ದೇವಗಂಧರ್ವಪಾರ್ಷದಾಃ ॥೪೧॥
ಸಿಂಹನಾದಂ ಮಹತ್ಕೃತ್ವಾ ಸಾಧು ದೇವೇತಿ ಚಾ ಬ್ರುವನ್ ।
ಯಃ ಪಠೇ ಚ್ಛೃಣುಯಾದ್ವಾಽಪಿ ಜಲಂಧರ ವಿಮರ್ದನಂ ॥೪೨॥
ಶ್ರಾವಯೇದ್ವಾ ಯಥಾನ್ಯಾಯ್ಯಂ ಗಾಣಪತ್ಯಮ ವಾಪ್ನುಯಾತ್ ॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಜಲಂಧರವಧೋ ನಾಮ ಸಪ್ತನವತಿತಮೋಽಧ್ಯಾಯಃ

---

೪೦. ಆ ಜಲಂಧರನ ಭಯಂಕರವಾದ ರಕ್ತದಿಂದ ನೆಲವು ಸ್ವಲ್ಪ ಹೊತ್ತಿನೊಳಗೆ ತುಂಬಿಹೋಯಿತು. ಅವನ ಸಮಸ್ತ ರಕ್ತವೂ, ಮಾಂಸವೂ, ಈಶ್ವರನ ಆಜ್ಞೆಯಿಂದ ಮಹಾರೌರವವೆಂಬ ನರಕದಲ್ಲಿ ರಕ್ತಕುಂಡವಾಗಿ ಪರಿಣಮಿಸಿತು!

೪೧. ಶಿವನಿಂದ ಸಂಹರಿಸಲ್ಪಟ್ಟ ಜಲಂಧರನ ಕಳೇಬರವನ್ನು ನೋಡಿ, ದೇವತೆಗಳೂ, ಮತ್ತು ಗಂಧರ್ವರೂ ಸಿಂಹನಾದವನ್ನು ಮಾಡಿ, ರುದ್ರನನ್ನು ಬಹಳವಾಗಿ ಪ್ರಶಂಸಿಸಿದರು.

೪೨-೪೩. ಯಾವನು ಜಲಂಧರನ ವಧೆಯ ಈ ಕಥೆಯನ್ನು ಪಠಿಸುತ್ತಾನೆಯೋ, ಮತ್ತು ಯಾವನು ಕೇಳುವನೋ ಅವನು ಪ್ರಮಥ ಗಣಗಳ ಪ್ರಭುತ್ವವನ್ನು ಹೊಂದುತ್ತಾನೆ.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ "ಜಲಂಧರನವಧೆ" ಎಂಬ ತೊಂಬತ್ತೇಳನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे पूर्वभागे
ಅಷ್ಟನವತಿತಮೋऽಧ್ಯಾಯಃ

॥ ಋಷಯ ಊಚುಃ ॥

**ಕಥಂ ದೇವೇನ ವೈ ಸೂತ ದೇವದೇವಾತ್ ಮಹೇಶ್ವರಾತ್ ।**
**ಸುದರ್ಶನಾಖ್ಯಂ ವೈ ಲಬ್ಧಂ ವಕ್ತು ಮರ್ಹಸಿ ವಿಷ್ಣುನಾ ॥ ೧ ॥**

**॥ ಸೂತ ಉವಾಚ ॥**

**ದೇವಾನಾಮಸುರೇಂದ್ರಾಣಾ ಮಭವಚ್ಚ ಸುದಾರುಣಃ ।**
**ಸರ್ವೇಷಾಮೇವ ದೇವಾನಾಂ ವಿನಾಶ ಕರಣೋ ಮಹಾನ್ ॥ ೨ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತೆಂಟನೆಯ ಅಧ್ಯಾಯವು.

ತೊಂಬತ್ತೇಳನೆಯ ಅಧ್ಯಾಯದಲ್ಲಿ ಸೂತ ಮಹರ್ಷಿಯು ಋಷಿಗಳನ್ನು ಕುರಿತು, ವಿಷ್ಣುವು ಜಲಂಧರನೆಂಬ ರಾಕ್ಷಸನನ್ನು ತನ್ನ ಸುದರ್ಶನವೆಂಬ ಚಕ್ರದಿಂದ ಸಂಹರಿಸಿದ ಬಗೆಯನ್ನು ವಿಸ್ತಾರವಾಗಿ ಹೇಳಲು, ಪುನಃ ಋಷಿಗಳು ಆ ಸೂತಮಹರ್ಷಿಯನ್ನು ಕುರಿತು ಹೀಗೆಂದು ಕೇಳಿದರು.

೧. ಋಷಿಗಳು ಹೇಳಿದರು; ಓ ಸೂತಮಹರ್ಷಿಯೇ, ಸುದರ್ಶನವೆಂದು ಹೆಸರುಳ್ಳ ಚಕ್ರವು ಈಶ್ವರನ ದೆಸೆಯಿಂದ ವಿಷ್ಣುವಿಗೆ ಪ್ರಾಪ್ತವಾದ ಬಗೆಯನ್ನು ನಮಗೆ ಹೇಳುವವನಾಗು.

೨. ಋಷಿಗಳು ಈ ರೀತಿ ಕೇಳಿಕೊಳ್ಳಲು ಸೂತಮಹರ್ಷಿಯು ಹೀಗೆಂದು ಹೇಳಿದನು. ಎಲೈ ಋಷಿಗಳೇ, ಒಂದಾನೊಂದು ಕಾಲದಲ್ಲಿ ದೇವತೆಗಳಿಗೂ, ರಾಕ್ಷಸರಿಗೂ ಭಯಂಕರವಾದ ಯುದ್ಧವು ನಡೆಯಿತು. ಈ ಯುದ್ಧವು ಸಮಸ್ತ ದೇವತೆಗಳ ನಾಶಕ್ಕೆ ಕಾರಣವಾಗುವಂತೆ ತುಂಬ ಭಯಂಕರವಾಗಿದ್ದಿತು.

ತೇ ದೇವಾಃ ಶಕ್ತಿಮುಸಲೈಃ ಸಾಯಕೈ ರ್ನತ ಪರ್ವಭಿಃ ।
ಪ್ರಭಿದ್ಯಮಾನಾಃ ಕುಂತೈಶ್ಚ ದುದ್ರುವುಃ ಭಯ ವಿಹ್ವಲಾಃ ॥ ೩ ॥
ಪರಾಜಿತಾ ಸ್ತದಾ ದೇವಾಃ ದೇವದೇವೇಶ್ವರಂ ಹರಿಂ ।
ಪ್ರಣೇಮುಸ್ತಂ ಸುರೇಶಾನಂ ಶೋಕ ಸಂವಿಗ್ನ ಮಾನಸಾಃ ॥ ೪ ॥
ತಾನ್ ಸಮೀಕ್ಷ್ಯಾಥ ಭಗವಾನ್ ದೇವದೇವೇಶ್ವರೋ ಹರಿಃ ।
ಪ್ರಣಿಪತ್ಯ ಸ್ಥಿತಾನ್ ದೇವಾನ್ ಇದಂ ವಚನ ಮಬ್ರವೀತ್ ॥ ೫ ॥
ವತ್ಸಾಃ ಕಿಮಿತಿ ವೈ ದೇವಾಃ ಚ್ಯುತಾಲಂಕಾರ ವಿಕ್ರಮಾಃ ।
ಸಮಾಗತಾಃ ಸ ಸಂತಾಪಾ ವಕ್ತು ಮರ್ಹಥ ಸುವ್ರತಾಃ ॥ ೬ ॥

---

೩. ರಾಕ್ಷಸರು ಶಕ್ತಿಯಿಂದಲೂ, ಮುಸಲದಿಂದಲೂ, ಬಾಣಗಳಿಂದಲೂ ದೇವತೆಗಳನ್ನು ಹೊಡೆಯಲು ಆ ದೇವತೆಗಳು ಭಯಚಕಿತರಾಗಿ ಸಮರ ಭೂಮಿಯಿಂದ ಓಡಿಹೋದರು.

೪. ಈ ರೀತಿಯಲ್ಲಿ ಪರಾಜಿತರಾದ ದೇವತೆಗಳು, ದೇವತೆಗಳ ಮುಖಂಡರಿಗೂ ಒಡೆಯನಾದ ವಿಷ್ಣುವಿನ ಸನ್ನಿಧಿಯನ್ನು ಪಡೆದು, ದುಃಖದಿಂದ ಗಾಬರಿಗೊಂಡ ಮನಸ್ಸುಳ್ಳವರಾಗಿ ನಮಸ್ಕರಿಸಿದರು.

೫. ಹೀಗೆ ನಮಸ್ಕರಿಸಿ ಮುಂದೆ ನಿಂತಿರುವ ಆ ದೇವತೆಗಳನ್ನು ನೋಡಿ ದೇವ ಪ್ರಮುಖರಿಗೂ ಒಡೆಯನಾದ ಆ ವಿಷ್ಣುವು ಹೀಗೆಂದು ಹೇಳಿದನು.

೬. ಎಲೈ ಚಿರಾಯುಗಳಾದ ದೇವತೆಗಳೇ, ನೀವು ಶಕ್ತಿಗುಂದಿದವರಾಗಿಯೂ, ಮತ್ತು ನಿರಾಭರಣರಾಗಿಯೂ, ದುಃಖವುಳ್ಳವರಾಗಿಯೂ, ನನ್ನ ಸಮೀಪವನ್ನು ಯಾವ ಕಾರ್ಯ ಸಾಧನೆಗೋಸ್ಕರ ಪಡೆದಿದ್ದೀರಿ? ಅದನ್ನು ಹೇಳಿರಿ.

ತಸ್ಯ ತದ್ವಚನಂ ಶ್ರುತ್ವಾ ತಥಾ ಭೂತಾಃ ಸುರೋತ್ತಮಾಃ ।
ಪ್ರಣಮ್ಯಾ ಹು ರ್ಯಥಾ ವೃತ್ತಂ ದೇವದೇವಾಯ ವಿಷ್ಣವೇ ॥ ೭ ॥

ಭಗವನ್ ದೇವದೇವೇಶ ವಿಷ್ಣೋ ಜಿಷ್ಣೋ ಜನಾರ್ದನ ।
ದಾನವೈಃ ಪೀಡಿತಾಃ ಸರ್ವೇ ವಯಂ ಶರಣ ಮಾಗತಾಃ ॥ ೮ ॥

ತ್ವಮೇವ ದೇವದೇವೇಶ ಗತಿರ್ನಃ ಪುರುಷೋತ್ತಮ ।
ತ್ವಮೇವ ಪರಮಾತ್ಮಾ ಹಿ ತ್ವಂ ಪಿತಾ ಜಗತಾ ಮಪಿ ॥ ೯ ॥

ತ್ವಮೇವ ಭರ್ತ್ತಾ ಹರ್ತ್ತಾ ಚ ಭೋಕ್ತಾ ಧಾತಾ ಜನಾರ್ದನ ।
ಹಂತುಮರ್ಹಸಿ ತಸ್ಮಾತ್ ತ್ವಂ ದಾನವಾನ್ ದಾನವಾರ್ದನ॥ ೧೦ ॥

ದೈತ್ಯಾಶ್ಚ ವೈಷ್ಣವೈಃ ಬ್ರಾಹ್ಮೈಃ ರೌದ್ರೈ ರ್ಯಾಮ್ಯೈಃ ಸು ದಾರುಣೈಃ ।
ಕೌಬೇರೈ ಶ್ಚೈವ ಸೌಮ್ಯೈಶ್ಚ ನೈರ್ ಋತ್ಯೈ ರ್ವಾರುಣೈರ್ದೃಢೈಃ ॥

---

೭. ಹೀಗೆಂದ ಆ ವಿಷ್ಣುವಿನ ಮಾತನ್ನು ಕೇಳಿ, ಹಾಗೆ ದುಃಖಿತ ರಾಗಿದ್ದ ದೇವತೆಗಳು ಅವನನ್ನು ನಮಸ್ಕರಿಸಿ, ನಡೆದಿದ್ದ ಸಂಗತಿಯೆಲ್ಲ ವನ್ನೂ ದೇವತೆಗಳಿಗೆಲ್ಲರಿಗೂ ಒಡೆಯನಾದ ಆ ವಿಷ್ಣುವಿಗೆ ಹೀಗೆಂದು ಹೇಳಿದರು.

೮. ಓ ದೇವತೆಗಳಿಗೂ ಮುಖಂಡನೂ, ಜಯಶಾಲಿಯೂ ಆದ ವಿಷ್ಣುವೇ, ರಾಕ್ಷಸರಿಂದ ಕಷ್ಟಗಳಿಗೆ ಗುರಿಯಾಗಿರುವ ನಾವುಗಳು ನಿನ್ನನ್ನು ಶರಣು ಹೊಕ್ಕಿರುತ್ತೇವೆ.

೯-೧೦. ಓ ದೇವೇಶನೇ, ನೀನೇ ನಮಗೆ ಗತಿಯು. ಪುರುಷ ಶ್ರೇಷ್ಠನಾದ ನೀನು ಪರಮಾತ್ಮ ಸ್ವರೂಪನೂ, ಸಮಸ್ತ ಲೋಕಗಳಿಗೂ ಜನಕನೂ ಆಗಿರುವುದರಿಂದ ಎಲ್ಲವನ್ನೂ ನೀನೇ ಕಾಪಾಡತಕ್ಕವನೂ, ಅನುಗ್ರಹಮಾಡತಕ್ಕವನೂ ಆಗಿರುವೆ. ಮತ್ತು ನೀನೇ ಎಲ್ಲರನ್ನೂ ನಿಗ್ರಹಮಾಡತಕ್ಕವನೂ, ಆಗಿರುತ್ತೀಯೆ. ಅಲ್ಲದೇ ಎಲ್ಲರ ಕರ್ಮ ಫಲ ವನ್ನು ಪಡೆಯುವವನೂ ಕೊಡುವವನೂ ಆಗಿರುತ್ತೀಯೆ. ಆದ ಕಾರಣ ದಿಂದ ಆ ದುಷ್ಟರಾದ ದಾನವರನ್ನು ಸಂಹರಿಸಲು, ರಾಕ್ಷಸ ಸಂಹಾರಕ ನಾದ ನೀನೇ ಶಕ್ತನಾಗಿರುವೆ.

೧೧-೧೩. ನೀನು ದಯಪಾಲಿಸಿರುವ ವರದ ಮಹಿಮೆಯಿಂದ ವಿಷ್ಣು, ಬ್ರಹ್ಮ, ಯಮ, ಕುಬೇರ, ಚಂದ್ರ, ನಿರ್‌ಋತಿ, ವರುಣ,

ವಾಯು ವ್ಯೈಶ್ಚ ತಥಾಃಗ್ನೇಯ್ಯೈಃ ಐಶಾನ್ಯೈ ರ್ವಾರ್ಷಿಕೈಃ ಶುಭೈಃ ।
ಸೌ ರೈಃ ರೌದ್ರೈಸ್ತಥಾ ಭೀಮ್ಯೈಃ ಕಂಪನ್ಯೈ ರ್ಜ್ರಂಭಣ್ಯೈ ರ್ದೃಢೈಃ॥೧೨॥
ಅವಧ್ಯಾ ವರ ಲಾಭಾತ್ತೇ ಸರ್ವೇ ನಾರಿಜ ಲೋಚನ ।
ಸೂರ್ಯ ಮಂಡಲ ಸಂಭೂತಂ ತ್ವದೀಯಂ ಚಕ್ರ ಮುದ್ಯತಂ ॥೧೩॥
ಕುಂಠಿತಂ ಹಿ ದಧೀಚೇನ ಚ್ಯಾವನೇನ ಜಗದ್ಗುರೋ ।
ದಂಡಂ ಶಾರ್ಙಂ ತವಾಸ್ತ್ರಂ ಚ ಲಬ್ಧಂ ದೈತ್ಯೇ ಪ್ರಸಾದತಃ ॥೧೪॥
ಪುರಾ ಜಲಂಧರಂ ಹಂತುಂ ನಿರ್ಮಿತಂ ತ್ರಿಪುರಾರಿಣಾ ।
ರಥಾಂಗಂ ಸುಜಿತಂ ಘೋರಂ ತೇನ ತಂ ಹಂತು ಮರ್ಹಸಿ ॥೧೫॥
ತಸ್ಮಾತ್ತೇನ ನಿಹಂತವ್ಯಾಃ ನಾನ್ಯೈಃ ಶಸ್ತ್ರ ಶತೈರಪಿ ।
ತತೋ ನಿಶಮ್ಯ ತೇಷಾಂ ವೈ ವಚನಂ ವಾರಿಜೇಕ್ಷಣಃ ॥೧೬॥

---

ವಾಯು, ಅಗ್ನಿ, ಈಶಾನ, ಸೂರ್ಯ, ರುದ್ರ, ಇವರುಗಳ ಅಸ್ತ್ರ ಶಸ್ತ್ರಾದಿಗಳಿಗೂ, ಮತ್ತು ಬೆದರಿಕೆಗಳಿಗೂ ದೈತ್ಯರೆಲ್ಲರೂ, ಅವಧ್ಯರಾಗಿರುತ್ತಾರೆ.

೧೪. ಚ್ಯವನನ ಮಗನಾದ ದಧೀಚಿ ಮಹರ್ಷಿಯು, ಸೂರ್ಯ ಮಂಡಲದಲ್ಲಿ ಉತ್ಪನ್ನವಾದ ನಿನ್ನ ಚಕ್ರದ ಶಕ್ತಿಯನ್ನು ಕಡಿಮೆ ಮಾಡಿದನು. ಇದಲ್ಲದೆ ದೈತ್ಯರು ನಿನ್ನ ಅನುಗ್ರಹದಿಂದ ಅಸ್ತ್ರವನ್ನೂ ಮತ್ತು ಶಾರ್ಙ ಎಂಬ ಧನುಸ್ಸನ್ನೂ ಪಡೆದಿರುವರು.

೧೫. ಹಿಂದೆ ಒಂದಾನೊಂದು ಕಾಲದಲ್ಲಿ ಜಲಂಧರನೆಂಬ ರಾಕ್ಷಸನನ್ನು ಸಂಹಾರಮಾಡುವುದಕ್ಕೋಸ್ಕರ ತ್ರಿಪುರಾರಿಯಾದ ಈಶ್ವರನಿಂದ ನಿರ್ಮಿಸಲ್ಪಟ್ಟ ಚಕ್ರದಿಂದ ನೀನು ಆ ರಾಕ್ಷಸನನ್ನು ಕೊಲ್ಲಲು ಸಮರ್ಥನಾದೆಯಲ್ಲವೇ? ಆದಕಾರಣದಿಂದ ಆ ಚಕ್ರದಿಂದಲೇ ನೀನು ಈ ರಾಕ್ಷಸನನ್ನೂ ಕೊಲ್ಲಲು ಶಕ್ತನಾಗಿರುವೆ. ಅದಲ್ಲದೇ ನೂರಾರು ಶಸ್ತ್ರಗಳಿಂದಲೂ ಆ ರಾಕ್ಷಸರು ಅವಧ್ಯರಾಗಿರುವರು.

೧೬. ಹೀಗೆಂದು ಪ್ರಾರ್ಥಿಸಿದ ಆ ದೇವತೆಗಳ ಮಾತನ್ನು ಕೇಳಿ, ಚಕ್ರಪಾಣಿಯಾದ ವಿಷ್ಣುವು ಬೃಹಸ್ಪತಿಯೇ ಪ್ರಧಾನವಾಗಿ ಉಳ್ಳ ಆ ದೇವತೆಗಳನ್ನು ಕುರಿತು ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.

ವಾಚಸ್ಪತಿ ಮುಖಾನಾಹ ಸ ಹರಿಃ ಚಕ್ರಭೃತ್ ಸ್ವಯಂ ।

॥ ಶ್ರೀ ವಿಷ್ಣುರುವಾಚ ॥

ಭೋ ಭೋ ದೇವಾಃ ಮಹಾದೇವಂ ಸರ್ವೈ ರ್ದೇವೈಃ ಸನಾತನೈಃ ॥

ಸಂಪ್ರಾಪ್ಯ ಸಾಂಪ್ರತಂ ಸರ್ವಂ ಕರಿಷ್ಯಾಮಿ ದಿವೌ ಕಸಾಂ ।
ದೇವಾ ಜಲಂಧರಂ ಹಂತುಂ ನಿರ್ಮಿತಂ ತ್ರಿಪುರಾರಿಣಾ ॥೧೮॥

ಲಬ್ಧ್ವಾ ರಥಾಂಗಂ ತೇನೈವ ನಿಹತ್ಯ ಚ ಮಹಾಸುರಾನ್ ।
ಸರ್ವಾನ್ ಧುಂಧು ಮುಖಾನ್ ದೈತ್ಯಾನ್ ಅಷ್ಟ ಷಷ್ಟಿಶತಾನ್ ಸುರಾನ್ ॥೧೯॥

ಸ ಬಾಂಧವಾನ್ ಕ್ಷಣಾದೇವ ಸರ್ವಾನ್ ಸಂಹಾರ ಯಾಮ್ಯಹಂ ।

॥ ಸೂತ ಉವಾಚ ॥

ಏವಮುಕ್ತ್ವಾ ಸುರಶ್ರೇಷ್ಠಾನ್ ಸುರಶ್ರೇಷ್ಠ ಮನುಸ್ಮರನ್ ॥೨೦॥

---

೧೭. ಎಲೈ ದೇವತೆಗಳಿರಾ, ಈಗಲೇ ಸಮಸ್ತ ಈ ದೇವತೆಗಳಿಂದೊಡಗೂಡಿದವನಾಗಿ ಮಹಾದೇವನಾದ ಪರಮೇಶ್ವರನ ಸನ್ನಿಧಿಯನ್ನು ಪಡೆದು ದೇವತೆಗಳಾದ ನಿಮ್ಮಗಳ ಕೋರಿಕೆಯನ್ನು ನೆರವೇರಿಸುತ್ತೇನೆ.

೧೮–೧೯. ಎಲೈ ದೇವತೆಗಳೇ, ಮತ್ತೊಮ್ಮೆ ಕೇಳುವವರಾಗಿರಿ. ಮೊದಲು ಜಲಂಧರನನ್ನು ಸಂಹರಿಸಲು ಈಶ್ವರನಿಂದ ಚಕ್ರವು ನಿರ್ಮಿತವಾಗಿದೆಯಷ್ಟೇ ? ಅವನಿಂದಲೇ ಆ ಚಕ್ರವನ್ನು ಪಡೆದು ಧುಂಧುವೇ ಪ್ರಮುಖನಾಗಿಉಳ್ಳ, ಆ ಅರವತ್ತೆಂಟುಸಾವಿರ ರಾಕ್ಷಸರನ್ನು ಸಂಹರಿಸಿ ನಿಮ್ಮ ತೊಂದರೆಗಳನ್ನು ಹೋಗಲಾಡಿಸುತ್ತೇನೆ.

೨೦–೨೪. ಸೂತನು ಹೇಳಿದನು :— ಹೀಗೆಂದು ಹೇಳಿದ ವಿಷ್ಣುವು ಈಶ್ವರನ ಲಿಂಗವನ್ನು ಹಿಮವತ್ಪರ್ವತದ ಮೇಲೆ ವಿಧಿವತ್ತಾಗಿ ಸ್ಥಾಪಿಸಿ ಈಶ್ವರನನ್ನು ಪೂಜಿಸಿ ಆರಾಧಿಸಿದನು. ಮೇರುಪರ್ವತಕ್ಕೆ ಸದೃಶವಾದ ಕಾಂತಿಯುಳ್ಳ ಮತ್ತು ದೇವತೆಗಳ ಶಿಲ್ಪಿಯಾದ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟ ಆ ಲಿಂಗವನ್ನು ತ್ವರೀತವೆಂದು ಸಂಜ್ಞೆಯುಳ್ಳ ರುದ್ರಮಂತ್ರದಿಂದಲೂ, ಮತ್ತು ರುದ್ರಸೂಕ್ತದಿಂದಲೂ, ಅಭಿಷೇಕಮಾಡಿ, ಯಥಾಕ್ರಮ

ಸುರಶ್ರೇಷ್ಠ ಸ್ತದಾ ಶ್ರೇಷ್ಠಂ ಪೂಜಯಾಮಾಸ ಶಂಕರಂ ।
ಲಿಂಗಂ ಸ್ಥಾಪ್ಯ ಯಥಾ ನ್ಯಾಯಂ ಹಿಮವಚ್ಛಿಖರೇ ಶುಭೇ ॥೨೧॥
ಮೇರುಪರ್ವತ ಸಂಕಾಶಂ ನಿರ್ಮಿತಂ ವಿಶ್ವಕರ್ಮಣಾ ।
ತ್ವರೀ ತಾರ್ಕ್ಷ್ಯೇನ ರುದ್ರೇಣ ರೌದ್ರೇಣ ಚ ಜನಾರ್ದನಃ ॥೨೨॥
ಸ್ನಾಪ್ಯ ಸಂಪೂಜ್ಯ ಗಂಧಾದ್ಯೈ ರ್ಜ್ವಾಲಾಕಾರಂ ಮನೋರಮಂ ।
ತುಷ್ಟಾವ ಚ ತದಾ ರುದ್ರಂ ಸಂಪೂಜ್ಯಾಗ್ನೌ ಪ್ರಣಮ್ಯ ಚ ॥೨೩॥
ದೇವಂ ನಾಮ್ನಾಂ ಸಹಸ್ರೇಣ ಭವಾದ್ಯೇನ ಯಥಾ ಕ್ರಮಂ ।
ಪೂಜಯಾಮಾಸ ಚ ಶಿವಂ ಪ್ರಣವಾದ್ಯಂ ನಮೋಽಂತಕಂ ॥೨೪॥
ದೇವಂ ನಾಮ್ನಾಂ ಸಹಸ್ರೇಣ ಭವಾದ್ಯೇನ ಮಹೇಶ್ವರಂ ।
ಪ್ರತಿನಾಮ ಸ ಪದ್ಮೇನ ಪೂಜಯಾಮಾಸ ಶಂಕರಂ ॥೨೫॥
ಅಗ್ನೌ ಚ ನಾಮಭಿ ರ್ದೇವಂ ಭವಾದ್ಯೈಃ ಸಮಿದಾದಿಭಿಃ ।
ಸ್ವಾಹಾಂತೈಃ ವಿಧಿವತ್ ಹುತ್ವಾ ಪ್ರತ್ಯೇಕ ಮಯುತಂ ಪ್ರಭುಂ ॥

---

ಓಂಕಾರದಿಂದ ಪ್ರಾರಂಭಿಸಿ ನಮಃ ಎಂಬ ಪದದಿಂದ ಮುಗಿಯು ವಂತೆ ಭವನೆಂಬ ನಾಮವೇ ಆದಿಯಾಗಿಉಳ್ಳ ಸಹಸ್ರನಾಮಗಳಿಂದ ಪೂಜಿಸಿದನು.

೨೫–೨೬. ವಿಷ್ಣುವು ಹೇಳಿದನು :– ಮಹಾದೇವನನ್ನು ಭವನೇ ಮೊದಲಾದ ಸಹಸ್ರನಾಮಗಳಿಂದ ಪ್ರತಿನಾಮಕ್ಕೂ ಒಂದೊಂದು ಪದ್ಮದಂತೆ ಪೂಜಿಸಿ ಭವನೆಂದು ಮೊದಲನೆಯ ನಾಮದಿಂದ ಪ್ರಾರಂಭಿಸಿ ಸಹಸ್ರನಾಮಗಳು ಆದನಂತರ ಸ್ವಾಹಾಕಾರವನ್ನು ಉಚ್ಚರಿಸಿ, ಸಮಿತ್ತು ಗಳಿಂದ ಅಗ್ನಿಯಲ್ಲಿ ಹೋಮಮಾಡಿದನು. ಮತ್ತು ಪುನಃ ಪುನಃ ಶಿವ ನನ್ನು ಮುಂದೆ ಹೇಳುವರೀತಿಯಲ್ಲಿ ಸಹಸ್ರನಾಮಗಳಿಂದ ಸ್ತೋತ್ರ ಮಾಡಿದನು.

ತುಷ್ಟಾವ ಚ ಪುನಃ ಶಂಭುಂ ಭವಾದ್ಯೈ ರ್ಭವ ಮೀಶ್ವರಂ ।
॥ ಶ್ರೀ ವಿಷ್ಣುರುವಾಚ ॥
ಭವಃ ಶಿವೋ ಹರೋ ರುದ್ರಃ ಪುರುಷಃ ಪದ್ಮಲೋಚನಃ ॥೨೭॥

---

೨೭-೨೮. ಇಲ್ಲಿ ಹೇಳುವ ಈಶ್ವರನ ಸಹಸ್ರನಾಮಗಳಲ್ಲಿ ಪ್ರತಿಯೊಂದು ನಾಮವೂ ಪ್ರಥಮಾಂತವಾಗಿಯೇ ಇದ್ದರೂ, ಪ್ರತಿಯೊಂದು ಶಬ್ದವನ್ನೂ ಚತುರ್ಥೀವಿ ಭಕ್ತ್ಯಂತವಾಗಿ ಮಾಡಿಕೊಂಡು ಆಯಾ ಹೆಸರುಗಳ ಮುಂದೆ ನಮಃ ಎಂಬ ಅವ್ಯಯುವನ್ನು ಸೇರಿಸಿಕೊಂಡು ಭವಾಯ ನಮಃ ಎಂದು ಈ ಪ್ರಕಾರವಾಗಿ ಉಚ್ಚರಿಸಿ, ಅರ್ಥಮಾಡಿ ಕೊಳ್ಳಬೇಕು. ಮತ್ತು ಇಲ್ಲಿ ವಿಷ್ಣುವಾಚಕಗಳಾದ ಶಬ್ದಗಳು ಅನೇಕ ವಿದ್ದರೂ, ಅವುಗಳನ್ನು ಸಂದರ್ಭಕ್ಕನುಗುಣವಾಗಿ ಈಶ್ವರನಪರವಾಗಿ ಅರ್ಥಮಾಡಿಕೊಳ್ಳಬೇಕು. ಕೆಲವು ಕಡೆಗಳಲ್ಲಿ ಈಶ್ವರನನ್ನು ವಿಷ್ಣುವಾಚಕಗಳಾದ ಶಬ್ದಗಳಿಂದ ವ್ಯವಹಾರಮಾಡುವುದುಂಟು. ವೇದದಲ್ಲಿಯೂ, ''ಯಸ್ಮಾತ್ಪರನ್ನಾ ಪರಮಸ್ತಿಕಿಂ ಚಿದ್ಯಸ್ಮಾನ್ನಾಣಿಯೋ ನಜ್ಯಾಯೋಽಸ್ತಿಕಶ್ಚಿತ್'' ವೃಕ್ಷ ಇವಸ್ತಬ್ಧೋದಿವಿ ತಿಷ್ಠತ್ಯೇ ಕಸ್ತೇನೇದಂ ವಿಶ್ವಂ ಪೂರ್ಣಂ ಪುರುಷೇಣ ಸರ್ವಂ ಎಂದು ಹೇಳಿರುತ್ತದೆ. ಮತ್ತು ಆದಿತ್ಯಪುರಾಣದಲ್ಲಿ ಸಹ ''ಏವಾತ್ಮಾಸಮಸ್ತಾನಾಂ ಜಂತೂನಾಂ ಮನುಜಾಧಿಪ'' ಚೈತನ್ಯರೂಪೋ ಭಗವಾನ್ ಮಹಾದೇವಃ ಸಹೋಮಯಾ ''ಏಕೋಽಪಿ ಬಹುಧಾ ಭಾತಿಲೀಲಯಾ ಕೇವಲಃ ಶಿವಃ ಬ್ರಹ್ಮವಿಷ್ಣ್ವಾದಿ ರೂಪೇಣ ದೇವದೇವೋ ಮಹೇಶ್ವರಃ'' ಎಂದು ಹೇಳಿರುವುದರಿಂದ ಈಶ್ವರನೂ ಮತ್ತು ವಿಷ್ಣುವೂ ಇಬ್ಬರೂ ಏಕರೂಪವಾಗಿರುವರು. ಆ ಸಹಸ್ರನಾಮಗಳಲ್ಲಿ ಪ್ರತಿಯೊಂದನ್ನೂ ಅದರ ಅರ್ಥವನ್ನೂ ತಿಳಿಯಿಸಲಾಗುತ್ತವೆ.

**ಅರ್ಥಿತವ್ಯಃ ಸದಾಚಾರಃ ಸರ್ವ ಶಂಭು ರ್ಮಹೇಶ್ವರಃ ।**
**ಈಶ್ವರಃ ಸ್ಥಾಣು ರೀಶಾನಃ ಸಹಸ್ರಾಕ್ಷಃ ಸಹಸ್ರಪಾತ್ ॥೨೮॥**

---

ಭವಃ ಎಂದರೆ, ಜಗತ್ತಿನ ಸೃಷ್ಟಿಸ್ಥಿತಿ ಲಯಗಳಿಗೆ ಕಾರಣನು, ಶಿವಃ ಮಂಗಳಕರನಾದ ಸಚ್ಚಿದಾನಂದ ಸ್ವರೂಪಿಯು "ಶಿವಮದ್ವೈತಂ ತುರೀಯಂ ಮನ್ಯಂತೇ" ಎಂದು ವೇದದಲ್ಲಿ ಹೇಳಿರುತ್ತದೆ. ಹರಃ ರುದ್ರಃ ಇವೆರಡು ಶಬ್ದಗಳೂ ಸಮಾರ್ಥಗಳಾಗಿರುತ್ತದೆ. ಪ್ರಾಯಶಃ ಇಲ್ಲಿ ಶಿವನ ಸಹಸ್ರನಾಮಗಳಲ್ಲಿ ಪ್ರತಿ ಎರಡೆರಡು ಶಬ್ದಗಳೂ, ಪರಸ್ಪರ ವಿಶೇಷಣ ವಿಶೇಷ್ಯ ಭಾವಗಳನ್ನು ಹೊಂದಿರತಕ್ಕವುಗಳಾಗಿಯೂ, ಮತ್ತು ಸಮಾರ್ಥಗಳಾಗಿಯೂ, ಇರುವುದು. ಕಂಡು ಬಂದರೂ ವಿಶೇಷಾರ್ಥ ಗಳನ್ನೂ ವಿವರಿಸಲಾಗಿದೆ. ಹರಃ ಎಂದರೆ ಜಗತ್ಸಂಹಾರ ಮಾಡತಕ್ಕ ವನು ಎಂದು ಅರ್ಥವು. ರುದ್ರಃ ಎಂದರೆ ಜನ್ಮಜರಾಮರಣ ದುಃಖ ಗಳನ್ನು ಹೋಗಲಾಡಿಸತಕ್ಕವನು ಎಂದರ್ಥವು. ಪುರುಷಃ ವಿಷ್ಣು ಸ್ವರೂಪನು. "ಸಹಸ್ರಶೀರ್ಷಾಪುರುಷಃ" ಎಂದು ವೇದಗಳಲ್ಲಿ ಹೇಳಿರುತ್ತದೆ. ಪದ್ಮಲೋಚನಃ ಪದ್ಮವನ್ನು ಅರಳಿಸತಕ್ಕವನು, ಎಂದರೆ ಸೂರ್ಯನ ಸ್ವರೂಪನು ಎಂದರ್ಥವು. ಅರ್ಥಿತವ್ಯಃ ಸರ್ವಕಾರ್ಯ ಗಳ ಆರಂಭದಲ್ಲಿ ಪ್ರಾರ್ಥಿಸಲ್ಪಡತಕ್ಕವನು. ಎಂದರೆ ಗಜಾನನ ಸ್ವರೂಪ ನೆಂದರ್ಥವು. ಸದಾಚಾರಃ ಯಾವಾಗಲೂ ಅನುಲಕ್ಷ್ಯದಿಂದ ಸಂಚರಿ ಸುವ ಎಂದರೆ ಪ್ರಧಾನಪ್ರಕೃತಿ, ಅರ್ಧನಾರೀಶ್ವರನ ಸ್ವರೂಪನು. ಸರ್ವ ಶಂಭು ಮಹೇಶ್ವರಃ ಸಮಸ್ತರಿಗೂ ಕಲ್ಯಾಣವನ್ನುಂಟುಮಾಡುವ ಏಕಾದಶ ರುದ್ರರಿಗೂ ಸ್ವಾಮಿಯಾದವನು. ಈಶ್ವರಃ ಸಕಲ ಸಂಪತ್ತು ಗಳಿಂದಲೂ ಯುಕ್ತನಾದವನು. ಸ್ಥಾಣುಃ ಗಮನಾಗಮನ ಮುಂತಾದ ವಿಕಾರಗಳಿಲ್ಲದಿರುವವನು. "ವೃಕ್ಷ ಇವಸ್ತಬ್ಧಃ" ಎಂದು ವೇದದಲ್ಲಿ ಪ್ರಮಾಣ ವಿರುತ್ತದೆ. ಈಶಾನಃ ಸಮಸ್ತ ವಿದ್ಯೆಗಳಿಗೂ ಪ್ರಭುವಾದ ವನು "ಈಶಾನಃ ಸರ್ವ ವಿದ್ಯಾನಾಂ" ಎಂದು ವೇದದಲ್ಲಿ ಹೇಳಿರುತ್ತದೆ. ಸಹಸ್ರಾಕ್ಷಃ ಅನೇಕ ಕಣ್ಣುಗಳುಳ್ಳವನು. ಸಹಸ್ರಪಾತ್ ಅನೇಕ ಕಾಲುಗಳುಳ್ಳವನು. "ಸಹಸ್ರಾಕ್ಷಃ ಸಹಸ್ರಪಾತ್" ಎಂದು ವೇದವು ಪುರುಷ ಸೂಕ್ತದಲ್ಲಿ ಹೇಳಿರುತ್ತದೆ.

**ವರೀಯಾನ್ ವರದೋ ವಂದ್ಯಃ ಶಂಕರಃ ಪರಮೇಶ್ವರಃ ।**
**ಗಂಗಾಧರಃ ಶೂಲಧರಃ ಪರಾರ್ಥೈಕ ಪ್ರಯೋಜನಃ ॥೨೯॥**
**ಸರ್ವಜ್ಞಃ ಸರ್ವದೇವಾದಿ ಗಿರಿಧನ್ವಾ ಜಟಾಧರಃ ।**
**ಚಂದ್ರಾಪೀಡ ಶ್ಚಂದ್ರಮೌಳಿಃ ವಿದ್ವಾನ್ ವಿಶ್ವಾ ಮರೇಶ್ವರಃ ॥೩೦॥**

---

೨೯–೩೧. ವರೀಯಾನ್ ಮಹತ್ಪರಿಮಾಣ ಉಳ್ಳವನು. ವರದಃ ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡತಕ್ಕವನು. ವಂದ್ಯಃ ನಮಸ್ಕಾರಕ್ಕೆ ಅರ್ಹನು, ಪೂಜ್ಯನೆಂದು ಅರ್ಥವು. ಶಂಕರಃ ಕಲ್ಯಾಣವನ್ನುಂಟು ಮಾಡತಕ್ಕವನು. ಪರಮೇಶ್ವರಃ ವಿಷ್ಣುವಿಗೂ ಸ್ವಾಮಿಯಾದವನು ಗಂಗಾಧರಃ ಗಂಗೆಯನ್ನು ಜಟೆಯಲ್ಲಿ ಧರಿಸಿರತಕ್ಕವನು. ಶೂಲಧರಃ ಶೂಲವೆಂಬ ಆಯುಧವನ್ನು ಧರಿಸಿರತಕ್ಕವನು. ಪರಾರ್ಥೈಕ ಪ್ರಯೋಜನಃ ನಿಸ್ಸ್ವಾರ್ಥಭಾವದಿಂದ ಪರರಿಗೆ ಇಷ್ಟಾರ್ಥಗಳನ್ನು ಕೊಡತಕ್ಕವನು. ಸರ್ವಜ್ಞಃ ಸಮಸ್ತ ವಸ್ತುಗಳ ಸ್ವರೂಪವನ್ನೂ ತಿಳಿದು ಕೊಂಡಿರತಕ್ಕವನು. "ಯಃ ಸರ್ವಜ್ಞಃ ಸರ್ವವಿತ್" ಎಂದು ವೇದದಲ್ಲಿ ಹೇಳಿರುತ್ತದೆ. ಸರ್ವ ದೇವಾದಿಗಿರಿಧನ್ವಾ ವಿಷ್ಣು ಸ್ವರೂಪವಾದ ಮೇರು ಪರ್ವತವನ್ನೇ ಧನುಸ್ಸನ್ನಾಗಿ ಮಾಡಿಕೊಂಡಿರತಕ್ಕವನು. ಮೇರುಶ್ಶಿಖರಿಣಾಮಹಂ ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಜಟಾಧರಃ ಜಟೆಗಳನ್ನು ಧರಿಸಿರತಕ್ಕವನು. ಚಂದ್ರಾಪೀಡಃ ಚಂದ್ರನನ್ನೇ ಅಲಂಕಾರವನ್ನಾಗಿ ತಲೆಯಲ್ಲಿ ಧರಿಸಿರತಕ್ಕವನು. ಚಂದ್ರಮೌಲಿಃ ಚಂದ್ರನನ್ನೇ ಕಿರೀಟದಲ್ಲಿ ಧರಿಸಿಕೊಂಡಿರತಕ್ಕವನು. ವಿದ್ವಾನ್ ಸರ್ವಜ್ಞನು. ವಿಶ್ವಾಮರೇಶ್ವರಃ ಸಮಸ್ತ ದೇವತೆಗಳಿಗೂ ಒಡೆಯನಾಗಿರತಕ್ಕವನು. ವೇದಾಂತಸಾರ ಸಂದೋಹಃ ಉಪನಿಷದ್ವೇದ್ಯವಾದ ಮುಖ್ಯಾರ್ಥಗಳ ಒಟ್ಟಿನ ಸ್ವರೂಪವನ್ನು ತಿಳಿಸಿರುವವನು. ಕಪಾಲೀ ಆದಿ ಕೂರ್ಮದ ಚಿಪ್ಪವನ್ನು ಕೈಯಲ್ಲಿ ಧರಿಸಿರತಕ್ಕವನು. ನೀಲಲೋಹಿತಃ ರುದ್ರಸ್ವರೂಪನೆಂದರ್ಥವು. ಧ್ಯಾನಾಧಾರಃ ಧ್ಯಾನವೆಂದರೆ ವಿಷಯಾಂತರಗಳ ಕಡೆಗೆ ಮನಸ್ಸನ್ನು ಹೋಗ ಗೊಡದೇ ಒಂದೇ ವಿಷಯದಲ್ಲಿ ಮನಸ್ಸನ್ನಿಡುವಿಕೆ. ಯೋಗಿಗಳು ಬಾಹ್ಯ ವಿಷಯಗಳದೆಸೆಯಿಂದ ಮನಸ್ಸನ್ನು ಹಿಂತಿರುಗಿಸಿ ನಿರೋಧಮಾಡಿ, ಬ್ರಹ್ಮ ವಿಷಯದಲ್ಲಿಯೇ ಅದನ್ನು ನಿಲ್ಲಿಸುತ್ತಾರೆ. ಆ ಧ್ಯಾನಕ್ಕೆ ಈಶ್ವರನೇ ವಿಷಯನಾಗಿ

ವೇದಾಂತ ಸಾರ ಸಂದೋಹಃ ಕಪಾಲೀ ನೀಲಲೋಹಿತಃ ।
ಧ್ಯಾನಾಧಾರೋಽಪರಿಚ್ಛೇದ್ಯೋ ಗೌರೀಭರ್ತಾ ಗಣೇಶ್ವರಃ ॥೩೧॥
ಅಷ್ಟಮೂರ್ತಿಃ ವಿಶ್ವಮೂರ್ತಿಃ ತ್ರಿವರ್ಗಃ ಸ್ವರ್ಗ ಸಾಧನಃ ।
ಜ್ಞಾನಗಮ್ಯೋ ದೃಢಪ್ರಜ್ಞೋ ದೇವದೇವ ಸ್ತ್ರಿಲೋಚನಃ ॥೩೨॥
ವಾಮದೇವೋ ಮಹಾದೇವೋ ಪಾಂಡುಃ ಪರಿದೃಢೋಽದೃಢಃ ।
ವಿಶ್ವರೂಪೋ ವಿರೂಪಾಕ್ಷೋ ವಾಗೀಶಃ ಶುಚಿರಂತರಃ ॥೩೩॥
ಸರ್ವಪ್ರಣಯ ಸಂವಾದೀ ವೃಷಾಂಕೋ ವೃಷವಾಹನಃ ।
ಈಶಃ ಪಿನಾಕೀ ಖಟ್ವಾಂಗೀ ಚಿತ್ರವೇಷ ಶ್ಚಿರಂತನಃ ॥೩೪॥

---

ಆಧಾರನಾಗಿರುವನು. ಎಂದರ್ಥವು. ಅಪರಿಚ್ಛೇದ್ಯಃ ವ್ಯಾಪಕನು, ದೇಶಕಾಲಗಳಿಂದ ಅಳತೆಯು ಪರಿಚ್ಛೇದಃ ವಿಲ್ಲದೇ ಇರುವವನು. ಗೌರೀ ಭರ್ತಾ ಪಾರ್ವತೀಪತಿಯೂ, ಗಣೇಶ್ವರಃ ಪಂಚವಿಂಶತಿ ತತ್ವಗಣಗಳಿಗೆ ಈಶ್ವರನಾಗಿರುವವನು.

೩೨–೩೫. ಅಷ್ಟಮೂರ್ತಿಃ ಸೂರ್ಯಚಂದ್ರಾದಿಗಳ ಎಂಟುಶರೀರಗಳ ಸ್ವರೂಪನು. ವಿಶ್ವಮೂರ್ತಿಃ ಭಗವತ್ಸ್ವರೂಪನು. ತ್ರಿವರ್ಗಃ ಧರ್ಮ ಕಾಮಾರ್ಥರೂಪನು. ಸ್ವರ್ಗಸಾಧನಃ ಯಾಗದ ಫಲವಾದ ಧರ್ಮ ಸ್ವರೂಪನು. ಜ್ಞಾನಗಮ್ಯಃ ಜ್ಞಾನದಿಂದಲೇ ಪಡೆಯಬಹುದಾದ ಮೋಕ್ಷಸ್ವರೂಪನು. "ಜ್ಞಾನಾ ದೇವತು ಕೈವಲ್ಯಂ" ಎಂದು ವೇದವು ಹೇಳಿರುತ್ತದೆ. ದೃಢಪ್ರಜ್ಞಃ ಅಚಂಚಲವಾದ ಬುದ್ಧಿ ಯುಳ್ಳವನು. ದೇವದೇವಃ ಇಂದ್ರಾದಿ ದೇವತೆಗಳಿಗೆ ಸ್ವಾಮಿಯಾದ ವನು. ತ್ರಿಲೋಚನಃ ಮೂರು ಕಣ್ಣುಗಳುಳ್ಳವನು. ವಾಮದೇವಃ ಸುಂದರ ಪ್ರಕಾಶವಾಗಿ ವಾಮದೇವನೆಂಬ ಹೆಸರುಳ್ಳವನು. "ವಾಮ ದೇವಾಯನಮಃ" ಎಂದು ವೇದವು ಹೇಳಿರುತ್ತದೆ. ಮಹಾದೇವಃ ಪೂಜಾರ್ಹನು, ಪಾಂಡುಃ ಶುಭ್ರವರ್ಣವುಳ್ಳವನು. ಪರಿದೃಢಃ ಶಕ್ತಿ ವಂತನು, ಅದೃಢಃ ಅಃ ಎಂದರೆ ವಿಷ್ಣು ವೆಂದರ್ಥವು. ಅದೃಢಃ ವಿಷ್ಣುವಿ ಗಿಂತಲೂ ಶಕ್ತಿಯುಳ್ಳವನು. ವಿಶ್ವರೂಪಃ ಸಕಲ ಪದಾರ್ಥಸ್ವರೂಪನು. ವಿರೂಪಾಕ್ಷಃ ಸೋಮ ಸೂರ್ಯಾಗ್ನಿ ರೂಪವಾದ ತ್ರಿವಿಧನೇತ್ರವುಳ್ಳವನು.

**ತಮೋಹರೋ ಮಹಾಯೋಗೀ ಗೋಪ್ತಾ ಬ್ರಹ್ಮಾಂಗ ಹೃಜ್ಜಟೀ ।
ಕಾಲಕಾಲಃ ಕೃತ್ತಿವಾಸಾಃ ಸುಭಗಃ ಪ್ರಣವಾತ್ಮಕಃ ॥೩೫॥
ಉನ್ಮತ್ತ ವೇಷ ಶ್ಚ ಕ್ಷು ಕ್ಷ್ನು ಕ್ಷ್ಮ್ಯೀ ದುರ್ವಾಸಾಃ ಸ್ಮರಶಾಸನಃ ।
ದೃಢಾಯುಧಃ ಸ್ಕಂದಗುರುಃ ಪರಮೇಷ್ಠೀ ಪರಾಯಣಃ ॥೩೬॥**

---

ವಾಗೀಶಃ ಮಾತುಗಳಿಗೆ ಈಶ್ವರನಾಗಿ ಇರುವವನು. ಶುಚಿಃ ನಿರ್ಮಲನು. ಅಂತರಃ ಸಮಸ್ತ ಪದಾರ್ಥಗಳೊಳಗೂ ಎಲ್ಲಿಯಾಗಿರುವವನು. ಸರ್ವ ಪ್ರಣಯಸಂವಾದೀ ಸಕಲ ನೀತಿ ಶಾಸ್ತ್ರಗಳಿಗೆ ಕರ್ತೃವಾಗಿರುವವನು. ವೃಷಾಂಕಃ ನಂದಿಕೇಶ್ವರನೇ ಚಿಹ್ನೆಯಾಗುಳ್ಳವನು. ವೃಷವಾಹನಃ ನಂದಿಕೇಶ್ವರನೇ ವಾಹನವಾಗುಳ್ಳವನು. ಈಶಃ ಸಮಸ್ತರಿಗೂ, ಸ್ವಾಮಿ ಯಾಗಿರುವವನು. ಪಿನಾಕೀ ಪಿನಾಕವೆಂಬ ಧನುಸ್ಸನ್ನು ಧರಿಸಿರತಕ್ಕವನು. ಖಟ್ವಾಂಗೀ ಖಟ್ವಾಂಗವೆಂಬ ಆಯುಧವನ್ನು ಧರಿಸತಕ್ಕವನು. ಚಿತ್ರವೇಷಃ ಚಿತ್ರವಾದ ವೇಷವುಳ್ಳವನು. ಚಿರಂತನಃ ಆದ್ಯಂತವಿಲ್ಲದಿರುವವನು ತಮೋಹರಃ ಅಜ್ಞಾನವನ್ನು ನಾಶಮಾಡತಕ್ಕವನು. ಮಹಾಯೋಗೀ ಯೋಗಮಹಿಮೆಯುಳ್ಳವನು. ಗೋಪ್ತಾ ರಕ್ಷಕನು. ಬ್ರಹ್ಮಾಂಗಹೃತ್ ಬ್ರಹ್ಮನ ತಲೆಯನ್ನು ಕತ್ತರಿಸಿದವನು. ಜಟೀ ಜಟಾಧಾರಿಯೂ, ಕಾಲಕಾಲಃ ಮೃತ್ಯುಂಜಯನು. ಕೃತ್ತಿವಾಸಾಃ ನೃಸಿಂಹನ ಚರ್ಮವನ್ನೇ ಬಟ್ಟೆಯನ್ನಾಗಿ ( ಉಳ್ಳವನು. ) ಧರಿಸುವವನು. ಸುಭಗಃ ಷಡ್ಗುಣೈಶ್ವರ್ಯ ಸಂಪನ್ನನೂ, ಪ್ರಣವಾತ್ಮಕಃ ಓಂಕಾರಸ್ವರೂಪನು.

೩೬. ಉನ್ಮತ್ತವೇಷಃ ಎಂದರೆ ಉನ್ಮತ್ತನಂತೆ ವೇಷರಚನೆಯನ್ನು ಮಾಡಿ ಕೊಂಡಿರುವವನು. ಎಂದರೆ ಅವಧೂತ ದತ್ತಾತ್ರೇಯರ ವೇಷ ವನ್ನು ಧಾರಣಮಾಡಿಕೊಂಡವನೆಂದು ಅರ್ಥವು. ಚಕ್ಷುಷ್ಯಃ ಕಣ್ಣಿನಿಂದ ಉತ್ಪನ್ನನಾದವನು. ಎಂದರೆ ಹಿಂದೆ ಅತ್ರಿ ಮಹರ್ಷಿಯ ಕಣ್ಣಿನಿಂದ ಈಶ್ವರನು ಆವಿರ್ಭವಿಸಿದ್ದರಿಂದ ಇವನಿಗೆ ಆ ಹೆಸರು ಬಂದಿತು. ದುರ್ವಾ ಸಾಃ ದುರ್ವಾಸನೆಂಬ ಸಂಜ್ಞೆಯುಳ್ಳ ಋಷಿರೂಪವನ್ನು ಧರಿಸಿರುವನು. ಸ್ಮರಶಾಸನಃ ಮನ್ಮಥನನ್ನು ನಿಗ್ರಹಿಸಿರುವವನು. ದೃಢಾಯುಧಃ ಬಲ ವಾದ ಆಯುಧವುಳ್ಳವನು. ಸ್ಕಂದಗುರು: ದೇವತೆಗಳ ಸೇನಾ ಪತಿಯಾದ ಷಣ್ಮುಖನ ತಂದೆಯೂ ಉಪದೇಶಕನು. ಪರಮೇಷ್ಠೀ ಬ್ರಹ್ಮ ಸ್ವರೂಪನು. ಪರಾಯಣಃ ಸತ್ಯಲೋಕದಲ್ಲಿ ನೆಲೆಸಿರುವವನು.

**ಅನಾದಿ ಮಧ್ಯ ನಿಧನೋ ಗಿರೀಶೋ ಗಿರಿ ಬಾಂಧವಃ ।**
**ಕುಬೇರ ಬಂಧುಃ ಶ್ರೀಕಂಠಃ ಲೋಕವರ್ಣೋತ್ತ ಮೋತ್ತಮಃ ॥**
**ಸಾಮಾನ್ಯ ದೇವಃ ಕೋದಂಡೀ ನೀಲಕಂಠಃ ಪರಶ್ವಧೀ ।**
**ವಿಶಾಲಾಕ್ಷೋ ಮೃಗವ್ಯಾಧಃ ಸುರೇಶಃ ಸೂರ್ಯತಾಪನಃ ॥೩೮॥**

---

೩೭. ಅನಾದಿ ಮಧ್ಯನಿಧನಃ ಉತ್ಪತ್ತಿ ಸ್ಥಿತಿ, ಲಯ, ಈ ಮೂರು ಅವಸ್ಥೆಗಳಿಂದಲೂ ರಹಿತನಾಗಿರುವವನು. ಗಿರೀಶಃ ಹಿಮವತ್ಪರ್ವತದಲ್ಲಿ ವಾಸಮಾಡುವವನು. ಗಿರಿಬಾಂಧವಃ ಹಿಮವಂತನ ಬಂಧುವು. ಕುಬೇರಬಂಧುಃ ಕುಬೇರನ ಮಿತ್ರನು. ಶ್ರೀಕಂಠಃ ಲಕ್ಷ್ಮಿಯನ್ನು ಕಂಠ ದಲ್ಲಿ ಸಮೀಪದಲ್ಲಿ ಧಾರಣೆಮಾಡಿರುವವನು. ಲೋಕವರ್ಣೋತ್ತ ಮೋತ್ತಮಃ ಲೋಕವರ್ಣೋತ್ತಮಃ ಎಂದರೆ ಬ್ರಾಹ್ಮಣರೆಂದು ಅರ್ಥವು. ಅವರಿಗೆ ಉತ್ತಮ ನಾದವನು.

೩೮–೩೯. ಸಾಮಾನ್ಯದೇವಃ ದೇವತೆಗಳಲ್ಲಿ ಶ್ರೇಷ್ಠನಾದವನು. ಕೋದಂಡೀ ಕೋದಂಡವೆಂಬ ಧನುಸ್ಸನ್ನು ಹಿಡಿದಿರುವವನು. ನೀಲ ಕಂಠಃ ಕಪ್ಪಾದ ಕತ್ತುಳ್ಳವನು. "ನಮೋ ನೀಲಗ್ರೀವಾಯಚಃ" ಎಂದು ಶ್ರುತಿಯು ಹೇಳಿರುತ್ತದೆ. ಪರಶ್ವಧೀ ಪರಶು ವೆಂಬ ಆಯುಧ ವುಳ್ಳವನು. ವಿಶಾಲಾಕ್ಷಾಯ ವಿಸ್ತಾರವಾದ ಕಣ್ಣುಗಳುಳ್ಳವನು. ಮೃಗವ್ಯಾಧಃ ಮೃಗರೂಪಿಯಾದ ಬ್ರಹ್ಮನನ್ನು ವಧೆಮಾಡಿದವನು. ಸುರೇಶಃ ದೇವತೆಗಳೆಲ್ಲರಿಗೂ ಶ್ರೇಷ್ಠನಾದವನು. ಸೂರ್ಯಕಾಪನಃ ಸೂರ್ಯನತಾಪಕ್ಕಿಂತಲೂ ಹೆಚ್ಚಾದ ತಾಪ ಉಳ್ಳವನು. ಧರ್ಮಕರ್ಮಾ ಕ್ಷಮಃ"ನಕರ್ಮಣಾ" ಎಂಬ ಶ್ರುತಿಯಂತೆ ಧರ್ಮಕರ್ಮಗಳಿಂದ ಪಡೆಯ ಲಾಗದೇ ಇರುವವನು. ಕ್ಷೇತ್ರಂ ಬೀಜವನ್ನು ಬಿತ್ತುವ ಸ್ಥಳದ ಸ್ವರೂಪನು. ಭಗನೇತ್ರಭಿತ್ ಭಗನೆಂಬ ಸಂಜ್ಞೆಯುಳ್ಳ ಸೂರ್ಯನ ನೇತ್ರಗಳನ್ನು ದಕ್ಷ ನಯಜ್ಞ ಕಾಲದಲ್ಲಿ ಕಿತ್ತುಹಾಕಿರುವ, ಉಗ್ರಃ ಕುರೂಪಿಯೂ, ಪಶುಪತಿಃ

ಧರ್ಮ ಕರ್ಮಾ ಕ್ಷಮಃ ಕ್ಷೇತ್ರಂ ಭಗವಾನ್ ಭಗನೇತ್ರಭಿತ್ ।
ಉಗ್ರಃ ಪಶುಪತಿಃ ಸ್ತಾರ್ಕ್ಷ್ಯತ್ ಪ್ರಿಯಭಕ್ತಃ ಪ್ರಿಯಂ ವದಃ ॥
ದಾತಾಂ ದಯಾಕರೋ ದಕ್ಷಃ ಕಪರ್ದೀ ಕಾಮ ಶಾಸನಃ ।
ಸ್ಮಶಾನ ನಿಲಯಃ ಸೂಕ್ಷ್ಮಃ ಸ್ಮಶಾನ ಸ್ಥೋ ಮಹೇಶ್ವರಃ ॥೪೦॥
ಲೋಕ ಕರ್ತಾ ಭೂತಪತಿಃ ಮಹಾಕರ್ತಾ ಮಹೌಷಧೀ ।
ಉತ್ತರೋ ಗೋಪತಿ ರ್ಗೋಪ್ತಾ ಜ್ಞಾನಗಮ್ಯಃ ಪುರಾತನಃ ॥೪೧॥

---

ಬ್ರಹ್ಮನೇ ಮೊದಲಾದ ಜೀವರುಗಳ ರಕ್ಷಕನು. ತಾರ್ಕ್ಷ್ಯ ಪ್ರಿಯಭಕ್ತಃ ಗರುಡಪ್ರಿಯನಾದ ವಿಷ್ಣುವೂ ಭಕ್ತನಾಗಿ ಉಳ್ಳವನು. ಪ್ರಿಯಂವದಃ ಪ್ರಿಯವಾದ ಮಾತುಗಳನ್ನಾಡಕ್ಕವನು.

೪೦-೪೧. ದಾಂತೋದಯಾ ಕರಃ ಜಿತೇಂದ್ರಿಯರಿಗೆ ಆಶ್ರಯ ಸ್ಥಾನನು. ದಕ್ಷಃ ಸರ್ವಕಾರ್ಯಗಳಲ್ಲಿಯೂ, ಸಮರ್ಥನು. ಕಪರ್ದೀ ಜಟಾಧಾರಿಯೂ, ಕಾಮಶಾಸನಃ ಸ್ವತಂತ್ರನು. ಮನ್ಮಥನನ್ನು ಸಂಹರಿಸಿದವನು ಶ್ಮಶಾನನಿಲಯಃ ಸುಷುಮ್ನಾನಾಡಿಯೇ ಸಸ್ಥಾನವಾಗಿ ಉಳ್ಳವನು. ಸೂಕ್ಷ್ಮಃ ದುರ್ವಿಜ್ಞೇಯನು. ಶ್ಮಶಾನಸ್ಥಃ ಕಾಶಿಯಲ್ಲಿ ನೆಲಸಿರತಕ್ಕವನು. ಮಹೇಶ್ವರಃ ಪೂಜ್ಯನು ಲೋಕಕರ್ತಾ ಲೋಕವನ್ನು ಸೃಷ್ಟಿಸುವವನು. ಭೂತಪತಿಃ ಪ್ರಾಣಿಗಳಿಗೆ ಒಡೆಯನು. ಮಹಾಕರ್ತಾ ಸಮಸ್ತ ಲೋಕಗಳನ್ನೂ ಸೃಷ್ಟಿಸತಕ್ಕವನು. ಮಹೌಷಧೀ ತಾರಕಜ್ಞಾನ ಉಳ್ಳವನು. ಉತ್ತರಃ ಸಂಸಾರಬಂಧಗಳಿಂದ ಪಾರುಮಾಡತಕ್ಕವನು. ಗೋಪತಿಃ ಗೋ ಎಂದರೆ ಛಂದಸ್ಸೆಂದರ್ಥವು. ಗೋಪತಿಯೆಂದರೆ ಛಂದಸ್ಸುಗಳಿಗೆ ಒಡೆಯನು. ಗೋಪ್ತಾ ಸಕಲರ ರಕ್ಷಕನು. ಜ್ಞಾನಗಮ್ಯಃ ಬ್ರಹ್ಮಜ್ಞಾನದಿಂದ ಪಡೆಯಲು ಸಾಧ್ಯನಾಗಿರತಕ್ಕವನು. ಪುರಾತನಃ ಪೂರ್ವಕಾಲದಲ್ಲಿಯೂ ಇರತಕ್ಕವನು. ಎಂದರೆ ಅನಾದಿ ಯಾಗಿರುವನೆಂದರ್ಥವು.

ನೀತಿಃ ಸುನೀತಿಃ ಶುದ್ಧಾತ್ಮಾ ಸೋಮ ಸೋಮರತಃ ಸುಖೀ ।
ಸೋಮ ಪೋಽಮೃತಪಃ ಸೋಮೋ ಮಹಾನೀತಿ ರ್ಮಹಾಮತಿಃ ॥
ಅಜಾತ ಶತ್ರುರಾಲೋಕಃ ಸಂಭಾವ್ಯೋ ಹವ್ಯವಾಹನಃ ।
ಲೋಕಕಾರೋ ವೇದಕಾರಃ ಸೂತ್ರಕಾರಃ ಸನಾತನಃ ॥೪೩॥
ಮಹರ್ಷಿಃ ಕಪಿಲಾ ಚಾರ್ಯೋ ವಿಶ್ವದೀಪ್ತಿಃ ಸ್ತ್ರಿಲೋಚನಃ ।
ಪಿನಾಕ ಪಾಣಿ ರ್ಭೂರ್ದೇವಃ ಸ್ವಸ್ತಿದಃ ಸ್ವಸ್ತಿ ಕೃತ್ಸದಾ ॥೪೪॥

---

೪೨-೪೫. ನೀತಿಃ ಸನ್ಮಾರ್ಗರೂಪನು. ಸುನೀತಿಃ ಒಳ್ಳೆಯ ನಡತೆಯುಳ್ಳವನು. ಶುದ್ಧಾತ್ಮಾ ನಿರ್ಮಲವಾದ ಅಂತಃ ಕರಣವುಳ್ಳವನು. ಸೋಮಸೋಮರತಃ ಉಮಾದೇವಿಂದಲೂ, ಚಂದ್ರನಿಂದಲೂ ಯುಕ್ತನಾಗಿರುವವನು. ಸುಖೀ ನಿತ್ಯಸುಖವುಳ್ಳವನು. ಸೋಮಪಃ ಯಜ್ಞದಲ್ಲಿ ಹೋಮಮಾಡಿದ ಸೋಮರಸವನ್ನು ಕುಡಿಯುವವನು. ಅಮೃತಪಃ ಅಮೃತವನ್ನು ಸೇವಿಸತಕ್ಕವನು. ಸೋಮಃ ಸೋಮವಲ್ಲೀ ಸ್ವರೂಪನು. ವೇದದಲ್ಲಿಯೂ "ತೃತೀ ಯಸ್ಯಾ ಮಿತೋದಿವಿ ಸೋಮ ಆಸೀತ್ ತಂಗಾಯತ್ರೀ ಅಭ್ಯಹರತ್" ಎಂದು ಹೇಳಿದೆ. ಮಹಾನೀತಿಃ ಪೂಜ್ಯವಾದ ನೀತಿಯುಳ್ಳವನು. ಅಜಾತ ಶತ್ರುಃ ಶತ್ರುವು ಇಲ್ಲದೇ ಇರುವವನು. ಆಲೋಕಃ ಪ್ರಕಾಶಸ್ವರೂಪನು. ಸಂಭಾವ್ಯಃ ಸತ್ಕಾರಕ್ಕೆ ಅರ್ಹನು. ಹವ್ಯವಾಹನಃ ದೇವತೆಗಳಿಗೆ ಹವಿಸ್ಸನ್ನು ಸಲ್ಲಿಸತಕ್ಕವನು. ಲೋಕಕಾರಃ ಚತುರ್ದಶ ಭುವನಗಳನ್ನು ಸೃಷ್ಟಿಸಿರತಕ್ಕವನು. ವೇದಕಾರಃ ಋಗ್ವೇದಾದಿ ವೇದಗಳನ್ನು ಪ್ರಕಟ ಮಾಡಿದವನು. ಸೂತ್ರಕಾರಃ ಬ್ರಹ್ಮಸೂತ್ರಗಳನ್ನು ಮಾಡಿದನು. ಸನಾತನಃ ಸನಾತನವೆಂಬ ಹೆಸರುಳ್ಳ ಋಷಿಸ್ವರೂಪನು. ಮಹರ್ಷಿಃ ಪೂಜ್ಯಋಷಿರೂಪನು. ಕಪಿಲಾಚಾರ್ಯನು. ಪಿನಾಕ ಪಾಣಿಃ ಭೂಃ ಪಿನಾಕವೆಂಬ ಧನುಸ್ಸನ್ನು ಕೈಯ್ಯಲ್ಲಿ ಧರಿಸಿರುವವನು. ಮತ್ತು ಭೂಃ ಭೂಃ ಎಂಬ ಲೋಕದಲ್ಲಿ ಕ್ರೀಡಿಸತಕ್ಕವನು. ಕಪಿಲಾಚಾರ್ಯಃ ಸಾಂಖ್ಯಶಾಸ್ತ್ರಪ್ರವರ್ತಕನು. ವಿಶ್ವದೀಪ್ತಿಃ ಜಗತ್ಪ್ರಕಾಶಕನು. ತ್ರಿಲೋಚನವಃ ಮೂರು ಕಣ್ಣುಗಳುಳ್ಳವನು. ಈಶ್ವರನ ಧನುಸ್ಸಿಗೆ ಪಿನಾಕವೆಂಬ ಹೆಸರು ಪ್ರಸಿದ್ಧವಾಗಿದೆ. ದೇವಃ ಪ್ರಕಾಶ

ತ್ರಿಧಾ ಮಾ ಸೌಭಗಃ ಶರ್ವಃ ಸರ್ವಜ್ಞಃ ಸರ್ವಗೋಚರಃ ।
ಬ್ರಹ್ಮ ಧೃಗ್ವಿಶ್ವಸೃಕ್ ಸ್ವರ್ಗಃ ಕರ್ಣಿಕಾರಃ ಪ್ರಿಯಃ ಕವಿಃ ॥೪೫॥
ಶಾಖೋ ವಿಶಾಖೋ ಗೋಶಾಖಃ ಶಿವೋಽನೈಕಃ ಕ್ರತುಃ ಸಮಃ ।
ಗಂಗಾಪ್ಲವೋದಕೋ ಭಾವಃ ಸಕಲ ಸ್ಥಪತಿ ಸ್ಥಿರಃ ॥೪೬॥
ವಿಜಿತಾತ್ಮಾ ವಿಧೇಯಾತ್ಮಾ ಭೂತವಾಹನ ಸಾರಥಿಃ ।
ಸಗಣೋ ಗಣಕಾರ್ಯಶ್ಚ ಸುಕೀರ್ತಿ ಶ್ಛಿನ್ನ ಸಂಶಯಃ ॥೪೭॥

---

ಕನು. ಸ್ವಸ್ತಿದಃ ಕಲ್ಯಾಣವನ್ನುಂಟುಮಾಡುವವನು. ಸ್ವಸ್ತಿಕೃತ್ ಯಾವಾಗಲೂ ಕಲ್ಯಾಣವನ್ನು ಮಾಡುವವನು. ತ್ರಿಧಾಮಾ ತೇಜಸ್ಸ್ವರೂಪರಾದ ಬ್ರಹ್ಮಾ, ವಿಷ್ಣು, ಮಹೇಶ್ವರರಿಗೆ ಜನಕನು. ಸೌಭಗಃ ಸೌಭವೆಂಬ ವಾಹನವನ್ನು ಶಾಲ್ವನೆಂಬ ರಾಜನಿಗೆ ದಯಪಾಲಿಸಿರುವವನು. ಶರ್ವಃ ಶರ್ವಜ್ಞಃ ಪಾಪಿಗಳನ್ನು ಹಿಂಸೆಮಾಡುವ ಸರ್ವಜ್ಞರಾದ ಗಣಗಳಿಂದ ಯುಕ್ತನಾದವನು. ಸರ್ವಗೋಚರಃ ಸಮಸ್ತವಸ್ತುಗಳ ಪ್ರತ್ಯಕ್ಷವುಳ್ಳವನು. ಬ್ರಹ್ಮಧೃಕ್ ವಿಶ್ವಧೃಕ್ ಸ್ವರ್ಗಃ ವೇದಾಧ್ಯಯನ ಮಾಡಿದವರಿಗೆ ಬ್ರಹ್ಮಲೋಕವನ್ನು ಫಲವನ್ನಾಗಿ ಕೊಡುವವನು. ಕರ್ಣಿಕಾರಃ ಕರ್ಣಿಕಾರವೆಂಬ ವೃಕ್ಷದ ಸ್ವರೂಪನು ಅಥವಾ ಕನ್ನೈದಿಲೆಯ ಕಣಿಗಿಲೆಯ ಸ್ವರೂಪನು. ಪ್ರಿಯಃ ಭಕ್ತರ ಪ್ರೀತಿಪಾತ್ರನು. ಕವಿಃ ತ್ರಿಕಾಲಜ್ಞನು. ಕವಿಯಾದ ವಾಲ್ಮೀಕಿಯ ಸ್ವರೂಪನು.

೪೬–೫೦. ಶಾಖಃ ಶಾಖನೆಂಬ ಸಂಜ್ಞೆಯುಳ್ಳವನು. ವಿಶಾಖಃ ಷಣ್ಮುಖನ ಸ್ವರೂಪನು. ಗೋಶಾಖಃ ಋಗ್ವೇದಾದಿ ಶಾಖೆಗಳಿಗೆ ಪ್ರಕಾಶಕನು. ಶಿವಃ ಸುಖಸ್ವರೂಪನು. ಅನೈಕಃ ಅದ್ವಿತೀಯನು. ಕ್ರತುಃ ಅಗ್ನಿಷ್ಟೋಮಾದಿಯಾಗಸ್ವರೂಪನು. ಸಮಃ ಸರ್ವರಲ್ಲಿಯೂ ಸಮಭಾವನೆಯುಳ್ಳವನು. ಗಂಗಾಪ್ಲವೋದಕಃ ತಾರಕವಾದ ಗಂಗೆಯನ್ನು ತಲೆಯಲ್ಲಿ ಧರಿಸಿರತಕ್ಕವನು. ಭಾವಃ ಭಕ್ತರಿಗೆ ಮೋಕ್ಷವನ್ನು ಕೊಡತಕ್ಕವನು. ಸಕಲಃ ಚಂದ್ರಕಲೆಯಿಂದ ಯುಕ್ತನಾದವನು. ಸ್ಥಪತಿಃ ಮಾಯೆಯೆಂಬ ಕವಚವುಳ್ಳವನು. ಸ್ಥಿರಃ ಅಚಂಚಲನು. ವಿಜಿತಾತ್ಮಾ ಮನೋನಿಗ್ರಹವುಳ್ಳವನು. ವಿಧೇಯಾತ್ಮಾ ಉಪನಿಷತ್ತಿನಿಂದ

ಕಾಮದೇವಃ ಕಾಮಪಾಲೋ ಭಸ್ಮೋದ್ಧೂಲಿತ ವಿಗ್ರಹಃ ।
ಭಸ್ಮಪ್ರಿಯೋ ಭಸ್ಮಶಾಯೀ ಕಾಮೀ ಕಾಂತಃ ಕೃತಾಗಮಃ ॥೪೮॥
ಸಮಾಯುಕ್ತೋ ನಿವೃತ್ತಾತ್ಮಾ ಧರ್ಮ ಯುಕ್ತಃ ಸದಾಶಿವಃ ।
ಚತು ರ್ಮುಖ ಶ್ಚ ತುರ್ಬಾಹು ರ್ದುರಾವಾಸೋ ದುರಾ ಸದಃ ॥೪೯॥
ದುರ್ಗ ಮೋ ದುರ್ಲಭೋ ದುರ್ಗಃ ಸರ್ವಾಯುಧ ವಿಶಾರದಃ ।
ಆಧ್ಯಾತ್ಮ ಯೋಗ ನಿಲಯಃ ಸುತಂತು ಸ್ತಂತು ವರ್ಧನಃ ॥೫೦॥

---

ಪ್ರತಿಪಾದ್ಯನು. ಭೂತವಾಹನಸಾರಥಿ:—ಬ್ರಹ್ಮನೇ ಸಾರಥಿಯಾಗಿ ಉಳ್ಳವನು. ಸಗಣಃ ಪ್ರಮಥಗಣಗಳಿಂದ ಯುಕ್ತನಾದವನು ಗಣಕಾರ್ಯಃ ಇಪ್ಪತ್ತೈದು ತತ್ವಗಳಿಂದ ಬ್ರಹ್ಮಾಂಡವನ್ನು ನಿರ್ಮಿಸಿರುವವನು. ಸುಕೀರ್ತಿಃ ಭಕ್ತರಿಗೆ ಒಳ್ಳೆಯಕೀರ್ತಿಯನ್ನು ದಯಪಾಲಿಸುವವನು. ಛಿನ್ನಸಂಶಯಃ ಭಕ್ತರ ಸಂಶಯವನ್ನು ಹೋಗಲಾಡಿಸತಕ್ಕವನು. ಕಾಮದೇವಃ ಮನ್ಮಥನಿಗೆ ಜಗತ್ತನ್ನು ಜಯಿಸುವ ಶಕ್ತಿಯನ್ನು ಕೊಡುವವನು. ಕಾಮಪಾಲಃ ಮನ್ಮಥನನ್ನು ಕಾಪಾಡತಕ್ಕವನು. ಭಸ್ಮೋದ್ಧೂಲಿತ ವಿಗ್ರಹಃ ಭಸ್ಮಲೇಪದಿಂದ ಧೂಸರವಾದ ದೇಹವುಳ್ಳವನು ಭಸ್ಮಪ್ರಿಯಃ ಭಸ್ಮವನ್ನು ಪ್ರೀತಿಸುವವನು. ಭಸ್ಮಶಾಯೀ ಭಸ್ಮದಮೇಲೆ ಮಲಗತಕ್ಕವನು. ಕಾಮೀ ಕಾಮವಿಶಿಷ್ಟನು, ಕಾಂತಃ ಸುಂದರನು, ಕೃತಾಗಮಃ ವೇದಗಳನ್ನು ರಚಿಸಿರುವವನು. ಸಮಾಯುಕ್ತಃ ನಿತ್ಯಪ್ರಕೃತಿಯುಕ್ತನು, ನಿವೃತ್ತಾತ್ಮಾ—ಮನಸ್ಸಿಗೆ ಅಗೋಚರನು, "ಅಪ್ರಾಪ್ಯ ಮನಸಾಸಹ" ಎಂದು ವೇದದಲ್ಲಿ ಹೇಳಿದೆ. ಧರ್ಮಯುಕ್ತಃ ಧರ್ಮದಿಂದ ಕೂಡಿರುವವನು. ಸದಾಶಿವಃ ಸದಾಕಲ್ಯಾಣವನ್ನುಂಟುಮಾಡವವನು. ಚತುರ್ಮುಖಃ ಚತುರ್ಬಾಹುಃ ಬ್ರಹ್ಮರೂಪನು. ದುರಾಸದಃ ಬ್ರಹ್ಮಸ್ವರೂಪನೂ, ಕಷ್ಟದಿಂದ ಧ್ಯಾನಿಸಲು ಶಕ್ಯನು. ದುರಾಸದಃ ದುಃಖದಿಂದ ಹೊಂದಲು ಸಾಧ್ಯನಾದವನು. ದುರ್ಗಮಃ ದುರ್ಲಭಃ ಅತಿಪ್ರಯಾಸದಿಂದ ತಿಳಿಯಲು ಸಾಧ್ಯನು. ದುರ್ಗಃ ದುಃಖದಿಂದ ಸಮೀಪವನ್ನು ಪಡೆಯಲು ಸಾಧ್ಯನು. ಸರ್ವಾಯುಧ ವಿಶಾರದಃ ಸರ್ವ ಆಯುಧಗಳ ಪ್ರಯೋಗದಲ್ಲಿಯೂ, ಕುಶಲನು. ಅಧ್ಯಾತ್ಮಯೋಗನಿಲಯಃ ಅಸಂಪ್ರಜ್ಞಾತ ಸಮಾಧಿಯಲ್ಲಿ ಇರುವವನು. ಸುತಂತುಃ ಒಳ್ಳೆಯ ಸಂತತಿಯನ್ನು ಕೊಡತಕ್ಕವನು. ತಂತುವರ್ಧನಃ ಸಂತತಿಯನ್ನು ಅವಿಚ್ಛಿನ್ನವಾಗಿ ಅಭಿವೃದ್ಧಿಗೊಳಿಸತಕ್ಕವನು.

ಶುಭಾಂಗೋ ಲೋಕಸಾರಂಗೋ ಜಗದೀಶೋಽಮೃತಾಶನಃ ।
ಭಸ್ಮ ಶುದ್ಧಿಕರೋ ಮೇರು ರೋಜಸ್ವೀ ಶುದ್ಧ ವಿಗ್ರಹಃ ॥೫೧॥
ಹಿರಣ್ಯರೇತಾ ಸ್ತರಣಿ ರ್ಮರೀಚಿ ರ್ಮಹಿಮಾಲಯಃ ।
ಮಹಾಹ್ರದೋ ಮಹಾ ಗರ್ಭಃ ಸಿದ್ಧ ವೃಂದಾರ ವಂದಿತಃ ॥೫೨॥
ವ್ಯಾಘ್ರ ಚರ್ಮಧರೋ ವ್ಯಾಲೀ ಮಹಾ ಭೂತೋ ಮಹಾನಿಧಿಃ ।
ಅಮೃತಾಂಗೋಽಮೃತ ವಪುಃ ಪಂಚಯಜ್ಞಃ ಪ್ರಭಂಜನಃ ॥೫೩॥
ಪಂಚವಿಂಶತಿ ತತ್ವಜ್ಞಃ ಪಾರಿಜಾತಃ ಪರಾವರಃ ।
ಸುಲಭಃ ಸುವ್ರತಃ ಶೂರೋ ವಾಙ್ಮಯೈಕ ನಿಧಿ ರ್ನಿಧಿಃ ॥೫೪॥

---

೫೧-೫೪. ಶುಭಾಂಗಃ ಒಳ್ಳೆಯ ಶರೀರಗಳನ್ನು ಕೊಡತಕ್ಕವನು. ಲೋಕಸಾರಂಗಃ ಭಕ್ತರ ಭಕ್ತಿರಸವನ್ನು ಭ್ರಮರದಂತೆ ಸವಿಯುವವನು, ಜಗದೀಶಃ ಪ್ರಪಂಚಕ್ಕೆ ಸ್ವಾಮಿಯು. ಅಮೃತಾಶನಃ ಯಜ್ಞಶೇಷ ವನ್ನು ಭಕ್ಷಣಮಾಡುವವನು. ಭಸ್ಮಶುದ್ಧಿಕರಃ ಭಸ್ಮವನ್ನು ಶುದ್ಧಿಮಾಡ ತಕ್ಕವನು. ಮೇರುಃ ಕನಕಾದ್ರಿರೂಪನು. ಓಜಸ್ವೀ ಆತ್ಮಬಲವುಳ್ಳ ವನು. ಶುದ್ಧವಿಗ್ರಹಃ ಪವಿತ್ರವಾದ ದೇಹವುಳ್ಳವನು. ಹಿರಣ್ಯರೇತಾಃ ಸುವರ್ಣವೇ ರೇತಸ್ಸಾಗುಳ್ಳವನು. ತರಣಿಃ ಸಂಸಾರ ಸಾಗರವನ್ನು ದಾಟಿಸುವ ನಾವೆಯರೂಪನು. ಮರೀಚಿಃ ಸೂರ್ಯರೂಪನು. ಮಹಿಮಾ ಲಯಃ ಮಹಿಮೆಯೆಂಬ ಸಿದ್ಧಿಗೆ ಆಶ್ರಯನು. ಮಹಾಹ್ರದಃ ಯೋಗಿಗಳಿಗೆ ಜ್ಞಾನಪ್ರದನು. ಮಹಾಗರ್ಭಃ ಮಹತ್ತತ್ವದ ಜನಕನು, ಸಿದ್ಧವೃಂದಾರ ವಂದಿತಃ ಸಿದ್ಧರು, ಮತ್ತು ದೇವತೆಗಳು, ಇವರುಗಳಿಂದ ನಮಸ್ಕರಿ ಸಲ್ಪಡತಕ್ಕವನು. ವ್ಯಾಘ್ರಚರ್ಮಧರಃ ಹುಲಿಯ ಚರ್ಮವನ್ನು ಧರಿಸಿರುವನು. ವ್ಯಾಲೀ ಸರ್ಪಭೂಷಣನು. ಮಹಾ ಭೂತಃ ವಿರಾ ಟ್ಪುರುಷನಿಗೆ ಕಾರಣ ಭೂತನು. ಮಹಾನಿಧಿಃ ಶಂಖಾದಿ ಮಹಾನಿಧಿ ಗಳಿಗೆ ಕಾರಣ ಭೂತನು. ಅಮೃತಾಂಗಃ ಸಾವಿಲ್ಲದಿರುವ ದೇಹ ವುಳ್ಳವನು. ಅಮೃತವಪುಃ ಸುವರ್ಣದಂತಿರುವ ದೇಹವುಳ್ಳವನು. ಪಂಚಯಜ್ಞಃ ಪಂಚಮಹಾಯಾಗಗಳಿಗೆ ಉದ್ದೇಶ್ಯ ಭೂತನು. ಪ್ರಭಂ ಜನಃ ಭಕ್ತರ ಅಜ್ಞಾನವನ್ನು ನಾಶಮಾಡುವವನು. ಪಂಚವಿಂಶತಿ ತತ್ವಜ್ಞಃ ಭಕ್ತರಿಗೆ ಇಪ್ಪತ್ತೈದು ತತ್ವಗಳನ್ನು ಬೋಧಿಸತಕ್ಕವನು.

ವರ್ಣಾಶ್ರಮ ಗುರುರ್ವರ್ಣೀ ಶತ್ರುಜಿಚ್ಛತ್ರು ತಾಪನಃ ।
ಆಶ್ರಮಃ ಕ್ಷಪಣಃ ಕ್ಷಾಮೋ ಜ್ಞಾನವಾ ನ ಚಲಾಚಲಃ ॥೫೫॥
ಪ್ರಮಾಣ ಭೂತೋ ದುರ್ಜ್ಞೇಯಃ ಸುಪರ್ಣೋ ವಾಯುವಾಹನಃ
ಧನುರ್ಧರೋ ಧನರ್ವೇದೋ ಗುಣರಾಶಿ ರ್ಗುಣಾಕರಃ ॥೫೬॥
ಅನಂತ ದೃಷ್ಟಿ ರಾನಂದೋ ದಂಡೋ ದಮಯಿತಾ ದಮಃ ।
ಅಭಿವಾದ್ಯೋ ಮಹಾಚಾರ್ಯಃ ವಿಶ್ವಕರ್ಮಾ ವಿಶಾರದಃ ॥೫೭॥

---

ಪಾರಿಜಾತಃ ಕಲ್ಪದ್ರುಮಸ್ವರೂಪನು. ಪರಾವರಃ: ಬ್ರಹ್ಮನು ಮತ್ತು ಜಗತ್ತು ಇವೆರಡರ ಸ್ವರೂಪನು. ಸುಲಭಃ ಭಕ್ತರಿಗೆ ಸುಲಭವಾಗಿ ಹೊಂದಲು ಶಕ್ಯನು. ಸುವ್ರತಃ ಒಳ್ಳೆಯ ನಿಯಮಾಚರಣೆಯುಳ್ಳವನು. ಶೂರಃ ಸೂರ್ಯರೂಪನು. ವಾಙ್ಮಯೈಕನಿಧಿಃ ಶಬ್ದಶಾಸ್ತ್ರಕ್ಕೆ ಆಶ್ರಯ ಭೂತನು. ನಿಧಿಃ ಯೋಗಿಗಳಿಂದ ಚಿತ್ತದಲ್ಲಿ ಧ್ಯಾನಿಸಲ್ಪಡತಕ್ಕವನು. ವರ್ಣಾಶ್ರಮಗುರುಃ ಬ್ರಾಹ್ಮಣಾದಿ ವರ್ಣಗಳಿಗೂ ಮತ್ತು ಬ್ರಹ್ಮಚರ್ಯಾದಿ ಆಶ್ರಮಗಳಿಗೂ ನಿಯಾಮಕನು. ಶತ್ರುಜಿತ್ ಶತ್ರುಗಳನ್ನು ಜಯಿಸುವವನು. ಶತ್ರುತಾಪನಃ ಶತ್ರುಗಳಿಗೆ ಕಷ್ಟಗಳನ್ನು ಕೊಡತಕ್ಕವನು. ಆಶ್ರಮಃ ಜನ್ಮಜರಾಮರಣಾದಿಗಳನ್ನು ಹೋಗಲಾಡಿಸುವುದರಿಂದ ವಿಶ್ರಾಂತಿ ಸ್ಥಾನಭೂತನು. ಕ್ಷಪಣಃ ಭಕ್ತರ ಪಾಪವನ್ನು ನಾಶಮಾಡುವವನು. ಕ್ಷಾಮಃ ಸೂಕ್ಷ್ಮನು. ಜ್ಞಾನವಾನ್ ನಿತ್ಯಜ್ಞಾನವುಳ್ಳವನು. ಅಚಲಾಚಲಃ ಪರ್ವತಗಳಿಗೆ ಅಚಂಚಲತೆಯನ್ನು ಕೊಟ್ಟಿರುವವನು.

೫೬–೬೦. ಪ್ರಮಾಣಭೂತಃ ಪ್ರತ್ಯಕ್ಷಾದಿ ಪ್ರಮಾಣಗಳ ಜ್ಞಾನಕ್ಕೂ ಉತ್ಪಾದಕನು. ದುರ್ಜ್ಞೇಯಃ ಅತಿ ಪ್ರಯಾಸದಿಂದ ತಿಳಿದುಕೊಳ್ಳಲು ಯೋಗ್ಯನು. ಸುಪರ್ಣಃ ಗರುಡನ ಸ್ವರೂಪನು. ವಾಯುವಾಹನಃ ವಾಯುವನ್ನು ರಥದ ಸೋಪಾನವನ್ನಾಗಿ ಮಾಡಿಕೊಂಡಿರುವವನು. ಧನುರ್ಧರಃ ಧನುರ್ಧಾರಿಯು. ಧನುರ್ವೇದಃ ಧನುರ್ವೇದವನ್ನು ಪ್ರಕಟ ಮಾಡಿದವನು. ಗುಣರಾಶಿಃ ಯೋಗಾದಿಗುಣಗಳಿಗೆ ಆಶ್ರಯನು. ಅನಂತದೃಷ್ಟಿಃ ಅನೇಕಕಣ್ಣುಗಳುಳ್ಳವನು. ಆನಂದ, ಆನಂದಸ್ವರೂಪನಾದವನು. ದಂಡಃ ದಂಡರೂಪನು. ದಮಯಿತಾ ದುಷ್ಟರನ್ನು ನಿಗ್ರಹಮಾಡುವವನು. ದಮಃ ಇಂದ್ರಿಯನಿಗ್ರಹರೂಪನು.

**ವೀತರಾಗೋ ವಿನಿತಾತ್ಮಾ ತಪಸ್ವೀ ಭೂತ ಭಾವನಃ ।**
**ಉನ್ಮತ್ತವೇಷಃ ಪ್ರಚ್ಛನ್ನೋ ಜಿತ ಕಾಮಃ ಜಿತಪ್ರಿಯಃ ॥೫೮॥**
**ಕಲ್ಯಾಣ ಪ್ರಕೃತಿಃ ಕಲ್ಪಃ ಸರ್ವಲೋಕ ಪ್ರಜಾಪತಿಃ ।**
**ತಪಸ್ವೀ ತಾರಕೋ ಧೀಮಾನ್ ಪ್ರಧಾನ ಪ್ರಭು ರವ್ಯಯಃ ॥೫೯॥**
**ಲೋಕಪಾಲೋಽಂತರ್ಹಿತಾತ್ಮಾ ಕಲ್ಪಾದಿಃ ಕಮಲೇಕ್ಷಣಃ ।**
**ವೇದ ಶಾಸ್ತ್ರಾರ್ಥ ತತ್ತ್ವಜ್ಞೋ ನಿಯಮೋ ನಿಯಮಾಶ್ರಯಃ ॥೬೦॥**

---

ಅಭಿವಾದ್ಯಃ ಸಮಸ್ತರಿಗೂ ನಮಸ್ಕಾರಾರ್ಹನು. ಮಹಾಚಾರ್ಯಃ ಪೂಜ್ಯನಾದ ಗುರುವು. ವಿಶ್ವಕರ್ಮಾ ಜಗನ್ನಿರ್ಮಾಣಕಾರಿಯು. ವಿಶಾರದಃ ಸರಸ್ವತಿಗಿಂತ ಅಧಿಕನು. ವೀತರಾಗಃ ಭಕ್ತರಿಗೆ ವಿಷಯಗಳಲ್ಲಿ ಪ್ರೀತಿಯನ್ನು ಹೋಗಲಾಡಿಸುವವನು. ವಿನೀತಾತ್ಮಾ ನಮ್ರಸ್ವಭಾವವುಳ್ಳವನು. ತಪಸ್ವೀ, ತಪಸ್ಸನ್ನು ಮಾಡುವವನು. ಭೂತಭಾವನಃ ಪ್ರಾಣಿಗಳನ್ನು ಸೃಷ್ಟಿಸುವವನು. ಉನ್ಮತ್ತವೇಷಃ ಉನ್ಮತ್ತನೆನಿಸುವ ವೇಷವನ್ನು ಧರಿಸಿರುವವನು. ಪ್ರಚ್ಛನ್ನಃ ಗೂಢವಾಗಿರುವವನು. ಜಿತಕಾಮಃ ಮನ್ಮಥನನ್ನು ಜಯಿಸುವವನು. ಅಜಿತಪ್ರಿಯಃ ವಿಷ್ಣುವು ಪ್ರಿಯನಾಗಿ ಉಳ್ಳವನು. ಕಲ್ಯಾಣಪ್ರಕೃತಿಃ ಒಳ್ಳೆಯ ಸ್ವಭಾವವುಳ್ಳವನು. ಕಲ್ಪಃ ಸರ್ವರಿಗೂ ಪ್ರಥಮನು. ಸರ್ವಲೋಕಪ್ರಜಾಪತಿಃ ಸಮಸ್ತಜನಗಳಿಗೆ ಪಾಲಕನು. ತಪಸ್ವೀ ತಪೋಧನನು. ತಾರಕಃ ಸಂಸಾರದಿಂದ ಪಾರುಮಾಡುವವನು. ಧೀಮಾನ್ ನಿತ್ಯಜ್ಞಾನಿಯು. ಪ್ರಧಾನಪ್ರಭುಃ ಮಾಯೆಯ ಸ್ವಾಮಿಯು. ಅವ್ಯಯಃ ನಾಶರಹಿತನು ಲೋಕಪಾಲಃ ಚತುರ್ದಶಭುವನಗಳನ್ನು ಕಾಪಾಡುವವನು. ಅಂತರ್ಹಿ. ತಾತ್ಮಾ ಮಾಯೆಯಿಂದ ಆವರಿಸಲ್ಪಟ್ಟವನು. ಕಲ್ಪಾದಿಃ ಶಾಸ್ತ್ರಗಳಿಗೆ ಆದಿಯು. ಕಮಲೇಕ್ಷಣಃ ಕಣ್ಣುಗಳಿಂದ ಲಕ್ಷ್ಮಿಯನ್ನು ಸೃಷ್ಟಿಸಿದವನು. ವೇದಶಾಸ್ತ್ರತತ್ವಜ್ಞಃ ವೇದಗಳ ಮತ್ತು ಶಾಸ್ತ್ರಗಳ ತತ್ವವನ್ನು ತಿಳಿದಿರುವವನು. ನಿಯಮಃ ನಿಯಮವೆಂಬ ಯೋಗಾಂಗವನ್ನು ತಿಳಿದಿರುವವನು. ನಿಯಮಾಶ್ರಯಃ ಯೋಗಾಂಗಕ್ಕೆ ಆಶ್ರಯಸ್ಥಾನನು.

**ಚಂದ್ರಃ ಸೂರ್ಯಃ ಶನಿಃ ಕೇತುಃ ವಿರಾಮೋ ವಿದ್ರುಮ ಚ್ಛವಿಃ ।**
**ಭಕ್ತಿಗಮ್ಯಃ ಪರಬ್ರಹ್ಮ ಮೃಗ ಬಾಣಾರ್ಪಣೋಽನಘಃ ॥೬೧॥**
**ಅದ್ರಿರಾಜಾಲಯಃ ಕಾಂತಃ ಪರಮಾತ್ಮಾ ಜಗದ್ಗುರುಃ ।**
**ಸರ್ವಕರ್ಮಾ ಚಲಸ್ತ್ವಷ್ಟಾ ಮಂಗಲ್ಯೋ ಮಂಗಲಾವೃತಃ ॥೬೨॥**
**ಮಹಾತಪಾ ದೀರ್ಘತಪಾಃ ಸ್ಥವಿಷ್ಠಃ ಸ್ಥವಿರೋ ಧ್ರುವಃ ।**
**ಅಹಃ ಸಂವತ್ಸರೋ ವ್ಯಾಪ್ತಿಃ ಪ್ರಮಾಣಂ ಪರಮಂ ತಪಃ ॥೬೩॥**

---

೬೧–೬೫. ಚಂದ್ರಃ ಚಂದ್ರನೆಂಬ ಗ್ರಹಸ್ವರೂಪನೂ, ಸೂರ್ಯಃ ಲೋಕಗಳನ್ನು ತಮ್ಮ ಕಾರ್ಯಗಳಲ್ಲಿ ಆಸಕ್ತವಾಗುವಂತೆ ಮಾಡುವ ಸೂರ್ಯಸ್ವರೂಪನು, ಶನಿಃ ಶನಿಯೆಂಬ ಗ್ರಹದ ಸ್ವರೂಪನು, ಕೇತುಃ ಧೂಮಕೇತು ಸ್ವರೂಪನು. ವಿರಾಮಃ ಅತಿಸುಂದರವಾದ ಬುಧನ ಸ್ವರೂಪನು. ವಿದ್ರುಮಚ್ಛವಿಃ ಹವಳದ ಕಾಂತಿಯಂತೆ ಕಾಂತಿಯುಳ್ಳವನು. ಎಂದರೆ ಮಂಗಳವೆಂಬ ಗ್ರಹದ ಸ್ವರೂಪನು. ಭಕ್ತಿಗಮ್ಯಃ ಅತಿಪ್ರೀತಿಯಿಂದ ಪಡೆಯಲು ಸಾಧ್ಯನು. ಪರಬ್ರಹ್ಮಮೃಗಬಾಣಾರ್ಪಣಃ ಉಪಾಸಕರ ದೃಷ್ಟಿಯಿಂದ ಮೃಗದಂತೆ ಇರುವ, ಮತ್ತು ಮನಸ್ಸೆಂಬ ಬಾಣದಿಂದ ಸ್ವಾಧೀನನಾಗುವ, ಪರಬ್ರಹ್ಮಸ್ವರೂಪನು, ಪ್ರಣವೋಧನುಃ ಶರೋಹ್ಯಾತ್ಮಾಬ್ರಹ್ಮತಲ್ಲಕ್ಷ್ಯ ಮುಚ್ಯತೇ । ಅಪ್ರಮತ್ತೇನವೇದ್ಧವ್ಯಂ ಶರವತ್ತನ್ಮಯೋಭವೇತ್ ॥ ಎಂದು ವೇದದಲ್ಲಿ ಹೇಳಿರುತ್ತದೆ. ಅನಘಃ ಭಕ್ತರ ಪಾಪವನ್ನು ನಾಶಮಾಡುವವನು. ''ಯದ್ವ್ಯಕ್ಷರಂ ನಾಮ ಗಿರೇರಿತಂ ನೃಣಾಂ ಸಕೃತ್ಪ್ರಸಂಗಾ ದಘಮಾಶುಹಂತಿ ತತ್ ॥ ಎಂದು ಭಾಗವತದಲ್ಲಿ ಹೇಳಿರುತ್ತದೆ. ಅದ್ರಿರಾಜಾಲಯಃ ಮೇರು ಹಿಮಾಲಯ ಮೊದಲಾದ ಪರ್ವತಗಳನ್ನು ಮನೆಯನ್ನಾಗಿ ಮಾಡಿಕೊಂಡಿರುವವನು. ಕಾಂತಃ ಬ್ರಹ್ಮನೇ ಸಾರಥಿಯಾಗಿ ಸಮೀಪದಲ್ಲಿ ಉಳ್ಳವನು.

ಪರಮಾತ್ಮಾ ಸಮಸ್ತ ಪ್ರದೇಶಗಳಲ್ಲಿಯೂ ವ್ಯಾಪಿಸಿರುವವನು. ಸ್ಮೃತಿಯಲ್ಲಿಯೂ ''ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಗೀಯತೇ'' ಎಂದು ಹೇಳಿರುತ್ತದೆ. ಜಗದ್ಗುರುಃ ಜಗತ್ತಿನ ಹಿತೋಪದೇಶಕನು, ಸರ್ವ ಕರ್ಮಾಚಲಃ ಭಕ್ತರಿಗೆ ಸ್ಥಿರಬುದ್ಧಿಯನ್ನು ಕೊಡುವ

**ಸಂವತ್ಸರ ಕರೋ ಮಂತ್ರಃ ಪ್ರತ್ಯಯಃ ಸರ್ವದರ್ಶನಃ ।**
**ಅಜಃ ಸರ್ವೇಶ್ವರಃ ಸ್ನಿಗ್ಧೋ ಮಹಾರೇತಾ ಮಹಾಬಲಃ ॥೬೪॥**
**ಯೋಗೀ ಯೋಗ್ಯೋ ಮಹಾರೇತಾಃ ಸಿದ್ಧಃ ಸರ್ವಾದಿ ರಗ್ನಿದಃ ।**
**ವಸುರ್ವಸು ಮನಾಃ ಸತ್ಯಃ ಸರ್ವಪಾಪ ಹರೋ ಹರಃ ॥೬೫॥**

---

ವನು. ತ್ವಷ್ಟಾ ವಿಶ್ವಕರ್ಮರೂಪನು, ಮಂಗಲ್ಯಃ ಕಲ್ಯಾಣಾರ್ಹನು, ಮಂಗಲಾವೃತಃ ಮಂಗಲ ಸ್ವರೂಪಿಯು. ಮಹಾತಪಾಃ ಸರ್ವಾತಿಶಯವಾದ ತಪಸ್ಸುಳ್ಳವನು. ಸ್ಥವಿಷ್ಠಃ ಅತಿಶಯವಾಗಿ ಸ್ಥೂಲನು. ಸ್ಥವಿರಃ ವೃದ್ಧರೂಪನು, ಧ್ರುವಃ ಅಚಂಚಲನು. ಅಹಃ ದಿವಾಸ್ವರೂಪನು, ಸಂವತ್ಸರಃ ವರ್ಷಸ್ವರೂಪನು. ವ್ಯಾಪ್ತಿಃ ವ್ಯಾಪಕನು, ಪ್ರಮಾಣಂ ಕಾರ್ಯಭೂತವಾದ ಪದಾರ್ಥಗಳಿಗೆಲ್ಲಕ್ಕೂ ಎಲ್ಲೆಯಾಗಿರುವವನು. ಪರಮಃ ಮೋಕ್ಷಸ್ವರೂಪನು. ತಪಃ ತಪಸ್ಸಿನ ಸ್ವರೂಪನು. ಸಂವತ್ಸರಕರಃ ಪ್ರಭವಾದಿ ಸಂವತ್ಸರಗಳಗೆ ಉತ್ಪತ್ತಿಯ ಕಾರಣಭೂತನು. ಮಂತ್ರಃ ರಹಸ್ಯವಾಗಿರುವವನು. ಪ್ರತ್ಯಯಃ ಅನುಭವಸ್ವರೂಪನು, ಸರ್ವದರ್ಶನಃ ಕಾಲತ್ರಯದಲ್ಲಿಯೂ ಇರತಕ್ಕ ವಸ್ತುಗಳನ್ನು ನೋಡತಕ್ಕವನು. ಅಜಃ ಉತ್ಪತ್ತಿ ಇಲ್ಲದೇ ಇರುವವನು. ಸರ್ವೇಶ್ವರಃ ಸಮಸ್ತರಿಗೂ ಸ್ವಾಮಿಯು. ಸ್ನಿಗ್ಧಃ ಭಕ್ತರಲ್ಲಿ ವಾತ್ಸಲ್ಯವುಳ್ಳವನು. ಮಹಾರೇತಾಃ ಊರ್ಧ್ವರೇತಸ್ಕನು. "ಊರ್ಧ್ವರೇತಂ ವಿರೂಪಾಕ್ಷಂ" ಎಂದು ವೇದವಲ್ಲಿ ಹೇಳಿರುತ್ತದೆ. ಮಹಾಬಲಃ ಹೆಚ್ಚಾದ ಬಲವುಳ್ಳವನು. ಯೋಗೀ ನಿತ್ಯ ಯೋಗದಿಂದ ಕೂಡಿರುವವನು. ಯೋಗ್ಯಃ ಧ್ಯಾನಯೋಗಾನುಷ್ಠಾನದಲ್ಲಿ ಸಮರ್ಥನು. ಮಹಾರೇತಾಃ ಪೂಜ್ಯವಾದ ರೇತಸ್ಸುಳ್ಳವನು. ಸಿದ್ಧಃ ನಿತ್ಯನು. ಸರ್ವಾದಿಃ ಸಕಲ ಉತ್ಪನ್ನಗಳಾಗುವ ವಸ್ತುಗಳ ಪ್ರಾರಂಭದಲ್ಲಿರುವವನು. ಅಗ್ನಿದಃ ಜ್ಞಾನಾಗ್ನಿಯನ್ನು ಕೊಡುವವನು. "ಜ್ಞಾನಾಗ್ನಿಸ್ಸರ್ವ ಕರ್ಮಾಣಿ ಭಸ್ಮಸಾತ್ಕುರುತೇ ತಥಾ" ಎಂದು ಭಗವದ್ಗೀತೆಯಲ್ಲಿ ಹೇಳಿರುತ್ತದೆ. ವಸುಃ ಸರ್ವಪ್ರಾಣಿಗಳಿಗೂ ಆವಾಸಸ್ಥಾನನು, ವಸುಮನಾಃ ನಿರ್ಮಲವಾದ ಅಂತಃಕರಣ ಉಳ್ಳವನು, ಸತ್ಯಸರ್ವಪಾಪಹರಃ ಸತ್ಯರೂಪನು ಮತ್ತು ಸಮಸ್ತರ ಪಾಪಗಳನ್ನೂ ನಾಶಮಾಡುವವನು. ಹರಃ ಅಜ್ಞಾನ ಬಂಧ ನಾಶಕನಾದುದರಿಂದ ಆಶ್ಚರ್ಯಕರವಾದ ಫಲಗಳನ್ನು ಕೊಡುವವನು.

**ಅಮೃತಃ ಶಾಶ್ವತಃ ಶಾಂತಃ ಬಾಣಹಸ್ತಃ ಪ್ರತಾಪವಾನ್ ।**
**ಕಮಂಡಲು ಧರೋ ಧನ್ವೀ ವೇದಾಂಗೋ ವೇದ ವಿನ್ಮುನಿಃ ॥೬೬॥**
**ಭ್ರಾಜಿಷ್ಣು ರ್ಭೋಜನಂ ಭೋಕ್ತಾ ಲೋಕನೇತಾ ದುರಾ ಧರಃ ।**
**ಅತೀಂದ್ರಿಯೋ ಮಹಾಮಾಯಃ ಸರ್ವಾವಾಸ ಶ್ಚತುಷ್ಪಥಃ ॥೬೭॥**
**ಕಾಲಯೋಗೀ ಮಹಾನಾದೋ ಮಹೋತ್ಸಾಹೀ ಮಹಾಬಲಃ ।**
**ಮಹಾಬುದ್ಧಿ ರ್ಮಹಾ ವೀರ್ಯೋ ಭೂತಚಾರೀ ಪುರಂದರಃ ॥೬೮॥**

---

೬೬–೭೦ ಅಮೃತಃ ಮೋಕ್ಷರೂಪನು. ಶಾಶ್ವತಃ ನಿತ್ಯನು. ಶಾಂತಃ ಸುಖಸ್ವರೂಪನು. ಬಾಣಹಸ್ತಃ ಯಾವಬಾಣದಿಂದ ತ್ರಿಪುರಾಸುರನನ್ನು ಸಂಹರಿಸಿದನೋ ಆ ಬಾಣವನ್ನು ಕೈಯಲ್ಲಿ ಧರಿಸಿರುವವನು. ಪ್ರತಾಪ ವಾನ್ ಪ್ರತಾಪಶಾಲಿಯು ಕಮಂಡಲುಧರಃ ಕಮಂಡಲುವನ್ನು ಕೈಯ್ಯಲ್ಲಿ ಧರಿಸಿರುವವನು. ಧನ್ವೀ ಧನುರ್ಧರನು, ವೇದಾಂಗಃ ವೇದಗಳು ಎಂಬ ಅವಯವಗಳುಳ್ಳವನು. ''ತಸ್ಯಯಜುರೇವ ಶಿರಃ'' ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ವೇದವಿತ್ ವೇದವನ್ನು ಉಪದೇಶಮಾಡಿದವನು. ''ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ'' ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಮುನಿಃ ಮನನ ಶೀಲನು ಭ್ರಾಜಿಷ್ಣುಃ ಪ್ರಕಾಶ ಸ್ವಭಾವಉಳ್ಳವನು. ಭೋಜನಂ ಅನ್ನದ ಸ್ವರೂಪನು. ಭೋಕ್ತೃೀ ಯಾಗದಲ್ಲಿ ಅರ್ಪಿಸಿದ ಹವಿಸ್ಸನ್ನು ಭುಂಜಿಸುವವನು. ಲೋಕನೇತಾ ಲೋಕಗಳ ನಿಯಾಮಕನು. ದುರಾಧರಃ ಪ್ರಯಾಸದಿಂದ ಅಧೀನನಾಗಲು ಯೋಗ್ಯನು. ಅತೀಂದ್ರಿಯಃ ಇಂದ್ರಿಯಗಳಿಗೆ ಅಗೋಚರನು. ಮಹಾಮಾಯಃ ಮಾಯಾವಿಯು. ಸರ್ವಾವಾಸಃ ಸಮಸ್ತ ಪ್ರದೇಶಗಳಲ್ಲಿಯೂ ಇರುವವನು. ಚತುಷ್ಪಥಃ ಧರ್ಮಾರ್ಥ ಕಾಮಮೋಕ್ಷಗಳನ್ನು ಕೊಡುವವನು. ಕಾಲಯೋಗೀ ಮೃತ್ಯುವನ್ನು ಅವನ ಕೆಲಸದಲ್ಲಿ ನಿರತನಾಗುವಂತೆ ಮಾಡುವವನು. ''ಮೃತ್ಯುರ್ಧಾವತಿ ಪಂಚಮಃ'' ಎಂದು ಶ್ರುತಿಯು ಹೇಳಿರುತ್ತದೆ. ಮಹಾಬುದ್ಧಿಃ ಪೂಜ್ಯನು. ಮಹಾವೀರ್ಯಃ ಹೆಚ್ಚಾದ ಶಕ್ತಿಯನ್ನು ಕೊಡುವವನು. ಭೂತಚಾರೀ ಎಲ್ಲಾ ಪ್ರಾಣಿಗಳಲ್ಲಿಯೂ ನೆಲಸಿರುವವನು. ಪುರಂದರಃ ತ್ರಿಪುರಗಳನ್ನು ನಾಶಮಾಡಿದವನು. ನಿಶಾಚರಃ ರಾತ್ರಿ

ನಿಶಾಚರಃ ಪ್ರೇತಚಾರಿ ಮಹಾಶಕ್ತಿ ರ್ಮಹಾದ್ಯುತಿಃ ।
ಅನಿರ್ದೇಶ್ಯ ವಪುಃ ಶ್ರೀಮಾನ್ ಸರ್ವಹಾರ್ಯ ಮಿತೋ ಗತಿಃ ॥೬೯॥

ಬಹುಶ್ರುತೋ ಬಹುಮಯೋ ನಿಯತಾತ್ಮಾ ಭವೋದ್ಭವಃ ।
ಓಜಸ್ತೇಜೋ ದ್ಯುತಿಕರೋ ನರ್ತಕಃ ಸರ್ವಕಾಮುಕಃ ॥೭೦॥

ನೃತ್ಯ ಪ್ರಿಯೋ ನೃತ್ಯ ನೃತ್ಯಃ ಪ್ರಕಾಶಾತ್ಮಾ ಪ್ರತಾಪನಃ ।
ಬುದ್ಧಃ ಸ್ಪಷ್ಟಾಕ್ಷರೋ ಮಂತ್ರಃ ಸನ್ಮಾನಃ ಸಾರಸಂಪ್ಲವಃ ॥೭೧॥

ಯುಗಾದಿ ಕೃ ದ್ಯುಗಾವರ್ತೋ ಗಂಭೀರೋ ವೃಷವಾಹನಃ ।
ಇಷ್ಟೋ ವಿಶಿಷ್ಟಃ ಶಿಷ್ಟೇಷ್ಟಃ ಶರಭಃ ಶರಭೋ ಧನುಃ ॥೭೨॥

---

ಯಲ್ಲಿ ಸಂಚಾರ ಮಾಡುವವನು. ಪ್ರೇತಚಾರಿ ಮಹಾಶಕ್ತಿಃ ಪ್ರೇತವನ್ನು ವಾಹನವನ್ನಾಗಿ ಮಾಡಿಕೊಂಡು ಸಂಚಾರಮಾಡುವ ಶಕ್ತಿರೂಪವುಳ್ಳವನು. (ಚಾಮುಂಡಾಸ್ವರೂಪನೆಂದರ್ಥವು) ಮಹಾದ್ಯುತಿಃ ಹೆಚ್ಚಾದ ಕಾಂತಿಯುಳ್ಳವನು, ಅನಿರ್ದೇಶ್ಯವಪುಃ ನಿರ್ದೇಶಮಾಡಲು ಅಸಾಧ್ಯವಾದ ದೇಹವುಳ್ಳವನು. ಶ್ರೀಮಾನ್ ನಿತ್ಯ ಶ್ರೀಯುಕ್ತನು. ಸರ್ವಹಾರ್ಯಮಿತಃ ಮಹಾಕಾಲಕ್ಕಿಂತಲೂ ಹೆಚ್ಚಾದ ಪರಿಮಾಣಉಳ್ಳವನು. ಗತಿಃ ಸನ್ಮಾರ್ಗರೂಪನು. ಬಹುಶ್ರುತಃ ಶಾಸ್ತ್ರಗಳ ನಿರ್ಮಾತೃವು. ಬಹುಮಯಃ ಅಪಾರವಾದ ಸುಖವನ್ನು ಕೊಡುವವನು. ನಿಯತಾತ್ಮಾ ಮನಸ್ಸನ್ನು ನಿರೋಧಮಾಡಿದವರಿಂದ ತಿಳಿಯಲು ಶಕ್ಯನು. ಭವೋದ್ಭವಃ ಸಂಸಾರ ಕಾರಣನು. ಓಜಸ್ತೇಜೋದ್ಯುತಿಕರಃ ಬಲ, ಶೌರ್ಯ, ಪ್ರಕಾಶ ಇವುಗಳನ್ನು ಉಂಟುಮಾಡುವವನು. ನರ್ತಕಃ ಜಗತ್ತಿನ ಸೂತ್ರಧಾರನು. ಸರ್ವಕಾಮಃ ಪ್ರಪಂಚವನ್ನು ಸೃಷ್ಟಿಸಲು ಇಚ್ಛೆಯುಳ್ಳವನು " ಸೋಽಕಾಮಯತ " ಎಂದು ಶ್ರುತಿಯಲ್ಲಿ ಹೇಳಿರುತ್ತದೆ.

೭೧–೭೫. ನೃತ್ಯಪ್ರಿಯಃ ನರ್ತನದಲ್ಲಿ ಪ್ರೀತಿಯುಳ್ಳವನು. ನೃತ್ಯನೃತ್ಯಃ ನೃತ್ಯಪ್ರವರ್ತಕನು. ಪ್ರಕಾಶಾತ್ಮಾ ಪ್ರಕಾಶಸ್ವರೂಪನು. ಪ್ರತಾಪನಃ ಸಂತಾಪವನ್ನುಂಟುಮಾಡುವವನು. ಬುದ್ಧಸ್ಪಷ್ಟಾಕ್ಷರಃ ವೇದಜ್ಞರಾದ ಸನಕಾದಿಗಳಿಂದ ತಿಳಿಯಲ್ಪಡುವ ನಿತ್ಯಬ್ರಹ್ಮಸ್ವರೂಪನು. ಮಂತ್ರಃ ಗಾಯತ್ರ್ಯಾದಿ ಮಂತ್ರಗಳ ಸ್ವರೂಪನು. ಸನ್ಮಾನಃ ಸತ್ಪುರುಷರಿಗೆ

**ಅಪಾಂನಿಧಿ ರಧಿಷ್ಠಾನವಿಜಯೋ ಜಯಕಾಲವಿತ್ ।**
**ಪ್ರತಿಷ್ಠಿತಃ ಪ್ರಮಾಣಜ್ಞೋ ಹಿರಣ್ಯ ಕವಚೋ ಹರಿಃ ॥೭೩॥**
**ವಿರೋಚನಃ ಸುರಗಣೋ ವಿದ್ಯೇಶೋ ವಿಬುಧಾಶ್ರಯಃ ।**
**ಬಾಲರೂಪೋ ಬಲೋನ್ಮಾಥೀ ವಿವರ್ತೋ ಗಹನೋ ಗುರುಃ ॥೭೪॥**
**ಕರಣಂ ಕಾರಣಂ ಕರ್ತಾ ಸರ್ವಬಂಧ ವಿಮೋಚನಃ ।**
**ವಿದ್ವತ್ತಮೋ ವೀತಭಯೋ ವಿಶ್ವಭರ್ತಾ ನಿಶಾಕರಃ ॥೭೫॥**

---

ಪ್ರಮಾಣ ಭೂತನು. ಸಾರಸಂಪ್ಲವಃ ಸಂಸಾರಸಾಗರದಿಂದ ತಾರಕನು. ಯುಗಾದಿಕೃತ್ ಯುಗಗಳ ಆದಿಯನ್ನು ಮತ್ತು ಕಾಲಗಳವಿಭಾಗಗಳನ್ನು ಸೃಷ್ಟಿಸುವವನು. ಯುಗಾವರ್ತಃ ಯುಗಗಳ ಮರಳುವಿಕೆಗೂ ಕಾರಣ ನಾಗಿರುವವನು. ಗಂಭೀರಃ ಮೇಲಿನ ಮತ್ತು ಕೆಳಗಿನ ತುದಿ ಇಲ್ಲದೆ ಅನಂತನಾಗಿರುವುದರಿಂದ ವಿಷ್ಣುವಿನಿಂದಲೂ ತಿಳಿಯಲು ಅಸಾಧ್ಯನು. ವೃಷವಾಹನಃ ವೃಷಭವನ್ನು ವಾಹನವನ್ನಾಗಿ ಉಪಯೋಗಿಸುವವನು. ಧರ್ಮವೇ ವಾಹನವಾಗಿ ಉಳ್ಳವನು. ಇಷ್ಟಃ ಸರ್ವಪ್ರಿಯನು. ವಿಶಿಷ್ಟಃ ಸರ್ವಶ್ರೇಷ್ಠನು. ಶಿಷ್ಟೇಷ್ಟಃ ಸತ್ಪುರುಷರಿಗೆ ಪ್ರಿಯನಾದವನು. ಶರಭಃ ಶರಭವೆಂಬ ಹೆಸರುಳ್ಳ ಮೃಗ ಪಕ್ಷಿಸ್ವರೂಪನು. ಶರಭಃ ಬಾಣವನ್ನು ಧರಿಸಿರುವವನು. ಧನುಃ ಧನುಸ್ಸಿನ ಸ್ವರೂಪನು. ಅಪಾಂನಿಧಿಃ ಗಂಗೋದಕ ಮುಂತಾದ ನದಿಗಳ ಜಲಕ್ಕೆ ಸ್ಥಾನಭೂತನು ಅಧಿಷ್ಠಾನ ವಿಜಯಃ ಲಿಂಗ ಶರೀರದ ನಾಶಕನು. ಜಯಕಾಲವಿತ್ ಜಯದ ಕಾಲವನ್ನು ತಿಳಿದಿರುವವನು. ಪ್ರತಿಷ್ಠಿತಃ ಜಗತ್ತಿನ ಸ್ಥಿತಿಗೆ ಕಾರಣ ಭೂತನು. ಪ್ರಮಾಣಜ್ಞಃ ಬ್ರಹ್ಮಾಂಡದ ಪರಿಮಾಣವನ್ನು ತಿಳಿದಿರುವವನು. ಹಿರಣ್ಯಕವಚಃ ಸುವರ್ಣದ ಕವಚವುಳ್ಳವನು. ಹರಿಃ ಪಾಪನಾಶಕನು. ವಿರೋಚನಃ ಸಕಲವಸ್ತುಗಳಿಗಿಂತಲೂ ಅತಿಶಯವಾದ ಪ್ರಕಾಶ ಉಳ್ಳವನು. ಸುರಗಣಃ ದೇವತೆಗಳೇ ಸೇವಕರಾಗಿ ಇರತಕ್ಕವನು. ವಿದ್ಯೇಶಃ ವಿದ್ಯೆಯಸಿಯಾಮಕನು. ವಿಬುಧಾಶ್ರಯಃ ಜ್ಞಾನಿಗಳ ಆಶ್ರಯನು. ಬಾಲರೂಪಃ ಮಗುವಿನ ರೂಪವನ್ನೂ ಧರಿಸಿರುವವನು. ಬಲೋನ್ಮಾಥೀ ರಾಕ್ಷಸರ ಸೈನ್ಯಗಳನ್ನು ಸಂಹರಿಸುವವನು. ವಿವರ್ತಃ ಜಗದ್ಭ್ರಮಕಾರಣದ ಹಿತೋಪದೇಶಕನು. ಕರಣಃ ಜಗತ್ತಿಗೆ

**ವ್ಯವಸಾಯೋ ವ್ಯವಸ್ಥಾನಃ ಸ್ಥಾನದೋ ಜಗದಾದಿಜಃ ।**
**ದುಂದುಭೋ ಲಲಿತೋ ವಿಶ್ವೋ ಭವಾತ್ಮಾತ್ಮನಿ ಸಂಸ್ಥಿತಃ ॥೭೬॥**
**ವಿಶ್ವೇಶ್ವರೋ ವೀರಭದ್ರೋ ವೀರಹಾ ವೀರಭೃಗ್ವಿರಾಟ್ ।**
**ವೀರ ಚೂಡಾಮಣಿ ರ್ವೇತ್ತಾ ತೀವ್ರನಾದೋ ನದೀಧರಃ ॥೭೭॥**

---

ಮುಖ್ಯ ಕಾರಣವಾದವನು. ಕಾರಣಃ ನಿಮಿತ್ತಕಾರಣವಾದ ಬುದ್ಧಿ ರೂಪನು. ಕರ್ತಾ ಸರ್ವಲೋಕಗಳಿಗೂ ಉತ್ಪಾದಕವಾದ ಅಹಂಕಾರ ಸ್ವರೂಪನು. ಸರ್ವಬಂಧ ವಿಮೋಚನಃ ಸಂಸಾರಬಂಧದಿಂದ ರಹಿತನಾದ ಪರಮಾತ್ಮ ಸ್ವರೂಪನು. ವಿದ್ವತ್ತಮಃ ವಿದ್ವಾಂಸರಲ್ಲಿ ಶ್ರೇಷ್ಠನು. ವೀತ ಭಯಃ ಭಯರಹಿತನು. ವಿಶ್ವಭರ್ತಾ ಜಗದ್ರಕ್ಷಕನು. ನಿಶಾಕರಃ ಪ್ರಲಯವನ್ನುಂಟುಮಾಡುವವನು.

೭೬–೮೦. ವ್ಯವಸಾಯಃ ಅತಿಶಯವಾದ ತತ್ವನಿಶ್ಚಯವನ್ನುಂಟು ಮಾಡುವವನು. ವ್ಯವಸ್ಥಾನಃ ಪುನರಾವೃತ್ತಿರಹಿತವಾದ ಸ್ಥಾನವುಳ್ಳ ವನು. ಸ್ಥಾನದಃ ಇಂದ್ರಾದಿ ದೇವತೆಗಳಿಗೆ ಅವರವರ ಪದವಿಯ ಸ್ಥಾನ ವನ್ನು ಕೊಡುವವನು. ಜಗದಾದಿಜಃ ಜಗತ್ತಿನ ಆದಿಯಲ್ಲಿ ಹುಟ್ಟಿದ ಹಿರಣ್ಯಗರ್ಭನಿಗೂ ಮಹತ್ತತ್ವಕ್ಕೂ ಜನಕನು. ದುಂದುಭಃ ದುಂದುಭಿಯನ್ನು ಕೊಂದಿರುವವನು. ರಾಜಚಿನ್ಹೆಯಾದ ನಗಾರಿಗಳುಳ್ಳ ನರೇಂದ್ರರ ಸ್ವರೂಪನೆಂದರ್ಥವು. ಭಗವದ್ಗೀತೆಯಲ್ಲಿ "ನರಾಣಾಂಚ ನರೇಂದ್ರೋಽಹಂ" ಎಂದು ಹೇಳಿರುತ್ತದೆ. ಲಲಿತಃ ಸರ್ವಸುಂದರನು. ವಿಶ್ವಃ ಜಗದ್ರೂಪನು. ಭವಾತ್ಮಾಽತ್ಮನಿ ಸಂಸ್ಥಿತಃ ಪಾಂಚಭೌತಿಕ್ವ ವಾದ ದೇಹವುಳ್ಳ ಜೀವರಲ್ಲಿ ಅಂತ್ಯರ್ಯಾಮಿಯಾಗಿರುವವನು. ವೀರೇ ಶ್ವರಃ ವೀರರಲ್ಲಿ ಶ್ರೇಷ್ಠನಾದವನು. ವೀರಭದ್ರಃ ವೀರಭದ್ರನೆಂಬ ಹೆಸ ರುಳ್ಳಗಣೇಶ್ವರನ ಸ್ವರೂಪನು. ವೀರಘ್ನಃ ದುಷ್ಟರಾದ ವೀರರನ್ನು ಸಂಹರಿಸುವವನು. ವೀರಭೃದ್ವಿರಾಟ್ ವೀರರ ರಕ್ಷಣೆಗೆ ಕಾರಣನು ಮತ್ತುಸಾರ್ವಭೌಮನು. ವೀರಶಿಖಾಮಣಿಃ ವೀರರಿಗೆಲ್ಲರಿಗೂ ಶಿರೋ ರತ್ನಪ್ರಾಯನಾದವನು. ವೇತ್ತಾ ಸರ್ವಜ್ಞನು. ತೀವ್ರನಾದಃ ಅತಿಶಯವಾದ ಧ್ವನಿಯನ್ನುಂಟುಮಾಡುವವನು. ನದೀಧರಃ ಸಾಗರ

ಆಜ್ಞಾಧಾರ ಸ್ತ್ರಿಶೂಲೀ ಚ ಶಿಪಿವಿಷ್ಟಃ ಶಿವಾಲಯಃ ।
ವಾಲಖಿಲ್ಯೋ ಮಹಾಚಾಪಃ ತಿಗ್ಮಾಂಶು ರ್ನಿಧಿ ರವ್ಯಯಃ ॥೭೮॥
ಅಭಿರಾಮಃ ಸುಶರಣಃ ಸುಬ್ರಹ್ಮಣ್ಯಃ ಸುಧಾಪತಿಃ ।
ಮಘವಾನ್ ಕೌಶಿಕೋ ಗೋಮಾನ್ ವಿಶ್ರಾಮಃ ಸರ್ವ ಶಾಸನಃ ॥
ಲಲಾಟಾಕ್ಷೋ ವಿಶ್ವದೇಹಃ ಸಾರಃ ಸಂಸಾರ ಚಕ್ರಭೃತ್ ।
ಅಮೋಘ ದಂಡೀ ಮಧ್ಯಸ್ಥೋ ಹಿರಣ್ಯೋ ಬ್ರಹ್ಮವರ್ಚಸೀ ॥೮೦॥

---

ರೂಪನು ಮತ್ತು ಗಂಗೆಯನ್ನು ಧರಿಸಿರುವವನು. ಆಜ್ಞಾಧಾರಃ ಅವಿಚ್ಛಿನ್ನವಾದ ಆಜ್ಞೆಯುಳ್ಳವನು. ತ್ರಿಶೂಲೀ ತ್ರಿಶೂಲವನ್ನು ಧರಿಸಿದವನು. ಶಿಪಿವಿಷ್ಟಃ ರಶ್ಮಿಗಳಲ್ಲಿ ಪ್ರವೇಶಿಸಿದವನು. ಶಿವಾಲಯಃ ಪಾರ್ವತಿಯನ್ನು ಆಶ್ರಯಿಸಿರುವವನು. ವಾಲಖಿಲ್ಯಃ ವಾಲಖಿಲ್ಯನೆಂಬ ಋಷಿಯ ಸ್ವರೂಪನು. ಮಹಾಚಾಪಃ ಜನಕಮಹಾರಾಜನೂ ಪೂಜಿಸುವ ಧನುಸ್ಸನ್ನು ಹೊಂದಿರುವವನು. ತಿಗ್ಮಾಂಶುಃ ಸೂರ್ಯಸ್ವರೂಪನು. ನಿಧಿಃ ಪದ್ಮಾದಿ ನಿಧಿರೂಪನು. ಅವ್ಯಯಃ ನಾಶರಹಿತನು. ಅಭಿರಾಮಃ ಯೋಗಿಗಳಿಗೆ ಕ್ರೀಡಾಸ್ಥಾನನು. ಸುಶರಣಃ ಸರ್ವರಭಯವನ್ನು ಹೋಗಲಾಡಿಸತಕ್ಕವನು. ಸುಬ್ರಹ್ಮಣ್ಯಃ ತಪಸ್ಸೂ, ವೇದಗಳೂ, ಜ್ಞಾನ, ಇವುಗಳಿಗೆ ಹಿತಕರನು. "ತಪೋ ವಿದ್ಯಾಶ್ಚ ಸತ್ಯಂಚ ಜ್ಞಾನಂಚ ಬ್ರಹ್ಮಸಂಜ್ಞಿತಂ" ಎಂದು ಹೇಳಿರುತ್ತದೆ. ಸುಧಾಪತಿಃ ಅಮೃತಕ್ಕೆ ಸ್ವಾಮಿಯು. ಮಘವಾನ್ ಇಂದ್ರ ಸ್ವರೂಪನು. ಕೌಶಿಕಃ ಇಂದ್ರ ಸ್ವರೂಪನಾದ್ದರಿಂದಲೇ ಕೌಶಿಕನೆಂಬ ಸಂಜ್ಞೆಯುಳ್ಳವನೂ ಆಗಿರುತ್ತಾನೆ. "ಅಹಲ್ಯಾಯೈಜಾರ ಕೌಶಿಕ ಬ್ರಾಹ್ಮಣೇ" ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಗೋಮಾನ್ ವಿಶ್ವರೂಪನು. ವಿಶ್ರಾಮಃ ಜನ್ಮಮರಣಗಳಿಂದುಂಟಾಗುತ್ತಲಿರುವ ಆಯಾಸ ವಿಲ್ಲದೇ ಇರುವವನು. ಸರ್ವಶಾಸನಃ ಸಮಸ್ತರನ್ನೂ ಆಳುವವನು. ಲಲಾಟಾಕ್ಷಃ ಹಣೆಯಲ್ಲಿ ಕಣ್ಣುಳ್ಳವನು. ವಿಶ್ವದೇಹಃ ಜಗತ್ತೇ ದೇಹವಾಗುಳ್ಳವನು. ಸಾರಃ ಸ್ಥಿರನಾಗಿರುವವನು. ಸಂಸಾರ ಚಕ್ರಭೃತ್ ಸಂಸಾರಚಕ್ರವನ್ನು ಕಾಪಾಡುವವನು. ಅಮೋಘ

ಪರಮಾರ್ಥಃ ಪರಮಯಃ ಶಂಬರೋ ವ್ಯಾಘ್ರಕೋಽನಲಃ ।
ರುಚಿ ರ್ವರರುಚಿ ರ್ವಂದ್ಯೋ ವಾಚಸ್ಪತಿ ರಹಸ್ಪ(ರ್ಪ)ತಿಃ ॥೮೧॥
ರವಿ ರ್ವಿರೋಚನಃ ಸ್ಕಂಧಃ ಶಾಸ್ತಾ ವೈವ ಸ್ವತೋಽಜನಃ ।
ಯುಕ್ತಿ ರುನ್ನತ ಕೀರ್ತಿಶ್ಚ ಶಾಂತರಾಗಃ ಪರಾಜಯಃ ॥೮೨॥
ಕೈಲಾಸಪತಿ ಕಾಮಾರಿಃ ಸವಿತಾ ರವಿ ಲೋಚನಃ ।
ವಿದ್ವತ್ತಮೋ ವೀತಭಯೋ ವಿಶ್ವಹರ್ತಾ ನಿವಾರಿತಃ ॥೮೩॥
ನಿತ್ಯೋ ನಿಯತ ಕಲ್ಯಾಣಃ ಪುಣ್ಯ ಶ್ರವಣ ಕೀರ್ತನಃ ।
ದೂರಶ್ರವಾ ವಿಶ್ವಸಹೋ ಧ್ಯೇಯೋ ದುಸ್ಸ್ವಪ್ನನಾಶನಃ ॥೮೪॥

---

ದಂಡೀ ನಿರರ್ಥಕವಾಗದೇ ಇರುವ ದಂಡವನ್ನು ಧರಿಸಿರುವವನು. ಮಧ್ಯಸ್ಥಃ ಉದಾಸೀನನು. ಹಿರಣ್ಯಃ ಸುವರ್ಣರೂಪನು. ಬ್ರಹ್ಮವರ್ಚಸೀ ತಪಸ್ಸಿನಿಂದ ಉಂಟಾದ ದೀಪ್ತಿಯುಳ್ಳವನು.

೮೧–೮೪. ಪರಮಾರ್ಥಃ ಮೋಕ್ಷರೂಪ ಪುರುಷಾರ್ಥವನ್ನು ದಯಪಾಲಿಸುವವನು. ಪರಮಯಃ ಆತ್ಯಂತಿಕ ಸುಖಸ್ವರೂಪನು. ಶಂಬರಃ ಜಲಸ್ವರೂಪನು. ವ್ಯಾಘ್ರಕಃ ವ್ಯಾಘ್ರನೆಂಬ ರಾಕ್ಷಸನನ್ನು ಸಂಹರಿಸಿರುವವನು. ಅನಲಃ ಅಗ್ನಿಸ್ವರೂಪನು. ರುಚಿಃ ಕಾಂತಿಸ್ವರೂಪನು. ವರರುಚಿಃ ಅತಿಶಯವಾದ ಕಾಂತಿಯನ್ನು ಕೊಡುವವನು. ವಂದ್ಯಃ ಸರ್ವರಿಗೂ ನಮಸ್ಕಾರಾರ್ಹನು. ವಾಚಸ್ಪತಿಃ ಸಮಸ್ತ ವೇದಗಳಿಗೂ ಸ್ವಾಮಿಯು. "ಈಶಾನಃ ಸರ್ವವಿದ್ಯಾನಾಂ" ಎಂದು ಶ್ರುತಿಯಿರುತ್ತದೆ. ಅಹರ್ಪತಿಃ ದಿವಸಗಳಿಗೆ ಒಡೆಯನು ರವಿಃ ಸೂರ್ಯಸ್ವರೂಪನು. ವಿರೋಚನಃ ಬ್ರಹ್ಮಾಂಡವನ್ನು ಪ್ರಕಾಶಪಡಿಸುವವನು. ಸ್ಕಂಧಃ ಸಮುದಾಯ ಸ್ವರೂಪನು; ಶಾಸ್ತಾವೈವಸ್ವತಃ ಯಮಸ್ವರೂಪನು. ಅಜನಃ ಉತ್ಪತ್ತಿರಹಿತನು. ಯುಕ್ತಿಃ ಸಮಾಧಿಸ್ವರೂಪನು. ಉನ್ನತಕೀರ್ತಿಃ ಶ್ರೇಷ್ಠವಾದ ಕೀರ್ತಿಯನ್ನು ದಯಪಾಲಿಸುವವನು. ಶಾಂತರಾಗಃ ಸನ್ಯಾಸಿಗಳಲ್ಲಿ ಪ್ರೀತಿಯುಳ್ಳವನು. ಪರಾಜಯಃ ಸಮಸ್ತ ಶತ್ರುಗಳನ್ನೂ ಅಭಿಭವಮಾಡುವವನು. ಸಮಸ್ತರಿಗಿಂತಲೂ ಶ್ರೇಷ್ಠನೆಂದ

**ಉತ್ತಾರಕೋ ದುಷ್ಕೃತಿಹಾ ದುರ್ಧರ್ಷೋ ದುಃಸಹೋಽಭಯಃ ।**
**ಅನಾದಿ ಭೂರ್ಭುವೋ ಲಕ್ಷ್ಮೀಃ ಕಿರೀಟೀ ತ್ರಿದಶಾಧಿಪಃ ॥೮೫॥**
**ವಿಶ್ವಗೋಪ್ತಾ ವಿಶ್ವಭರ್ತಾ ಸುಧೀರೋ ರುಚಿರಾಂಗದಃ ।**
**ಜನನೋ ಜನ ಜನ್ಮಾದಿಃ ಪ್ರೀತಿಮಾನ್ನೀತಿ ಮಾನ್ನಯಃ ॥೮೬॥**
**ವಿಶಿಷ್ಟಃ ಕಾಶ್ಯಪೋ ಭಾನುಃ ಭೀಮೋ ಭೀಮ ಪರಾಕ್ರಮಃ ।**
**ಪ್ರಣವಃ ಸಪ್ತಧಾಚಾರೋ ಮಹಾಕಾಯೋ ಮಹಾಧನುಃ ॥೮೭॥**
**ಜನ್ಮಾಧಿ ಪೋ ಮಹಾದೇವಃ ಸಕಲಾಗಮ ಪಾರಗಃ ।**
**ತತ್ವಾ ತತ್ವ ವಿವೇಕಾತ್ಮಾ ವಿಭೂಷ್ಣು ರ್ಭೂತಿ ಭೂಷಣಃ ॥೮೮॥**

---

ರ್ಥವು. ಕೈಲಾಸಪತಿಕಾಮಾರಿಃ ಕೈಲಾಸಕ್ಕೆ ಪ್ರಭುವು ಮತ್ತು ಮನ್ಮಥಶತ್ರುವೂ ಆಗಿರುವವನು. ಸವಿತಾ ಜಗಜ್ಜನಕನು. ರವಿಲೋಚನಃ ಸೂರ್ಯನೇ ಕಣ್ಣಾಗುಳ್ಳವನು. ವಿದ್ವತ್ತಮಃ ವಿದ್ವಾಂಸರಿಗೆ ಅಭಿಲಾಷೆ ಪೂರ್ತಿಮಾಡುವವನು. ವೀತಭಯಃ ಭಯರಹಿತನು. ವಿಶ್ವಹರ್ತಾ ಲೋಕವನ್ನು ನಾಶಮಾಡುವವನು. ಅನಿವಾರಿತಃ ತಡೆಯಿಲ್ಲದವನು. ನಿತ್ಯಃ ಅವ್ಯಯನು. ನಿಯತ ಕಲ್ಯಾಣಃ ಸದಾ ಕಲ್ಯಾಣವನ್ನುಂಟುಮಾಡುವವನು. ಪುಣ್ಯ ಶ್ರವಣಕೀರ್ತನಃ ಪುಣ್ಯಕರವಾದ ಶ್ರವಣವನ್ನೂ ಮತ್ತು ಕೀರ್ತನಗಳನ್ನೂ ಕೊಡುವವನು. ದೂರಶ್ರವಾಃ ದೂರ ದೇಶದಲ್ಲಿರುವ ವಸ್ತುಗಳನ್ನೂ ಸಾಕ್ಷಾತ್ಕರಿಸುವವನು. ವಿಶ್ವಸಹಃ ಸರ್ವರನ್ನೂ ಕ್ಷಮಿಸುವವನು. ಧ್ಯೇಯಃ ಧ್ಯಾನಾರ್ಹನು ದುಃಸ್ವಪ್ನನಾಶಃ ಕೆಟ್ಟಸ್ವಪ್ನಗಳಸ್ಮೃತಿ ಮಾತ್ರದಿಂದ ನಾಶಮಾಡುವವನು. ಉತ್ತಾರಕಃ ಸಂಸಾರ ಸಾಗರವನ್ನು ದಾಟಿಸುವವನು. ದುಷ್ಕೃತಿಘ್ನಃ ಪಾಪಗಳನ್ನು ನಾಶಮಾಡುವವನು. ದುರ್ಧರ್ಷಃ ಅಜೇಯನು. ದುಃಸ್ಸಹಃ ರಾಕ್ಷಸರ ಅಪರಾಧಗಳನ್ನು ಸಹಿಸದೇ ಇರುವವನು. ಅಭಯಃ ಭಯವನ್ನು ದೂರಮಾಡುವವನು. ಅನಾದಿಃ ಆದಿಯಿಲ್ಲದವನು. ಭೂಃ ಪೃಥಿವಿಯ ಸ್ವರೂಪನು ಭುವೋಲಕ್ಷ್ಮೀಃ ಪೃಥಿವಿಯ ಶೋಭನಸ್ವರೂಪನು. ಕಿರೀಟತ್ರಿದಶಾಧಿಪಃ ಕಿರೀಟವನ್ನು ಧರಿಸಿರುವವನು ಸಮಸ್ತದೇವತೆಗಳಿಗೂ ಅಧಿಪತಿಯು.

೮೬–೯೦. ವಿಶ್ವಗೋಪ್ತಾ ಜಗದ್ರಕ್ಷಕನು. ವಿಶ್ವಭರ್ತಾ ಜಗತ್ತಿನ ಪೋಷಕನು. ಸುಧೀರಃ ನಿರ್ಭಯನುಃ ರುಚಿರಾಂಗದಃ ರಮಣೀಯ

**ಋಷಿಃ ಬ್ರಾಹ್ಮಣ ವಿಜ್ಜಿಷ್ಣುಃ ಜನ್ಮಮೃತ್ಯು ಜರಾತಿಗಃ ।**
**ಯಜ್ಞೋ ಯಜ್ಞಪತಿ ರ್ಯಜ್ವಾ ಯಜ್ಞಾಂತೋsಮೋಘ**
**ವಿಕ್ರಮಃ ॥೮೯॥**

**ಮಹೇಂದ್ರೋ ದುರ್ಭರಃ ಸೇನೀ ಯಜ್ಞಾಂಗೋ ಯಜ್ಞವಾಹನಃ ।**
**ಪಂಚಬ್ರಹ್ಮ ಸಮುತ್ಪತ್ತಿಃ ವಿಶ್ವೇಶೋ ವಿಮಲೋದಯಃ ॥೯೦॥**

---

ವಾದ ಭುಜಕೀರ್ತಿಯುಳ್ಳವನು ಜನನಃ ಜಗದುತ್ಪತ್ತಿಯನ್ನುಂಟುಮಾಡುವವನು. ಜನಜನ್ಮಾದಿಃ ಸಮಸ್ತರನ್ನೂ ಸೃಷ್ಟಿಸುವವನು. "ಯತೋ ವಾಇಮಾನಿ ಭೂತಾನಿ ಜಾಯಂತೆ" ಎಂದು ಶ್ರುತಿಯು ಹೇಳಿರುತ್ತದೆ. ಪ್ರೀತಿಮಾನ್ ನಿತ್ಯ ಪ್ರೀತಿಯುಳ್ಳವನು. ನೀತಿಮಾನ್ ನಿತ್ಯ ನೀತಿ ಯುಕ್ತನು. ನಯಃ ನ್ಯಾಯಸ್ವರೂಪನು. ವಿಶಿಷ್ಟ ಪ್ರಲಯ ಕಾಲದಲ್ಲಿಯೂ ಇರುವನು. ಕಾಶ್ಯಪಃ ಕಶ್ಯಪನೆಂಬ ಋಷಿಯಪುತ್ರನು. ಭಾನುಃ ಸೂರ್ಯಸ್ವರೂಪನು. ಭೀಮಃ ಭಯಂಕರನು. ಭೀಮಪರಾಕ್ರಮಃ ಭಯಂಕರವಾದ ಪರಾಕ್ರಮಉಳ್ಳವನು. ಪ್ರಣವಃ ಓಂಕಾರ ಸ್ವರೂಪನು. ಸಪ್ತಧಾಚರಃ ಆವಹಾದಿ ಏಳುವಾಯುಗಳ ರೂಪದಿಂದ ಸಂಚರಿಸುವವನು. ಮಹಾಕಾಯಃ ಅಪರಿಮಿತವಾದ ದೇಹಉಳ್ಳವನು. ಮಹಾಧನುಃ ಅಪರಿಮಿತವಾದ ಧನುಸ್ಸನ್ನು ಧರಿಸಿರುವವನು. ಜನ್ಮಾದಿಪಃ ಉತ್ಪತ್ತಿಗೆ ಕಾರಣನು. ಮಹಾದೇವಃ ದೇವತೆಗಳ ಪೂಜ್ಯತೆಗೆ ಕಾರಣನು. ಸಕಲಾಗಮ ಪಾರಂಗಮಃ ಸಮಸ್ತ ವೇದಗಳಲ್ಲಿಯೂ ಪಾರಂಗತನು. ತತ್ವಾ ತತ್ವ ವಿವೇಕಾತ್ಮಾ ಸಾರಾಸಾರಗಳ ವಿವೇಚನೆಯ ಸ್ವರೂಪನು. ವಿಭೂಷ್ಣುಃ, ಸರ್ವವ್ಯಾಪಿಯು. ಭೂತಿಭೂಷಣಃ ಅಣಿಮಾದ್ಯೈಶ್ವರ್ಯವೇ ಆಭರಣವಾಗಿ ಉಳ್ಳವನು. ಋಷಿಃ ಇಂದ್ರಿಯಗಳಿಗೆ ಅಗೋಚರವಾದ ವಸ್ತುಗಳನ್ನು ಸಾಕ್ಷಾತ್ಕರಿಸುವವನು. ಬ್ರಾಹ್ಮಣ ವಿಜ್ಜಿಷ್ಣುಃ ಬಾಹ್ಮಣರಿಗೆ ಒಳ್ಳೆಯ ಜ್ಞಾನವನ್ನು ಉಂಟುಮಾಡುವವನು. ಜನ್ಮಮೃತ್ಯುಜರಾತಿಗಃ ಜನನಮರಣ ಮುಪ್ಪುಗಳಿಲ್ಲದಿರುವವನು. ಯಜ್ಞಃ ಅಗ್ನಿಷ್ಟೋಮಾದಿ ಯಜ್ಞಸ್ವರೂಪನು. ಯಜ್ಞಪತಿಃ ಯಜ್ಞದ ಸ್ವಾಮಿಯು. ಯಜ್ವಾ ಯಜಮಾನನ ಸ್ವರೂಪನು. ಯಜ್ಞಾಂತಕಃ ಯಜ್ಞಗಳನ್ನು ಪರಿಸಮಾಪ್ತಿಮಾಡುವವನು. ಅಮೋಘವಿಕ್ರಮಃ

ಆತ್ಮ ಯೋನಿ ರ ನಾದ್ಯಂತೋ ಷಡ್ವಿಂಶ ತ್ಸಪ್ತಲೋಕ ಧೃತ್ ।
ಗಾಯತ್ರೀ ವಲ್ಲಭಃ ಪ್ರಾಂಶುಃ ವಿಶ್ವಾವಾಸಃ ಪ್ರಭಾ ಕರಃ ॥೯೧॥
ಶಿಶುರ್ಗಿರಿರತಃ ಸಮ್ರಾಟ್ ಸುಷೇಣಃ ಸುರ ಶತ್ರುಹಾ ।
ಅಮೋ ಘೋಽರಿಷ್ಟಮಥನೋ ಮುಕುಂದೋ ವಿಗತ ಜ್ವರಃ ॥೯೨॥
ಸ್ವಯಂ ಜ್ಯೋತಿ ರನು ಜ್ಯೋತಿ ರಾತ್ಮಜ್ಯೋತಿ ರಚಂಚಲಃ ।
ಪಿಂಗಲಃ ಕಪಿಲ ಶ್ಮಶ್ರುಃ ಶಾಸ್ತ್ರನೇತ್ರಃ ತ್ರಯೀ ತನುಃ ॥೯೩॥

---

ಸಫಲವಾದ ಪರಾಕ್ರಮವುಳ್ಳವನು. ಮಹೇಂದ್ರಃ ದೊಡ್ಡವನು. ಮತ್ತು ಪರಮೇಶ್ವರನೂ, ದುರ್ಭರಃ ಪ್ರಯಾಸದಿಂದ ಧ್ಯಾನಿಸಲು ಶಕ್ಯನು. ಸೇನೀ ಪ್ರಮಥಗಣಗಳ ಸೇನೆಯಿಂದ ಯುಕ್ತನಾದವನು. ಯಜ್ಞಾಂಗಃ ಯಜ್ಞಗಳೇ ಅವಯುವಗಳಾಗುಳ್ಳವನು. ಯಜ್ಞವಾಹನು ಯಜ್ಞಗಳ ಹವಿಸ್ಸನ್ನು ದೇವತೆಗಳಿಗೆ ಸಲ್ಲಿಸತಕ್ಕವನು. ಪಂಚಬ್ರಹ್ಮ ಸಮುತ್ಪತ್ತಿಃ ಸದ್ಯೋಜಾತಾದಿ ಐವರು ಬ್ರಹ್ಮರ ಉತ್ಪಾದಕನು. ವಿಶ್ವೇಶಃ ಜಗತ್ತಿನ ಸ್ವಾಮಿಯು. ವಿಮಲೋದಯಃ ಸದ್ಭಾವನೆಯನ್ನು ಉಂಟುಮಾಡುವವನು.

೯೧-೯೫. ಆತ್ಮಯೋನಿಃ ತನಗೆ ತಾನೇ ಕಾರಣನು ನಿಷ್ಕಾರಣನು. ಅನಾದ್ಯಂತಃ ಆದ್ಯಂತಗಳಿಲ್ಲದಿರುವವನು. ಷಡ್ವಿಂಶತ್ಸಪ್ತಲೋಕ ಕೃತ್ ಇಪ್ಪತ್ತೇಳು ತತ್ವಗಳನ್ನೂ ಮತ್ತು ಏಳುಲೋಕಗಳನ್ನೂ ಸೃಷ್ಟಿಮಾಡುವವನು. ಗಾಯತ್ರೀವಲ್ಲಭಃ ಗಾಯಿತ್ರೀದೇವಿಗೆ ಪ್ರೀತಿಪಾತ್ರನು. ಪ್ರಾಂಶುಃ ಸುಷುಮ್ನಾದಿ ಪ್ರಖರ ಕಿರಣಗಳನ್ನು ಹೊಂದಿರುವವನು. ವಿಶ್ವಾಸಃ ಜಗದ್ವ್ಯಾಪಕನು. ಪ್ರಭಾಕರಃ ಹೆಚ್ಚಾದ ಬೆಳಕನ್ನುಂಟುಮಾಡುವವನು. ಶಿಶುಃ ಬಾಲಸ್ವರೂಪಿಯು, (ಈ ಕಥೆಯು ಪಾರ್ವತೀಸ್ವಯಂವರದಲ್ಲಿ ಇಲ್ಲಿಯೇ ಹೇಳಿರುತ್ತದೆ.) ಗಿರಿಧರಃ ಮಂದರಾದಿಪರ್ವತಗಳಲ್ಲಿ ಪ್ರೀತಿಯುಳ್ಳವನು. ಸಮ್ರಾಷ್ಟುಣಃ ಒಳ್ಳೆಯಸೇವನೆಯಿಂದ ಕೂಡಿರುವ ಸಾರ್ವಭೌಮರಿಂದ ಯುಕ್ತನಾದವನು. ಸುರಶತ್ರುಘ್ನಃ ರಾಕ್ಷಸರನ್ನು ಸಂಹರಿಸುವವನು. ಆಮೋಘಃ ಸತ್ಯಸಂಕಲ್ಪನು. ಅರಿಷ್ಟಮಥನಃ ಭಕ್ತರ ಸಂಕಟಗಳನ್ನು ಪರಿಹರಿಸುವವನು. ಮುಕುಂದಃ ಮುಕ್ತಿ

**ಜ್ಞಾನಸ್ಕಂಧೋ ಮಹಾಜ್ಞಾನೀ ನಿರುತ್ಪತ್ತಿರುಪಪ್ಲವಃ ।**
**ಭಗೋ ವಿವಸ್ವಾನಾದಿತ್ಯೋ ಯೋಗಾಚಾರ್ಯೋ ಬೃಹಸ್ಪತಿಃ ॥೯೪॥**
**ಉದಾರಕೀರ್ತಿರುದ್ಯೋಗೀ ಸದ್ಯೋಗೀ ಸದಸನ್ಮಯಃ ।**
**ನಕ್ಷತ್ರಮಾಲೀ ರಾಕೇಶಃ ಸಾಧಿಷ್ಠಾನಃ ಷಡಾಶ್ರಯಃ ॥೯೫॥**

---

ಯನ್ನು ಕೊಡುವವನು. ವಿಗತಜ್ವರಃ ಸಂಸಾರ ತಾಪದಿಂದ ಹೊರಗಾದವನು. ಸ್ವಯಂಜ್ಯೋತಿಃ ಸ್ವಪ್ರಕಾಶಸ್ವರೂಪನು. ಅನುಜ್ಯೋತಿಃ ನಕ್ಷತ್ರಗಳು ಶಿವನನ್ನು ಅನುಸರಿಸಿ ಪ್ರಕಾಶಿಸುತ್ತವೆ. ಎಂದರೆ ಶಿವನ ಪ್ರಕಾಶದ ಸಹಾಯವಿಲ್ಲದೇ ಸ್ವತಂತ್ರವಾಗಿ ಪ್ರಕಾಶಿಸಲಾರವೆಂದು ಅರ್ಥವು. ಆತ್ಮಜ್ಯೋತಿಃ ಚೈತನ್ಯ ಸ್ವರೂಪವೇ ದೇಹವಾಗುಳ್ಳವನು. ಅಚಂಚಲಃ ಸ್ಥಿರನು. ಕೂಟಸ್ಥನೆಂದರ್ಥವು. ಪಿಂಗಲಃ ಪಿಂಗಲವರ್ಣವುಳ್ಳವನು. ಕಪಿಲಶ್ಮಶ್ರುಃ ಕಪಿಲವರ್ಣವಾದ ಮೀಸೆಯುಳ್ಳವನು. ಶಾಸ್ತ್ರನೇತ್ರತ್ರಯೀತನುಃ ವೇದಗಳೇ ಶರೀರವಾಗಿಯೂ, ನ್ಯಾಯ, ತರ್ಕ, ವ್ಯಾಕರಣ ಮುಂತಾದ ಶಾಸ್ತ್ರಗಳೇ ಕಣ್ಣುಗಳಾಗಿಯೂ, ಇರುವವನು. "ಕಾಣಾದಂಪಾಣನೀಯಂಚ ಸರ್ವಶಾಸ್ತ್ರೋಪಕಾರಕಂ" ಎಂದು ಹೇಳಿರುತ್ತಾರೆ. ಅಥವಾ ಪೂರ್ವ ಮತ್ತು ಉತ್ತರ ಮೀಮಾಂಸಾಶಾಸ್ತ್ರಗಳೇ ಕಣ್ಣಾಗಿ ಉಳ್ಳವನು. ಜ್ಞಾನಸ್ಕಂಧಃ ಜ್ಞಾನಸಮುದಾಯಸ್ವರೂಪನು. ಮಹಾ ಜ್ಞಾನೀ ಅಪರಿಚ್ಛಿನ್ನವಾದ ಜ್ಞಾನವುಳ್ಳವನು. ನಿರುತ್ಪತ್ತಿಃ ಉತ್ಪತ್ತಿ ರಹಿತನು. ಉಪಪ್ಲವಃ ರಾಹುಸ್ವರೂಪನು. ಭಗಃ ಷಡ್ಗುಣೈಶ್ವರ್ಯ ಸ್ವರೂಪನು. ವಿವಸ್ವಾನ್ ಆದಿತ್ಯಃ ರಶ್ಮಿಗಳುಳ್ಳ ಅದಿತಿಪುತ್ರನಾದ ಆದಿತ್ಯಸ್ವರೂಪನು. ಯೋಗಾಚಾರ್ಯಃ ಶುಕ್ರಸ್ವರೂಪನು. ಬೃಹಸ್ಪತಿಃ ಗುರುಸ್ವರೂಪನು. ಉದಾರಕೀರ್ತಿಃ ಉದಾರವಾದ ಕೀರ್ತಿಯುಳ್ಳವನು. ಉದ್ಯೋಗೀ—ಸರ್ವೋತ್ಕೃಷ್ಟವಾದ ಯೋಗ ಪ್ರಭಾವವುಳ್ಳವನು. ಸದ್ಯೋಗೀ ಯೋಗಿಗಳಿಗೆ ಬ್ರಹ್ಮಸ್ವರೂಪವನ್ನು ತೋರಿಸುವವನು. ಸದಸನ್ಮಯಃ ಸತ್, ಎಂದರೆ ಬ್ರಹ್ಮನೆಂದರ್ಥವು. ಅಸತ್, ಎಂದರೆ ಮಾಯೆಯೆಂದರ್ಥವು. ಈ ಉಭಯಾತ್ಮಕನು, ಎಂದರೆ ಅರ್ಧನಾರೀಶ್ವರ ಸ್ವರೂಪನೆಂದರ್ಥವು. ನಕ್ಷತ್ರಮಾಲಿಕಾ ಕೇಶಃ ನಕ್ಷತ್ರಗಳಿಂದ ಶೋಭಿಸುತ್ತಿರುವ ಚಂದ್ರನ ಸ್ವರೂಪನು. ಸಾಧಿಷ್ಠಾನಃ ಮಾಯೆಯಿಂದ ಯುಕ್ತನಾದವನು. ಷಡಾಶ್ರಯಃ ಅರಿಷಡ್ವರ್ಗಗಳಿಗೆ ಆಶ್ರಯನು.

ಪವಿತ್ರಪಾಣಿಃ ಪಾಪಾರಿಃ ಮಣಿಪೂರೋ ಮನೋಗತಿಃ ।
ಹೃತ್ಪುಂಡರೀಕ ಮಾಸೀನಃ ಶುಕ್ಲಃ ಶಾಂತೋ ವೃಷಾಕಪಿಃ ॥೯೬॥

ಅಧರ್ಮಶತ್ರು ರಕ್ಷಯ್ಯಃ ಪುರುಹೂತಃ ಪುರುಷ್ಟುತಃ ।
ವಿಷ್ಣುರ್ಗ್ರಹಪತಿಃ ಕೃಷ್ಣಃ ಸಮರ್ಥೋಽನರ್ಥನಾಶನಃ ॥೯೭॥

ಬ್ರಹ್ಮಗರ್ಭೋ ಬೃಹದ್ಗರ್ಭೋ ಧರ್ಮಧೇನುರ್ಧನಾಗಮಃ ।
ಜಗದ್ಧಿತೈಷಿ ಸುಗತಃ ಕುಮಾರಃ ಕುಶಲಾಗಮಃ ॥೯೮॥

ಹಿರಣ್ಯವರ್ಣೋ ಜ್ಯೋತಿಷ್ಮಾನ್ನಾನಾಭೂತಧರೋ ಧ್ವನಿಃ ।
ಅರೋಗೋ ನಿಯಮಾಧ್ಯಕ್ಷೋ ವಿಶ್ವಾಮಿತ್ರೋ ದ್ವಿಜೋತ್ತಮಃ ॥

---

೯೬--೧೦೦. ಪವಿತ್ರಪಾಣಿಃ ಪವಿತ್ರವಾದ ಕೈಯುಳ್ಳವನು. ಪಾಪಾರಿಃ ಪಾಪನಾಶಕನು. ಮಣಿಪೂರಃ ರತ್ನಾದಿಗಳ ಸಮುದಾಯಕ್ಕೆ ಕಾರಣನು. ಮನೋಗತಿಃ ಮನೋಮಾತ್ರಗೋಚರನು. ಹೃತ್ಪುಂಡರೀಕಂ ಆಸೀನಃ ಭಕ್ತರ ಹೃದಯ ಪುಂಡರೀಕವನ್ನು ಆಶ್ರಯಿಸಿರುವವನು. ಶುಕ್ಲಃ ಶ್ವೇತವರ್ಣನು. ಶಾಂತೋ ವೃಷಾಕಪಿಃ ಉಪಶಮ ಯುಕ್ತನಾದವನು. ಆದಕಾರಣದಿಂದಲೇ ಧರ್ಮಗಳ ಸ್ಥಾಪನೆಗೆ ಕಾರಣವಾಗಿ ಇರುವವನು. ವಿಷ್ಣುಃ ಜಗದ್ವ್ಯಾಪಿಯು, ಗ್ರಹಪತಿಃ ಸೋಮಾದಿಗ್ರಹಗಳಿಗೆ ಸ್ವಾಮಿಯು. ಕೃಷ್ಣಃ ಪಾಪ ನಾಶಕನಾದ ಶ್ರೀ ಕೃಷ್ಣಸ್ವರೂಪನು. ಸಮರ್ಥಃ ಭಕ್ತರಿಗೆ ಸಂಪೂರ್ಣವಾದ ಇಷ್ಟಾರ್ಥಗಳನ್ನು ದಯಪಾಲಿಸುವವನು. ಅನರ್ಥನಾಶಕಃ ಅನರ್ಥಗಳನ್ನು ದೂರಮಾಡುವವನು. ಅಧರ್ಮ ಶತ್ರುಃ ಅಧರ್ಮನಾಶಕನು. ಅಕ್ಷಯ್ಯಃ ನಾಶರಹಿತನು. ಪುರುಹೂತಃ ಪುರುಷ್ಟುತಃ ಯಜ್ಞದಲ್ಲಿ ಆಹ್ವಾನಿಸಲ್ಪಟ್ಟವನು. ಹೋಮಗಳಿಂದ ಆರಾಧಿಸಲ್ಪಡುವವನು. ಮತ್ತು ವೇದಗಳಲ್ಲಿ ಸ್ತೋತ್ರಕ್ಕೆ ಪಾತ್ರನಾದ ಇಂದ್ರನ ಸ್ವರೂಪನು. ಬ್ರಹ್ಮಗರ್ಭಾಯ ಬ್ರಹ್ಮನನ್ನೇ ಗರ್ಭದಲ್ಲಿ ಪಡೆದಿರುವವನು. ಬೃಹದ್ಗರ್ಭಃ ಬ್ರಹ್ಮಾಂಡವನ್ನೇ ಗರ್ಭದಲ್ಲಿ ಧರಿಸಿರುವವನು. ಧರ್ಮಧೇನುಃ ಧರ್ಮವೆಂಬ (ಆಕಳಿನಸ್ವರೂಪನು.) ಆಕಳಿಗೆ ಕಾರಣ ಭೂತನು. ಧೇನು ಎಂದರೆ ಆಗತಾನೇ ಕರುವನ್ನು ಈದಿರುವ ಆಕಳು. ಧನಾಗಮಃ ಭಕ್ತರಿಗೆ ಯಥೇಚ್ಛೆಯಾಗಿ ಧನವನ್ನು ಕೊಡುವವನು. "ಧನಂ ಚಾ ತೃಪ್ತಿಪರ್ಯಂತಂ ಶಿವಪೂಜಾವಿಧೇಃ

ಬೃಹಜ್ಜ್ಯೋತಿಃ ಸುಧಾಮಾ ಚ ಮಹಾಜ್ಯೋತಿರನುತ್ತಮಃ ।
ಮಾತಾಮಹೋ ಮಾತರಿಶ್ವಾ ನಭಸ್ವಾನ್ನಾಗಹಾರಧೃಕ್ ॥೧೦೦॥
ಪುಲಸ್ತ್ಯಃ ಪುಲಹೋಽಗಸ್ತ್ಯೋ ಜಾತೂಕರ್ಣ್ಯಃ ಪರಾಶರಃ ।
ನಿರಾವರಣಧರ್ಮಜ್ಞೋ ವಿರಿಂಚೋ ವಿಷ್ಟರಶ್ರವಾಃ ॥೧೦೧॥
ಆತ್ಮಭೂರನಿರುದ್ಧೋಽತ್ರಿರ್ಜ್ಞಾನಮೂರ್ತಿರ್ಮಹಾಯಶಾಃ ।
ಲೋಕಚೂಡಾಮಣಿರ್ವೀರಃ ಚಂಡಸತ್ಯಪರಾಕ್ರಮಃ ॥೧೦೨॥

---

ಫಲಂ" ಎಂದು ಹೇಳಿರುತ್ತದೆ. ಜಗದ್ಧಿತೈಷಿ ಸುಗತಃ ಜಗತ್ಕಲ್ಯಾಣವನ್ನು ಮಾಡುವವರಿಗೆ ಗಮ್ಯಸ್ಥಾನನು. ಕುಮಾರಃ ಜಗದ್ರೂಪದಿಂದ ಕ್ರೀಡಿಸುವವನು. ಕುಶಲಾಗಮಃ ಕಲ್ಯಾಣಪ್ರಾಪ್ತಿಯನ್ನುಂಟುಮಾಡುವವನು. ಹಿರಣ್ಯವರ್ಣಃ ಸುವರ್ಣದ ಬಣ್ಣದಂತಿರುವ ಕಾಂತಿಯುಳ್ಳವನು. ಜ್ಯೋತಿಷ್ಮಾನ್ ನಿತ್ಯಕಾಂತಿಯುಕ್ತನು. ನಾನಾಭೂತಧರಃ ಅನೇಕ ಭೂತಗಳಿಗೆ ಆಶ್ರಯನು. ಧ್ವನಿಃ ಅವಿಚ್ಛಿನ್ನವಾದ ಧ್ವನಿಯ ಸ್ವರೂಪನು. ಅರೋಗಃ ಭಕ್ತರ ರೋಗವನ್ನು ಪರಿಹರಿಸುವವನು. ನಿಯಮಾಧ್ಯಕ್ಷಃ ನಿಯಮವೆಂಬ ಯೋಗಾಂಗಕ್ಕೆ ಪ್ರಭುವು. ವಿಶ್ವಾಮಿತ್ರಃ ದ್ವಿಜೋತ್ತಮಃ ವಿಶ್ವಾಮಿತ್ರನೆಂಬ ಹೆಸರುಳ್ಳ ಬ್ರಾಹ್ಮಣ ಶ್ರೇಷ್ಠಸ್ವರೂಪನು. ಬೃಹಜ್ಜ್ಯೋತಿಃ ಮಹತ್ತರವಾದ ಸೂರ್ಯರೂಪವಾದ ತೇಜಸ್ಸಿಗೆ ಕಾರಣನು. ಸುಧಾಮಾ ಶೋಭನವಾದ ತೇಜಸ್ಸಿನಿಂದ ಯುಕ್ತನು. ಮಹಾಜ್ಯೋತಿಃ ಅಪರಿಮಿತವಾದ ತೇಜಸ್ಸಿನ ಸ್ವರೂಪನು. ಅನುತ್ತಮಃ ಸಮಸ್ತರಲ್ಲಿಯೂ ಉತ್ತಮನು. ಮಾತಾಮಹಃ ಜಗಜ್ಜನನಿಯಾದ ಮಾಯೆಗೂ ಜನಕನು. ಮಾತರಿಶ್ವಾ ಅಂತರಿಕ್ಷದಲ್ಲಿ ಸಂಚರಿಸುವವನು, ವಾಯುಸ್ವರೂಪನೆಂದರ್ಥವು. ನಭಸ್ವಾನ್ ಅಂತರಿಕ್ಷವನ್ನು ತನ್ನೊಳಗೆ ಐಕ್ಯಮಾಡಿಕೊಂಡಿರುವವನು. ನಾಗಹಾರಧೃಕ್ ಹಾರರೂಪವಾದ ನಾಗರಾಜನನ್ನು ನಿರ್ಭಯವಾಗಿ ಧರಿಸುವವನು.

೧೦೧–೧೦೫. ಪುಲಸ್ತ್ಯಃ ಪುಲಸ್ತ್ಯನೆಂಬ ಹೆಸರುಳ್ಳ ಋಷಿಯ ಸ್ವರೂಪನು. ಪುಲಹಃ ಪುಲಹನೆಂಬ ಋಷಿಸ್ವರೂಪನು ಅಗಸ್ತ್ಯಃ ಅಗಸ್ತ್ಯಮುನಿಯ ಸ್ವರೂಪನು. ಜಾತೂಕರ್ಣ್ಯಃ ಜಾತೂಕರ್ಣನೆಂಬ ಮುನಿಯುಸ್ವರೂಪನು.

**ವ್ಯಾಲಕಲ್ಪೋ ಮಹಾಕಲ್ಪೋ ಮಹಾವೃಕ್ಷಃ ಕಲಾಧರಃ ।**
**ಅಲಂಕರಿಷ್ಣು ಸ್ತ್ವಚಲೋ ರೋಚಿಷ್ಣು ರ್ವಿಕ್ರಮೋತ್ತಮಃ ॥೧೦೩॥**
**ಆಶುಶಬ್ದ ಪತಿಃ ವೇಗೀ ಪ್ಲವನಃ ಶಿಖಿಸಾರಥಿಃ ।**
**ಅಸಂಸೃಷ್ಟೋಽತಿಥಿಃ ಶಕ್ರಃ ಪ್ರಮಾಥೀ ಪಾಪನಾಶನಃ ॥೧೦೪॥**

---

ಪರಾಶರಃ ಪರಾಶರಮುನಿಯ ಸ್ವರೂಪನು. ನಿರಾವರಣಧರ್ಮಜ್ಞಃ ಅಜ್ಞಾನದ ಅವರಣ ವಿಲ್ಲದಿರುವ, ಮೋಕ್ಷಸ್ವರೂಪವನ್ನು ತಿಳಿದಿರುವವನು. ವಿರಿಂಚಃ ಬ್ರಹ್ಮಸ್ವರೂಪನು. ವಿಷ್ಟರಶ್ರವಾಃ ಅಶ್ವತ್ಥ ವೃಕ್ಷದಲ್ಲಿ ವಾಸಮಾಡುವ ವಿಷ್ಣುವಿನ ಸ್ವರೂಪನೆಂದರ್ಥವು. ಆತ್ಮಭೂಃ ಮನೋಜನ್ಯನು. ಕಾಮಃ, ಪ್ರದ್ಯುಮ್ನಸ್ವರೂಪನೆಂದರ್ಥವು. ಅನಿರುದ್ಧಃ ಬಾಣಾಸುರನಿಂದ ಬಿಡುಗಡೆಯನ್ನು ಹೊಂದಿದವನು. ಅನಿರುದ್ಧನೆಂಬ ಅವತಾರವನ್ನು ತಾಳಿದವನೆಂದು ಅರ್ಥವು. ಅತ್ರಿಜ್ಞಾನಮೂರ್ತಿಃ ಅತ್ರಿಸ್ವರೂಪನೂ ಮತ್ತು ಜ್ಞಾನಸ್ವರೂಪನೂ ಕೂಡ ಆಗಿರುವವನು. ಮಹಾಯಶಾಃ ಸರ್ವಪೂಜ್ಯವಾದ ಯಶಸ್ಸುಳ್ಳವನು. ಲೋಕಚೂಡಾಮಣಿಃ ಲೋಕಗಳಿಗೆ ಶಿರೋರತ್ನಪ್ರಾಯನು. ವೀರಃ ಪರಾಜಯವನ್ನು ಹೊಂದದವನು. ಚಂಡಸತ್ಯಪರಾಕ್ರಮಃ ಚಂಡನೆಂಬ ಹೆಸರುಳ್ಳ ಗಣೇಶ್ವರನಿಗೆ ಸತ್ಯ ಪರಾಕ್ರಮಗಳನ್ನು ಕೊಟ್ಟಿರುವವನು. ವ್ಯಾಲಕಲ್ಪಃ ವಾಸುಕಿಸ್ವರೂಪನು. "ಸರ್ಪಾಣಾಮಸ್ಮಿವಾಸುಕಿಃ" ಎಂದು ಗೀತೆಯಲ್ಲಿ ಹೇಳಿರುತ್ತದೆ. ಮಹಾಕಲ್ಪಃ ಪೂಜ್ಯವಾದ ನ್ಯಾಯಕ್ಕೆ ಕಾರಣಭೂತನು. ಮಹಾವೃಕ್ಷಃ ಸಂಸಾರವೆಂಬ ವೃಕ್ಷಕ್ಕೆ ಕಾರಣಭೂತನು. ಗೀತೆಯಲ್ಲಿ "ಊರ್ಧ್ವಮೂಲಮಧಃ ಶಾಖಮಶ್ವತ್ಥಂ ಪ್ರಾಹುರವ್ಯಯಂ" ಎಂದು ಹೇಳಿರುತ್ತದೆ. ಕಲಾಧರಃ ಚಂದ್ರಕಲೆಯನ್ನು ತಲೆಯಲ್ಲಿ ಧರಿಸಿರುವವನು. ಅಲಂಕರಿಷ್ಣುಃ ಸಮಸ್ತ ಭಕ್ತರಿಗೂ ಸಾಕಾಗುವಷ್ಟು ಇಷ್ಟಾರ್ಥಗಳನ್ನು ಕೊಡುವವನು. ಅಚಲಃ ಹಿಮಾಲಯಸ್ವರೂಪನು. "ಸ್ಥಾವರಾಣಾಂ ಹಿಮಾಲಯಃ" ಎಂದು ಗೀತೆಯಲ್ಲಿ ಹೇಳಿರುತ್ತದೆ. ರೋಚಿಷ್ಣುಃ ಪ್ರಕಾಶಕಸ್ವಭಾವ ಉಳ್ಳವನು. ವಿಕ್ರಮೋತ್ತಮಃ ಶ್ರೇಷ್ಠವಾದ ಪರಾಕ್ರಮ ಉಳ್ಳವನು. ಆಶುಶಬ್ದಪತಿಃ ಜಾಗ್ರತೆಯಾಗಿ ವ್ಯಾಕರಣ ಶಾಸ್ತ್ರದಲ್ಲಿ ಪಾಂಡಿತ್ಯವನ್ನು

**ವಸುಶ್ರವಾಃ ಕವ್ಯವಾಹಃ ಪ್ರತಪ್ತೋ ವಿಶ್ವಭೋಜನಃ ।**
**ಜರ್ಯೋ ಜರಾಧಿಶಮನೋ ಲೋಹಿತಶ್ಚ ತನೂನಪಾತ್ ॥೧೦೫॥**
**ಪೃಷದಶ್ವೋ ನಭೋಯೋನಿಃ ಸುಪ್ರತೀಕಸ್ತಮಿಸ್ರಹಾ ।**
**ನಿದಾಘ ಸ್ತಪನೋ ಮೇಘಃ ಪಕ್ಷಃ ಪರಪುರಂಜಯಃ ॥೧೦೬॥**

---

ಸಂಪಾದಿಸಿ ಕೊಡುವವನು. ವೇಗೀ ಭಕ್ತರ ಕಾರ್ಯವನ್ನು ತಾಮಸಮಾಡದೆ ನೆರವೇರಿಸುವುದರಲ್ಲಿ ಆತುರತೆ ಉಳ್ಳವನು. ಪ್ಲವನಃ ಸಂಸಾರ ಸಾಗರವನ್ನು ದಾಟಿಸಲು ಉಪಯುಕ್ತವಾಗಿರುವ ತೆಪ್ಪದ ಸ್ವರೂಪನು. ಶಿಖಿಸಾರಥಿಃ ಅಗ್ನಿಯ ಪ್ರಜ್ವಲನಕ್ಕೆ ಸಹಾಯಕನು. ವಾಯುವಿನ ಸ್ವರೂಪನೆಂದರ್ಥವು. ಪಾಪನಾಶನಃ ಪಾಪವನ್ನು ನಾಶಮಾಡುವವನು. ವಸುಶ್ರವಾಃ ಮಧುರವಾದ ಮಾತುಗಳನ್ನು ಲಾಲಿಸತಕ್ಕವನು. ಕವ್ಯವಾಹಃ ಶ್ರಾದ್ಧದಲ್ಲಿ ಕೊಟ್ಟ ಹವಿಸ್ಸನ್ನು ದೇವತೆಗಳಿಗೆ ತಲಪಿಸತಕ್ಕವನು. ಅಗ್ನಿಸ್ವರೂಪನೆಂದು ಅರ್ಥವು. ಪ್ರತಪ್ತಃ ಘೋರವಾದ ತಪಸ್ಸನ್ನು ಆಚರಿಸತಕ್ಕವನು. ವಿಶ್ವಭೋಜನಃ ಲೋಕವೇ ಭೋಜನವಾಗಿರುವವನು. ಸಕಲ ಸಂಹಾರಕನೆಂದರ್ಥವು. ಜರ್ಯಃ ಅನ್ನದಸ್ವರೂಪನು. ಜರಾಧಿಶಮನಃ ಮುಪ್ಪನ್ನು ಮತ್ತು ಮನೋವ್ಯಾಧಿಯನ್ನು ನಾಶಮಾಡುವವನು. ಲೋಹಿತಃ ರಕ್ತವರ್ಣವುಳ್ಳವನು. ತನೂನಪಾತ್ ಭಕ್ತರಿಗೆ ತನ್ನ ಶರೀರವನ್ನು ದಾನಮಾಡುವವನು, ಸಾರೂಪ್ಯಮುಕ್ತಿಯನ್ನು ಅನುಗ್ರಹಿಸುವವನು.

೧೦೬. ಪೃಷದಶ್ವಃ ನೀರಿನ ಕಣಗಳನ್ನು ಅಶ್ವದಂತೆ ಹೊರುವವನು. ವಾಯುಸ್ವರೂಪನೆಂದರ್ಥವು. ನಭಃ ಅಂತರಿಕ್ಷಸ್ವರೂಪನು. ಯೋನಿಃ ಜಗದಾಕರಭೂತನು, ಸುಪ್ರತೀಕಃ ಶೋಭನವಾದ ಅವಯವಗಳುಳ್ಳವನು. ತಮಿಸ್ರಹಾ ಅಜ್ಞಾನನಾಶಕನು. ನಿದಾಘಃ ತಪನಃ ಗ್ರೀಷ್ಮರ್ತುವಿನಸ್ವರೂಪನು, ತಾಪಕಾರಕನು. ಮೇಘಃ ಪಕ್ಷಃ ಪರಪುರಂಜಯಃ ಭಕ್ತರ ಕೋರಿಕೆಗಳನ್ನು ಸಲ್ಲಿಸುವ, ಪರ್ವತಪಕ್ಷದಲ್ಲಿ ಉಂಟಾದ, ಶತ್ರುಗಳ ಪಟ್ಟಣಗಳನ್ನು ಜಯಿಸುವದೇವನು.

ಮುಖಾನಿಲಃ ಸುನಿಷ್ಪನ್ನಃ ಸುರಭಿಃ ಶಿಶಿರಾತ್ಮಕಃ ।
ವಸಂತೋ ಮಾಧವೋ ಗ್ರೀಷ್ಮೋ ನಭಸ್ಯೋ ಬೀಜವಾಹನಃ ॥
ಅಂಗಿರೋ (ರಾ) ಮುನಿರಾತ್ರೇಯೋ ವಿಮಲೋ ವಿಶ್ವವಾಹನಃ ।
ಪಾವನಃ ಪುರಜಿತ್ ಶಕ್ರ ಸ್ತ್ರಿವಿದ್ಯೋ ನರವಾಹನಃ ॥೧೦೮॥
ಮನೋಬುದ್ಧಿರಹಂಕಾರಃ ಕ್ಷೇತ್ರಜ್ಞಃ ಕ್ಷೇತ್ರಪಾಲಕಃ ।
ತೇಜೋನಿಧಿಃ ಜ್ಞಾನನಿಧಿಃ ವಿಪಾಕೋ ವಿಘ್ನಕಾರಕಃ ॥೧೦೯॥

---

೧೦೭. ಮುಖಾನಿಲಃ ಸರ್ವಪ್ರಾಣಿಗಳ ಮುಖದಲ್ಲಿಯೂ ಶ್ವಾಸೋಚ್ಛ್ವಾಸ ವಾಯುರೂಪದಿಂದ ಸಂಚರಿಸುವವನು. ಸುನಿಷ್ಪನ್ನಃ ಸಮಸ್ತ ಮಂಗಳಗಳನ್ನೂ ಉಂಟುಮಾಡುವವನು. ಸುರಭಿಃ ಯೋಗಿಗಳಿಗೆ ಕ್ರೀಡಾಸ್ಥಾನನು. ಶಿಶಿರಾತ್ಮಕಃ ಶಿಶಿರ ಋತುವಿನಸ್ವರೂಪನು. ವಸಂತೋಮಾಧವಃ ಪುಷ್ಪಗಳಲ್ಲಿ ಮಕರಂದವನ್ನುಂಟುಮಾಡುವ ವಸಂತಋತುವಿನಸ್ವರೂಪನು. ಗ್ರೀಷ್ಮ ಗ್ರೀಷ್ಮಋತುವಿನಸ್ವರೂಪನು. ನಭಸ್ಯಃ ವರ್ಷಋತುವಿನಸ್ವರೂಪನು. ಬೀಜವಾಹನಃ ಶರತ್ ಮತ್ತು ಹಿಮವಂತ ಋತುಗಳಸ್ವರೂಪನು.

೧೦೮. ಅಂಗಿರಾಃ ಅಂಗಿರಸ್ಸೆಂಬ ಮುನಿಯ ಸ್ವರೂಪನು. ಮುನಿಃ ಆತ್ರೇಯಃ ಮನನಶೀಲನಾದ ಆತ್ರೇಯ ಮುನಿಯಸ್ವರೂಪನು. ವಿಮಲಃ ಶುದ್ಧನು. ವಿಶ್ವವಾಹನಃ ಲೋಕಧಾರಕನು. ಪಾವನಃ ಪಾಪನಾಶಕನು. ಪುರುಜಿತ್ ಅನೇಕರನ್ನು ಒಬ್ಬನೇ ಜಯಿಸುವವನು. ಶಕ್ರಃ ಕರ್ತುಮಕರ್ತುಮನ್ಯಥಾಕರ್ತುಂಶಕ್ತನು. ತ್ರಿವಿದ್ಯಃ ತ್ರಿಗುಣಾತ್ಮಕವಾದ ಅವಿದ್ಯೆಗೆ ಅಧಿಷ್ಠಾನಭೂತನು. ನರವಾಹನಃ ಕುಬೇರರೂಪನು.

೧೦೯. ಮನೋ ಬುದ್ಧಿಃ ಮನಸ್ಸಿನಿಂದೊಡಗೂಡಿದ ಬುದ್ಧಿಯುಳ್ಳವನು ಮತ್ತು ಬುದ್ಧಿಯಸ್ವರೂಪನು. ಅಹಂಕಾರಃ ಅಹಂಕಾರವನ್ನುಂಟುಮಾಡುವವನು. ಕ್ಷೇತ್ರಜ್ಞಃ ಜೀವರೂಪನು. ಕ್ಷೇತ್ರಪಾಲಕಃ ಸಿದ್ಧಸ್ಥಾನಗಳನ್ನು ಕಾಪಾಡುವವನು. ತೇಜೋನಿಧಿಃ ತೇಜ

ಅಧರೋಽನುತ್ತರೋಽಜ್ಞೇಯೋಃ ಶ್ರೇಷ್ಠೋ ನಿಶ್ರೇಯಸಾಲಯಃ।
ಶೈಲೋ ನಗ ಸ್ತನು ರ್ದೇಹೋ ದಾನವಾರಿ ರರಿಂದಮಃ ॥೧೧೦॥
ಚಾರುಧೀ ರ್ಜನಕ ಶ್ಚಾರುಃ ವಿಶಲ್ಯೋ ಲೋಕಶಲ್ಯಕೃತ್ ।
ಚತುರ್ವೇದ ಶ್ಚತುರ್ಭಾವ ಶ್ಚತುರ ಶ್ಚತುರಪ್ರಿಯಃ ॥೧೧೧॥

---

ಸ್ಸುಗಳಿಗೆ ನಿಧಿಯುಸ್ವರೂಪನು. ಜ್ಞಾನನಿಧಿಃ ಜ್ಞಾನಗಳಿಗೆ ಆಶ್ರಯ ಭೂತನು. ವಿಪಾಕಃ ಸಮಸ್ತ ಕರ್ಮಗಳಿಗೆ ಫಲಗಳನ್ನು ಕೊಡುವವನು. ವಿಘ್ನಕಾರಕಃ ಸತ್ಪುರುಷರಿಗೆ ಅಡ್ಡಿಗಳನ್ನು ನಿವಾರಿಸುವ, ದುಷ್ಟರಿಗೆ ಅಡ್ಡಿಗಳನ್ನು ತಂದೊಡ್ಡುವ ಗಣೇಶ್ವರನ ಸ್ವರೂಪನು.

೧೧೦. ಅಧರಃ ಸರ್ವರಿಗೂ ಆಧಾರನು. ಅನುತ್ತರಃ ಸರ್ವ ಪ್ರಾಣಿಗಳಿಗಿಂತಲೂ ಉತ್ಕೃಷ್ಟನು. ಜ್ಞೇಯಃ ಪುಣ್ಯಶಾಲಿಗಳಿಗೆ ತಿಳಿಯಲು ಸಾಧ್ಯನು. ಜ್ಯೇಷ್ಠಃ ಸರ್ವರಿಗಿಂತಲೂ ಹಿರಿಯವನು. ನಿಶ್ರೇಯಸಾಲಯಃ ಮೋಕ್ಷಕ್ಕೆ ಸಾಧನಭೂತನು. ಶೈಲಃ ನರ್ಮದಾಲಿಂಗ ಸ್ವರೂಪನು. ನಗಃ ಶ್ರೀಶೈಲಾದಿನಗಗಳಸ್ವರೂಪನು. "ಶ್ರೀಶೈಲ ಶಿಖರಂ ದೃಷ್ಟ್ವಾ ಪುನರ್ಜನ್ಮನ ವಿದ್ಯತೇ" ಎಂದು ಹೇಳಿರುತ್ತದೆ. ತನುಃ ಅತ್ಯಂತ ಸೂಕ್ಷ್ಮನು. ದೋಹಃ ಸಕಲ ಇಷ್ಟಾರ್ಥಗಳನ್ನೂ ಪರಿಪೂರ್ಣಗೊಳಿಸುವವನು. ದಾನವಾರಿಃ ರಾಕ್ಷಸರನ್ನು ನಾಶಮಾಡುವವನು. ಅರಿಂದಮಃ ಭಕ್ತರ ಶತ್ರುಗಳನ್ನು ನಾಶಮಾಡುವವನು.

೧೧೧. ಚಾರುಧೀಃ ಜನಕಃ ಶೋಭನವಾದ ಜ್ಞಾನವುಳ್ಳ, ವಿದೇಹ ರಾಜನಾದ ಜನಕನ ಸ್ವರೂಪನು. ಚಾರು ವಿಶಲ್ಯಃ ಜ್ಞಾನಿಗಳ ದುಃಖ ವನ್ನು ಹೋಗಲಾಡಿಸತಕ್ಕವನು. ಲೋಕಶಲ್ಯಕೃತ್ ವಿಷಯ ದೃಷ್ಟಿ ಯುಳ್ಳವರ ದುಃಖವನ್ನು ಮಾಡುವವನು. ಚತುರ್ವೇದಃ ಋಗ್ವೇದವೇ ಮೊದಲಾದ ನಾಲ್ಕುವೇದಗಳ ಜನಕನು. ವೇದದಲ್ಲಿ "ಯಸ್ಯನಿಶ್ವಸಿತಂ ವೇದಾಃ" ಎಂದು ಹೇಳಿರುತ್ತದೆ. ಚತುರ್ಭಾವಃ ಧರ್ಮಾರ್ಥ ಕಾಮಮೋಕ್ಷಗಳನ್ನು ಕೊಡುವವನು. ಚತುರಃ ಕುಶಲನು. ಚತುರ ಪ್ರಿಯಃ ಚತುರರಲ್ಲಿ ಪ್ರೀತಿಯನ್ನಿಡುವವನು.

**ಆಮ್ನಾಯೋಽಥ ಸಮಾಮ್ನಾಯ ಸ್ತೀರ್ಥದೇವ ಶಿವಾಲಯಃ ।**
**ಬಹುರೂಪೋ ಮಹಾರೂಪಃ ಸರ್ವರೂಪ ಶ್ಚರಾಚರಃ ॥೧೧೨॥**
**ನ್ಯಾಯನಿರ್ವಾಹಕೋ ನ್ಯಾಯೋ ನ್ಯಾಯಗಮ್ಯೋ ನಿರಂಜನಃ ।**
**ಸಹಸ್ರಮೂರ್ಧಾ ದೇವೇಂದ್ರಃ ಸರ್ವಶಸ್ತ್ರಪ್ರಭಂಜನಃ ॥೧೧೩॥**
**ಮುಂಡೋ ವಿರೂಪೋ ವಿಕೃತೋ ದಂಡೀ ದಾಂತೋ ಗುಣೋ ತ್ತಮಃ।**
**ಪಿಂಗಲಾಕ್ಷೋಽಥ ಹರ್ಯಕ್ಷೋ ನೀಲಗ್ರೀವೋ ನಿರಾಮಯಃ ॥**

---

೧೧೨. ಆಮ್ನಾಯಃ ವೇದಗಳ ಸ್ವರೂಪನು. ಸಮಾಮ್ನಾಯಃ ಪ್ರಮಾಣಗಳಾದ ವೇದಗಳಿಗೂ ಕಾರಣಭೂತನು. ತೀರ್ಥ ದೇವ ಶಿವಾಲಯಃ ಋಷಿಗಳಿಂದ ಸೇವಿಸಲ್ಪಡುವ ತೀರ್ಥಗಳಿಗೆ ಕಲ್ಯಾಣ ವನ್ನುಂಟುಮಾಡುವವನು. ಬಹುರೂಪಃ ಅನೇಕ ರೂಪಗಳುಳ್ಳವನು. ಮಹಾರೂಪಃ ಪೂಜ್ಯವಾದ ರೂಪಉಳ್ಳವನು. ಸರ್ವರೂಪಃ ವಿಶ್ವರೂಪನು. ಚರಾಚರಃ ಚರಾಚರವಸ್ತುಗಳ ಸ್ವರೂಪನು.

೧೧೩. ನ್ಯಾಯನಿರ್ವಾಹಕಃ ಒಳ್ಳೆಯ ತಪಸ್ಸನ್ನು ಉದ್ಧರಿಸು ವವನು. ನ್ಯಾಯಃ ನೀತಿರೂಪನು. ನ್ಯಾಯಗಮ್ಯಃ ನೀತಿಯಿಂದ ತಿಳಿದು ಕೊಳ್ಳಲು ಸಾಧ್ಯನು. ನಿರಂಜನಃ ಮಾಯೆಯಸಂಬಂಧವಿಲ್ಲ ದವನು. ಸಹಸ್ರಮೂರ್ಧಾ ಅನೇಕ ಶಿರಸ್ಸುಳ್ಳವನು. ದೇವೇಂದ್ರಃ ದೇವತೆಗಳ ಸ್ವಾಮಿಯು. ಸರ್ವಶಸ್ತ್ರಪ್ರಭಂಜನಃ ಸಮಸ್ತ ಆಯುಧ ಗಳನ್ನೂ ನಾಶಮಾಡುವವನು.

೧೧೪. ಮುಂಡಃ ಕೇಶಗಳನ್ನು ತೆಗೆಸಿರುವವನು. (ಕೂದಲು ಗಳನ್ನು ಕೀಳಿಸುವುದು ಒಂದು ಬಗೆಯ ವ್ರತವಾಗಿರುವುದು.) ವಿರೂಪಃ ಸರ್ವಶ್ರೇಷ್ಠವಾದ ರೂಪ ಉಳ್ಳವನು. ವಿಕೃತಃ ವಿಲಕ್ಷಣವಾದ ಕೃತಕವಾದ ರೂಪವುಳ್ಳವನು. ದಂಡೀ ಕಾಲದಂಡಧಾರಿಯು. ದಾಂತಃ ಜಿತೇಂದ್ರಿಯನು. ಗುಣೋತ್ತಮಃ ಉತ್ತಮಗುಣಗಳನ್ನು ಕೊಡತಕ್ಕವನು. ಪಿಂಗಲಾಕ್ಷಃ ಪಿಂಗಳ ವರ್ಣವಾದ ಕಣ್ಣುಗಳಿಂದ ಯುಕ್ತನಾದವನು. ಹರ್ಯಕ್ಷಃ ವಿಷ್ಣುವಿನ ಕಣ್ಣಿನ ಪೂಜೆಗೆ ಪಾತ್ರನು. ನೀಲ

**ಸಹಸ್ರಬಾಹುಃ ಸರ್ವೇಶಃ ಶರಣ್ಯಃ ಸರ್ವಲೋಕಭೃತ್ ।**
**ಪದ್ಮಾಸನಃ ಪರಂಜ್ಯೋತಿಃ ಪರಾವರಪರಂಫಲಃ ॥೧೧೫॥**
**ಪದ್ಮಗರ್ಭೋ ಮಹಾಗರ್ಭೋ ವಿಶ್ವಗರ್ಭೋ ವಿಚಕ್ಷಣಃ ।**
**ಪರಾವರಜ್ಞೋ ಬೀಜೇಶಃ ಸುಮುಖಃ ಸುಮಹಾಸ್ವನಃ ॥೧೧೬॥**

---

ಗ್ರೀವಃ ಕಪ್ಪಾಗಿರುವ ಕುತ್ತಿಗೆಯುಳ್ಳವನು. ನಿರಾಮಯಃ ವ್ಯಾಧಿಗಳನ್ನು ಪರಿಹರಿಸುವವನು. "ಭಿಷಕ್ತಮಂ ತ್ವಾಭಿಷಜಾಂ ಶೃಣೋಮಿ" ಎಂದು ವೇದದಲ್ಲಿ ಹೇಳಿರುತ್ತದೆ.

೧೧೫. ಸಹಸ್ರಬಾಹುಃ ಸರ್ವೇಶಃ ಅನೇಕತೋಳುಗಳುಳ್ಳವನು ಮತ್ತು ನಿಖಿಲರಿಗೂ ಸ್ವಾಮಿಯು. ಶರಣ್ಯಃ ಶರಣು ಹೊಕ್ಕವರನ್ನು ರಕ್ಷಿಸುವವನು. ಸರ್ವಲೋಕಭೃತ್ ಸಮಸ್ತಲೋಕಗಳನ್ನು ಧರಿಸಿರುವವನು. ಪದ್ಮಾಸನಃ ಹೃದಯಕಮಲವೇ ಆಸನವಾಗುಳ್ಳವನು. ಪರಂಜ್ಯೋತಿಃ ಸರ್ವೋತ್ಕೃಷ್ಟವಾದ ತೇಜಸ್ಸನ್ನು ಹೊಂದಿರುವವನು. ಪರಾವರ ಪರಂಫಲಃ ಐಹಿಕ ಮತ್ತು ಆಮುಷ್ಮಿಕ ಫಲಗಳಿಗಿಂತಲೂ ಅತಿರಿಕ್ತವಾದ ಮಿಗಿಲಾದ ಮೋಕ್ಷಸುಖವನ್ನೂ ಕೊಡುವವನು.

೧೧೬–೧೨೦. ಪದ್ಮಗರ್ಭಃ ಲೋಕಗಳ ಉತ್ಪತ್ತಿಗೆ ಕಾರಣಭೂತವಾದ ವೀರ್ಯವುಳ್ಳವನು. ಮಹಾಗರ್ಭಃ ವಿರಾಟ್‌ಸ್ವರೂಪಕ್ಕೆ ಕಾರಣಭೂತನು. ವಿಶ್ವಗರ್ಭಃ ಗರ್ಭದಲ್ಲಿ ಜಗತ್ತನ್ನು ಧರಿಸಿರುವವನು. ವಿಚಕ್ಷಣಃ ಮೂಕನನ್ನೂ ವಾಚಾಲಿಯನ್ನಾಗಿ ಮಾಡುವ ಸಾಮರ್ಥ್ಯವುಳ್ಳವನು. ಬುದ್ಧಿವಂತನೆಂದರ್ಥವು. ಪರಾವರಜ್ಞಃ ಭೂತ ಭವಿಷ್ಯದ್ವರ್ತಮಾನ ವಿಷಯಗಳನ್ನು ತಿಳಿಯುವನು. ಬೀಜೇಶಃ ಸಂಸಾರಕ್ಕೆ ಕಾರಣವಾದ ಅಹಂಕಾರ ತತ್ವದ ನಿಯಾಮಕನು. ಸುಮುಖಃ ಶೋಭನವಾದ ಮುಖವುಳ್ಳವನು. ಗಣೇಶಸ್ವರೂಪನೆಂದರ್ಥವು. ಸಮಹಾಸ್ವನಃ ಗಂಭೀರವಾದ ನಾದ ಉಳ್ಳವನು. ದೇವಾಸುರಗುರುಃ ಇಂದ್ರಾದಿ ದೇವತೆಗಳಿಗೂ ಮತ್ತು ಹಿರಣ್ಯಕಶಿಪುವೇ ಮುಂತಾದ ರಾಕ್ಷಸರಿಗೂ ಹಿತೋಪದೇಶಕನಾದವನು. ಮತ್ತು ಈ ಜಗತ್ತಿನ ಸೃಷ್ಟಿಯೇ ಮುಂತಾದ ಲೀಲೆಯನ್ನು ಅಭಿನಯಿಸುವವನು. ದೇವಾಸುರನಮಸ್ಕೃತಃ ದೇವತೆಗಳಿಗೂ

ದೇವಾಸುರಗುರು ರ್ದೇವೋ ದೇವಾಸುರನಮುಸ್ಕೃತಃ ।
ದೇವಾಸುರಮಹಾಮಾತ್ರೋ ದೇವಾಸುರಮಹಾಶ್ರಯಃ ॥೧೧೭॥
ದೇವಾದಿದೇವೋ ದೇವರ್ಷಿ ರ್ದೇವಾಸುರವರಪ್ರದಃ ।
ದೇವಾಸುರೇಶ್ವರೋ ದಿವ್ಯೋ ದೇವಾಸುರಮಹೇಶ್ವರಃ ॥೧೧೮॥
ಸರ್ವದೇವಮಯೋಽಚಿಂತ್ಯೋ ದೇವತಾತ್ಮಾತ್ಮಸಂಭವಃ ।
ಈಡ್ಯೋಽನೀಶಃ ಸುರವ್ಯಾಘ್ರೋ ದೇವಸಿಂಹೋ ದಿವಾಕರಃ ॥

---

ಮತ್ತು ರಾಕ್ಷಸರಿಗೂ ನಮಸ್ಕಾರಾರ್ಹನು. ದೇವಾಸುರಮಹಾಮಾತ್ರಃ ಮದಾಂಧರಾದ ದೇವತೆಗಳನ್ನೂ ಮತ್ತು ರಾಕ್ಷಸರುಗಳನ್ನೂ ನಿಗ್ರಹ ಮಾಡುವವನು. ದೇವಾಸುರ ಮಹಾಶ್ರಯಃ ದೇವತೆಗಳಿಗೂ ಮತ್ತು ರಾಕ್ಷಸರಿಗೂ ಆಶ್ರಯವನ್ನು ಕೊಡುವವನು. ದೇವಾದಿದೇವಃ ದೇವತೆಗಳಿಗೆಲ್ಲರಿಗೂ ಕಾರಣಭೂತರಾದ ಬ್ರಹ್ಮ, ವಿಷ್ಣು, ಮಹೇಶ್ವರರಿಗೂ ಕಾರಣಭೂತನು ದೇವರ್ಷಿಃ ದೇವತೆಗಳ ಇಂದ್ರಿಯಗಳಿಗೆ ಅಗೋಚರವಾದದ್ದನ್ನೂ ಗೋಚರವಾಗುವಂತೆ ಮಾಡುವವನು. ದೇವಾಸುರವರಪ್ರದಃ ದೇವತೆಗಳಿಗೂ ರಾಕ್ಷಸರಿಗೂ ಇಷ್ಟಾರ್ಥಗಳನ್ನು ಕೊಡುವವನು. ದೇವಾಸುರೇಶ್ವರಃ ದೇವತೆಗಳಿಗೂ ಮತ್ತು ರಾಕ್ಷಸರಿಗೂ ಪ್ರಭುಶಕ್ತಿಯನ್ನು ಕೊಟ್ಟಿರುವವನು. ದಿವ್ಯಃ ಸ್ವಪ್ರಕಾಶಸ್ವರೂಪನು, ನಿರ್ವಿಕಾರನು. ದೇವಾಸುರಮಹೇಶ್ವರಃ ದೇವತೆಗಳಿಗೂ ಮತ್ತು ರಾಕ್ಷಸರಿಗೂ ದೊಡ್ಡ ಅಧಿಪತಿಯಾಗಿ ಪೂಜ್ಯನು. ಸರ್ವದೇವಮಯಃ ಸಮಸ್ತ ದೇವತೆಗಳಸ್ವರೂಪನು. ಆತ್ಮಸಂಭವಃ ತನ್ನಿಂದಲೇ ತಾನು ಉಂಟಾಗಿರುವವನು. ಜೀವಾತ್ಮರಿಗೆ ಕಾರಣಭೂತನು. ಈಡ್ಯಃ ಸ್ತೋತ್ರಾರ್ಹನು. ಅನೀಶಃ ನಿಯಾಮಕನಿಲ್ಲದೇ ಇರುವವನು. (ತಾನು ಸರ್ವರಿಗೂ ನಿಯಾಮಕನಾಗಿರುವವನು. ಆದರೆ ತನಗೆ ಯಾರೂ ನಿಯಾಮಕರಿಲ್ಲವೆಂದರ್ಥವು.) ಸುರವ್ಯಾಘ್ರಃ ದೇವತೆಗಳಲ್ಲಿ ವ್ಯಾಘ್ರನು. ಎಂದರೆ ಶ್ರೇಷ್ಠನೆಂದರ್ಥವು. ದೇವಸಿಂಹಃ ದೇವತೆಗಳಲ್ಲಿ ಸಿಂಹನಾಗಿರುವವನು. ಎಂದರೆ ದೇವತೆಗಳ ಸ್ವಾಮಿಯೆಂದರ್ಥವು. ದಿವಾಕರಃ ಸೂರ್ಯನ ಸ್ವರೂಪನು. (ಹಗಲನ್ನುಂಟುಮಾಡುವವನು.) ವಿಬುಧಾಗ್ರವರ

ವಿಬುಧಾಗ್ರವರಶ್ರೇಷ್ಠಃ ಸರ್ವದೇವೋತ್ತಮೋತ್ತಮಃ ।
ಶಿವಜ್ಞಾನರತಃ ಶ್ರೀಮಾನ್ ಶಿಖಿಶ್ರೀಪರ್ವತಪ್ರಿಯಃ ॥೧೨೦॥
ಜಯಸ್ತಂಭೋ ವಿಶಿಷ್ಟಂಭೋ ನರಸಿಂಹನಿಪಾತನಃ ।
ಬ್ರಹ್ಮಚಾರೀ ಲೋಕಚಾರೀ ಧರ್ಮಚಾರೀ ಧನಾಧಿಪಃ ॥೧೨೧॥

---

ಶ್ರೇಷ್ಠಃ ದೇವತೆಗಳ ಅಗ್ರೇಸರನಾದ ಇಂದ್ರನಿಗಿಂತಲೂ ಶ್ರೇಷ್ಠರಾದ ಪ್ರಜಾಪತಿಯೇ ಮುಂತಾದವರಿಗಿಂತಲೂ ಶ್ರೇಷ್ಠನು. ಸರ್ವದೇವೋತ್ತಮೋತ್ತಮಃ ಸಕಲ ದೇವತೆಗಳಿಗಿಂತಲೂ ಶ್ರೇಷ್ಠರಾವ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನು. ಶಿವಜ್ಞಾನರತಃ ಶಿವನ ಭಕ್ತರಿಗೆ ಜ್ಞಾನವನ್ನು ದಯಪಾಲಿಸುವವನು. ಶ್ರೀಮಾನ್ ಸದಾಕಾಲವೂ ತ್ರಿವರ್ಗಸಂಪತ್ತಿನಿಂದ ಯುಕ್ತನಾದವನು. ಶಿಖಿಶ್ರೀ ಪರ್ವತಪ್ರಿಯಃ ಷಣ್ಮುಖನ ಧನುರ್ವಿದ್ಯಾಭ್ಯಾಸಕ್ಕೋಸ್ಕರ ನಿರ್ಮಿಸಲ್ಪಟ್ಟ ಶ್ರೀ ಪರ್ವತದಲ್ಲಿ ಪ್ರೀತಿಯುಳ್ಳವನು. ಶಿವಪುರಾಣದ ಜ್ಯೋತಿರ್ಲಿಂಗ ವರ್ಣನೆಯಲ್ಲಿ ಈ ಕಥೆಯು ಇದೆ.

೧೨೧–೧೨೨. ಜಯಸ್ತಂಭಃ ಜಯಕ್ಕೆ ಆಧಾರಭೂತನು. ವಿಶಿಷ್ಟಂಭಃ ಸರ್ವೋತ್ಕೃಷ್ಟವಾದ ಗಂಗೋದಕವನ್ನು ಧರಿಸಿರುವವನು. ನರಸಿಂಹನಿಪಾತನಃ ನರಸಿಂಹರೂಪವನ್ನು ತಾಳಿದ ವಿಷ್ಣುವನ್ನು ಶರಭರೂದಿಂದ ನಿಗ್ರಹಿಸಿ ಉಪಕಾರಮಾಡಿದವನು. ಬ್ರಹ್ಮಚಾರೀ ಅಖಂಡವಾದ ಆನಂದದಲ್ಲಿ ನಿಮಗ್ನನಾಗಿರುವವನೆಂದರ್ಥವು. ಲೋಕಚಾರೀ ಭೂರಾದಿಲೋಕಗಳಲ್ಲಿ ಸಂಚಾರಮಾಡುವ ಸ್ವಭಾವವುಳ್ಳವನು. ಧರ್ಮಚಾರೀ ಧರ್ಮಾನುಷ್ಠಾನಮಾಡುವ ಸ್ವಭಾವವುಳ್ಳವನು. ಧನಾಧಿಪಃ ಸಕಲ ಧನಗಳಿಗೆ ಸ್ವಾಮಿಯು, ನಗ್ನಃ ದಿಗಂಬರಸ್ವರೂಪನು. ನಗ್ನವ್ರತಧರಃ ದಿಗಂಬರರಾದ ಅವಧೂತರಿಂದ ಕೂಡಿರುವವನು. ನಂದೀಶೈಲಾದಿಸ್ವರೂಪನು. ನಂದೀಶ್ವರಃ ನಂದಿಯೆಂಬ ವೃಷಭದ ಸ್ವಾಮಿಯು. ಶುಚಿಃ ಶುಭ್ರವಾಗಿರುವವನು. ಲಿಂಗಾಧ್ಯಕ್ಷಃ ಬಾಣಾದಿ ಲಿಂಗರೂಪದಿಂದ ಕಾಣಿಸಿಕೊಳ್ಳುವವನು. ಸುರಾಧ್ಯಕ್ಷಃ ದೇವತೆಗಳ ಪ್ರಭುವು. ಯುಗಾಧ್ಯಕ್ಷಃ ಕೃತಯುಗಾದಿಗಳಿಗೆ

ನಂದೀ ನಂದೀಶ್ವರೋ ನಗ್ನೋ ನಗ್ನವ್ರತಧರಃ ಶುಚಿಃ ।
ಲಿಂಗಾಧ್ಯಕ್ಷಃ ಸುರಾಧ್ಯಕ್ಷೋ ಯುಗಾಧ್ಯಕ್ಷೋ ಯುಗಾವಹಃ ॥
ಸ್ವವಶಃ ಸವಶಃ ಸ್ವರ್ಗಃ ಸ್ವರಃ ಸ್ವರಮಯಸ್ವನಃ ।
ಬೀಜಾಧ್ಯಕ್ಷೋ ಬೀಜಕರ್ತಾ ಧನಕೃದ್ಧರ್ಮವರ್ಧನಃ ॥೧೨೩॥
ದಂಭೋಽದಂಭೋ ಮಹಾದಂಭಃ ಸರ್ವಭೂತಮಹೇಶ್ವರಃ ।
ಶ್ಮಶಾನನಿಲಯಸ್ತಿಷ್ಯಃ ಸೇತುರಪ್ರತಿಮಾಕೃತಿಃ ॥೧೨೪॥

---

ಪ್ರಭುವು, ಯುಗಾವಹಃ ಕೃತಾದಿಯುಗಗಳನ್ನು ಆಯಾಕಾಲಕ್ಕನುಗುಣವಾಗಿ ಉಂಟಾಗುವಂತೆ ಮಾಡುವವನು.

೧೨೩-೧೨೪. ಸ್ವವಶಃ ಇತರರಿಗೆ ಅಧೀನನಾಗದಿರುವವನು. ಸವಶಃ ಇಂದ್ರಿಯನಿಗ್ರಹದಿಂದ ಸಹಿತನಾಗಿರುವವನು. ಸ್ವರ್ಗಃ ಸ್ವರ್ಗವುಂತಾದ ಲೋಕದಲ್ಲಿಯೂ ವ್ಯಾಪಿಸಿರುವವನು. ಸ್ವರಃ ನಿಟ್ಟುಸುರು,ಅನುನಾಸಿಕಧ್ವನಿಯುಳ್ಳವನು. ಸ್ವರಮಯಸ್ವನಃ ಷಡ್ಜಾದಿ ಸಪ್ತಸ್ಥಾನಗಳಲ್ಲಿ ಉಂಟಾಗುವ ಸ್ವರಗಳಿಗೆ ಕಾರಣಭೂತನು. ಬೀಜಾಧ್ಯಕ್ಷಃ ವೀರ್ಯಕ್ಕೆ ಪ್ರಭುವು. ಬೀಜಕರ್ತಾ ತಪಸ್ಸನ್ನೂ ನೆರವೇರಿಸುವ ವೀರ್ಯವನ್ನು ಉತ್ಪತ್ತಿಮಾಡುವವನು. ಧನಕೃತ್ ಧರ್ಮವರ್ಧನಃ ಧನವನ್ನು, ಎಲ್ಲ ಸಂಪತ್ತನ್ನೂ, ಉತ್ಪತ್ತಿಮಾಡುವವನು. ಮತ್ತು ಧರ್ಮರಕ್ಷಕನು. ದಂಭಃ ಭಕ್ತರನ್ನು ಪರೀಕ್ಷೆಮಾಡಲು ಕಪಟವೇಷವನ್ನೂ ಧರಿಸುವವನು. ಅದಂಭಃ ನಿಷ್ಕಪಟಿಯು ಮಹಾದಂಭಃ ಕಪಟವಾದರೂ ಸರ್ವಾತಿಶಾಯಿಯಾಗಿ ಪೂಜ್ಯವಾದ ಕಪಟ ವ್ಯವಹಾರವುಳ್ಳವನು. ಸರ್ವಭೂತ ಮಹೇಶ್ವರಃ ಸಮಸ್ತ ಭೂತಗಳಿಗೂ ಪ್ರಭುವು. ಶ್ಮಶಾನನಿಲಯಃ ಎಲ್ಲ ಶವಗಳಿಗೂ ಸ್ಥಾನವಾದ ಶ್ಮಶಾನದ ಪ್ರಲಯಕ್ಕೂ ಕಾರಣಭೂತನು. ತಿಷ್ಯಃ ಪೃಥಿವಿಯಸ್ವರೂಪನು. ಸೇತುಃ ಸಂಸಾರಸಾಗರವನ್ನು ದಾಟಲು ಸೇತುವೆಯ ಹಾಗೆ ಇರುವವನು. ಅಪ್ರತಿಮಾಕೃತಿಃ ಉಪಮಾನರಹಿತವಾದ ಆಕೃತಿಯುಳ್ಳವನು.

ಲೋಕೋತ್ತರಸ್ಫುಟಾಲೋಕ ಸ್ತ್ರ್ಯಂಬಕೋ ನಾಗಭೂಷಣಃ ।
ಅಂಧಕಾರಿ ರ್ಮಖದ್ವೇಷೀ ವಿಷ್ಣುಕಂಧರಪಾತನಃ ॥೧೨೫॥
ವೀತದೋಷೋಽಕ್ಷಯ ಗುಣೋ ದಕ್ಷಾರಿಃ ಪೂಷದಂತಹೃತ್ ।
ಧೂರ್ಜಟಿಃ ಖಂಡಪರಶುಃ ಸಕಲೋ ನಿಷ್ಕಲೋಽನಘಃ ॥೧೨೬॥

---

೧೨೫. ಲೋಕೋತ್ತರ ಸ್ಫುಟಾಲೋಕಃ—ಮನುಷ್ಯರ ಸ್ಥೂಲ ಚರ್ಮ ಚಕ್ಷುಸ್ಸಿಗೆ ಅಗೋಚರವಾದ ಆತ್ಮಪ್ರಕಾಶ ಉಳ್ಳವನು. ತ್ರ್ಯಂಬಕಃ ಮೂರು ಕಣ್ಣುಗಳಿಂದ ಯುಕ್ತನಾದವನು. ನಾಗಭೂಷಣಃ—ಸರ್ಪ ವನ್ನು ಆಭರಣವನ್ನಾಗಿ ಇಟ್ಟುಕೊಂಡಿರುವವನು. ಅಂಧಕಾರಿಃ ಅಂಧಕಾ ಸುರನನ್ನೂ ನಿಗ್ರಹಿಸಿದ ದೇವನು. ಮಖದ್ವೇಷೀ ದಕ್ಷಯಜ್ಞವನ್ನು ದ್ವೇಷಿಸುವವನು. ವಿಷ್ಣು ಕಂಧರಪಾತನಃ ವಿಷ್ಣುವಿನ ಕುತ್ತಿಗೆಯನ್ನು ಕತ್ತರಿಸಿದವನು.

೧೨೬–೧೩೦. ವೀತದೋಷಃ ಭಕ್ತರಿಗೆ ನಿಗ್ರಹಾನುಗ್ರಹಗಳನ್ನು ಮಾಡಿದರೂ ವೈಷಮ್ಯ,ನೈರ್ಘೃಣ್ಯ ಮುಂತಾದ ದೋಷಗಳನ್ನು ಹೊಂದದೆ ಇರುವವನು. ಅಕ್ಷಯಗುಣಃ ನಾಶಶೂನ್ಯವಾದ ಮೂವ್ವತ್ತೆರಡು ಗುಣಗ ಳಿಂದ ಕೂಡಿರುವವನು. ದಕ್ಷಾರಿಃ ದಕ್ಷಪ್ರಜಾಪತಿಯ ಶತ್ರುವು. ಪೂಷದಂತಹೃತ್ ಸೂರ್ಯನ ಹಲ್ಲುಗಳನ್ನು ಕಿತ್ತವನು. ಧೂರ್ಜಟಿಃ ಸರ್ವಶ್ರೇಷ್ಠವಾದ ಜಟೆಯಿಂದ ಯುಕ್ತನಾದವನು. ಖಂಡಪರಶುಃ ಸರ್ವರನ್ನೂ ಛೇದಿಸುವ ಕೊಡಲಿಯುಳ್ಳವನು. ಸಕಲಃ ಚಂದ್ರಕಲೆ ಯಿಂದ ಕೂಡಿರುವವನು. ನಿಷ್ಕಲಃ ಶುದ್ಧನು. ಅನಘಃ ಪಾಪರಹಿ ತನು. ಆಧಾರಃ ಸಮಸ್ತಜಗತ್ತಿಗೂ ಆಧಾರನು. ಸಕಲಾಧಾರಃ ಸಮ ಸ್ತ ಆಧಾರಗಳಿಗೂ ಕಾರಣಭೂತನು. ಪಾಂಡುರಾಭಃ ಶ್ವೇತವಾದ ಕಾಂತಿಯುಳ್ಳವನು. ಮೃಡಃ ಸುಖಪ್ರದನು. ನಟಃ ಚಿತ್ರಸ್ವರೂ ಪನು. ಪೂರ್ಣ: ಐಶ್ವರ್ಯಾದಿ ಸಕಲಶಕ್ತಿಗಗಳಿಂದ ಕೂಡಿರುವವನು. ಪೂರ ಯಿತಾ ಭಕ್ತರ ಇಷ್ಟಾರ್ಥಗಳನ್ನು ಪೂರ್ಣಮಾಡುವವನು. ಪುಣ್ಯಃ ಪಾಪನಾಶಕನು. ಸುಕುಮಾರಃ ಸ್ಕಂದನೆಂಬ ಒಳ್ಳೆಯ ಪುತ್ರನನ್ನು ಹೊಂದಿರುವವನು. ಸುಲೋಚನಃ ಶೋಭನವಾದ ಕಣ್ಣುಳ್ಳವನು. ಸಾಮಗೇಯಃ ಸಾಮವೇದದಿಂದ ಸ್ತೋತ್ರಮಾಡಲು ಯೋಗ್ಯನು.

**ಪೂರ್ಣಃ ಪೂರಯಿತಾ ಪುಣ್ಯಃ ಸುಕುಮಾರಃ ಸುಲೋಚನಃ ।**
**ಆಧಾರಃ ಸಕಲಾಧಾರಃ ಪಾಂಡುರಾಭೋ ಮೃಡೋ ನಟಃ ॥೧೨೭॥**

**ಸಾಮಗೇಯಃ ಪ್ರಿಯಕರಃ ಪುಣ್ಯಕೀರ್ತಿ ರನಾಮಯಃ ।**
**ಮನೋಜಯ ಸ್ತೀರ್ಥಕರೋ ಜಟಿಲೋ ಜೀವಿತೇಶ್ವರಃ ॥೧೨೮॥**

**ಜೀವಿತಾಂತಕರೋ ನಿತ್ಯೋ ವಸುರೇತಾ ವಸುಪ್ರಿಯಃ ।**
**ಸದ್ಗತಿಃ ಸತ್ಕೃತಿಃ ಸಕ್ತಃ ಕಾಲಕಂಠಃ ಕಲಾಧರಃ ॥೧೨೯॥**

**ಮಾನೀ ಮಾನ್ಯೋ ಮಹಾಕಾಲಃ ಸದ್ಭೂತಿಃ ಸತ್ಪರಾಯಣಃ ।**
**ಚಂದ್ರಸಂಜೀವನಃ ಶಾಸ್ತಾ ಲೋಕಗೂಢೋಽಮರಾಧಿಪಃ ॥೧೩೦॥**

---

ಪ್ರಿಯಕರಃ ಒಳ್ಳೆಯದನ್ನುಂಟುಮಾಡುವ ಸ್ವಭಾವವುಳ್ಳವನು. ಪುಣ್ಯ ಕೀರ್ತಿಃ ಪಾಪನಾಶಕವಾದ ಯಶಸ್ಸುಳ್ಳವನು. ಅನಾಮಯಃ ಪದಗಳ ಶಕ್ತಿ ವ್ಯಾಪಾರಕ್ಕೆ ಅಗೋಚರನು. "ಯತೋವಾಚೋ ನಿವರ್ತಂತೇ" ಎಂದು ವೇದದಲ್ಲಿ ಹೇಳಿರುತ್ತದೆ. ಮನೋಜವಃ ಮನಸ್ಸಿಗೆ ಅಗೋಚರನು. "ಅಪ್ರಾಪ್ಯ ಮನಸಾ ಸಹ" ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ತೀರ್ಥಕರಃ ಪುಷ್ಕರಾದಿತೀರ್ಥಗಳಿಗೆ ಹೇತು ಭೂತನು. ಜಟಿಲಃ ಜಟಾ ಯುಕ್ತನು. ಜೀವಿತೇಶ್ವರಃ ಆಯುಸ್ಸನ್ನು ಕೊಡುವವನು. ಜೀವಿ ತಾಂತಕರಃ ನಾಶಕ್ಕೆ ಕಾರಣಭೂತನು. ನಿತ್ಯಃ ಸಂಸಾರ ಧರ್ಮದಿಂದ ರಹಿತನು. ವಸುರೇತಾಃ ಸುವರ್ಣವೇ ರೇತಸ್ಸಾಗುಳ್ಳವನು. ವಸು ಪ್ರಿಯಃ ಕುಬೇರನಲ್ಲಿ ಪ್ರೀತಿಯುಳ್ಳವನು. ಸದ್ಗತಿಃ ಸನ್ಮಾರ್ಗವನ್ನು ತೋರಿಸುವವನು. ಸತ್ಕೃತಿಃ ಪ್ರಶಸ್ತವಾದ ಪ್ರಯತ್ನವುಳ್ಳವನು. ಸಕ್ತಃ ಪಾರ್ವತಿಯಿಂದ ಯುಕ್ತನಾದವನು. ಕಾಲಕಂಠಃ ಕಂಠದಲ್ಲಿ ಕಾಲಕೂಟ ವಿಷವನ್ನು ಧರಿಸಿರುವವನು. ಕಲಾಧರಃ ಅರವತ್ತುನಾಲ್ಕು ಕಲೆಗಳನ್ನು ಬಲ್ಲವನು. ಮಾನೀ ನಿತ್ಯಸನ್ಮಾನದಿಂದ ಯುಕ್ತನು. ಮಾನ್ಯಃ ಸತ್ಕಾರಾರ್ಹನು. ಮಹಾಕಾಲಃ ಮಹಾಕಾಲಾಧಾರನು. ಸದ್ಭೂತಿಃ ಪ್ರಶಸ್ತವಾದ ಐಶ್ವರ್ಯವನ್ನು ಕೊಡುವವನು. ಸತ್ಪರಾಯಣಃ ಸತ್ಪುರುಷರಿಗೆ ಆಶ್ರಯಭೂತನು. ಚಂದ್ರಸಂಜೀವನಃ ಚಂದ್ರನ ಕ್ಷಯ ರೋಗವನ್ನು ನಿವಾರಣೆಮಾಡಿದವನು. ಶಾಸ್ತಾ ಲೋಕಗೂಢಃ ಸರ್ವ

ಲೋಕಬಂಧು ರ್ಲೋಕನಾಥಃ ಕೃತಜ್ಞಃ ಕೃತಿಭೂಷಣಃ ।
ಅನಪಾಯ್ಯಕ್ಷರಃ ಕಾಂತಃ ಸರ್ವಶಾಸ್ತ್ರಭೃತಾಂ ವರಃ ॥೧೩೧॥
ತೇಜೋಮಯೋ ದ್ಯುತಿಧರೋ ಲೋಕಮಾಯೋಽಗ್ರಣೀರಣುಃ ।
ಶುಚಿಸ್ಮಿತಃ ಪ್ರಸನ್ನಾತ್ಮಾ ದುರ್ಜಯೋ ದುರತಿಕ್ರಮಃ ॥೧೩೨॥
ಜ್ಯೋತಿರ್ಮಯೋ ನಿರಾಕಾರೋ ಜಗನ್ನಾಥೋ ಜಲೇಶ್ವರಃ ।
ತುಂಬವೀಣೀ ಮಹಾಕಾಯೋ ವಿಶೋಕಃ ಶೋಕನಾಶನಃ ॥೧೩೩॥

---

ನಿಯಾಮಕನು. ಮತ್ತು ಭಕ್ತಿ ಧರ್ಮಗಳಿಲ್ಲದ ಜನಗಳಿಗೆ ಪ್ರತ್ಯಕ್ಷನಾಗದವನು. ಅಮರಾಧಿಪಃ ದೇವತೆಗಳಿಗೆ ಸ್ವಾಮಿಯು.

೧೩೧. ಲೋಕಬಂಧುಃ ಜೀವಾತ್ಮರಿಗೆ ಹಿತಾಹಿತಪ್ರಾಪ್ತಿ ಪರಿಹಾರಗಳನ್ನುಂಟುಮಾಡುವ ಸಹೋದರ ಸದೃಶನಾದವನು. ಲೋಕನಾಥಃ ಚತುರ್ದಶ ಭುವನಗಳಿಗೆ ಸ್ವಾಮಿಯು. ಕೃತಜ್ಞಃ ಕೃತಿಭೂಷಣಃ ಸತ್ಕರ್ಮವನ್ನು ತಿಳಿಯುವವನು, ಮತ್ತು ಸತ್ಕರ್ಮಾನುಗುಣವಾದ ಯತ್ನವನ್ನು ಶ್ಲಾಘಿಸುವವನು. ಅನಾಪಾಯ್ಯಕ್ಷರಃ ನಿತ್ಯವಾದ ವೇದರೂಪನು. ಕಾಂತಃ ಯಮನಿಗೂ ನಾಶಕನು. ಸರ್ವಶಾಸ್ತ್ರ ಭೃತಾಂವರಃ ಸರ್ವಶಾಸ್ತ್ರರಕ್ಷಕರಿಗೂ ಶ್ರೇಷ್ಠನು.

೧೩೨. ತೇಜೋಮಯಃ ದ್ಯುತಿಧರಃ ತೇಜಸ್ಸ್ವರೂಪನಾದ್ದರಿಂದಲೇ ಕಾಂತಿಯನ್ನು ಹೊಂದಿರುವವನು. ಲೋಕಮಾಯಃ ಲೋಕಮೂಲವಾದ ಅವಿದ್ಯೆಯನ್ನು ಸ್ವಾಧೀನಪಡಿಸಿ ಕೊಂಡಿರುವವನು. ಅಗ್ರಣೀಃ ಭಕ್ತರಿಗೆ ಸರ್ವಶ್ರೇಷ್ಠವಾದ ಸ್ಥಾನವನ್ನು ಕೊಡುವವನು. ಅಣುಃ ಅತ್ಯಂತ ಸೂಕ್ಷ್ಮನೂ ಆಗಿರುವುದರಿಂದ ಶ್ರೇಷ್ಠನು. ಶುಚಿಸ್ಮಿತಃ ಶುದ್ಧವಾದ ಮಂದಹಾಸವುಳ್ಳವನು. ಪ್ರಸನ್ನಾತ್ಮಾ ನಿರ್ಮಲವಾದ ಮನಸ್ಸುಳ್ಳವನು. ದುರ್ಜಯಃ ಶ್ರಮದುಃಖದಿಂದಲೂ ಜಯಿಸಲು ಅಸಾಧ್ಯನು. ದುರತಿಕ್ರಮಃ ಮೀರಲು ಅಸಾಧ್ಯನಾದವನು. (ಇವನ ಆಜ್ಞೆಯನ್ನು ಮೀರಲು ಸರ್ವರೂ ಅಸಮರ್ಥರಾಗುತ್ತಾರೆ.

೧೩೩. ಜ್ಯೋತಿರ್ಮಯಃ ಜ್ಯೋತಿರ್ಲಿಂಗ ಸ್ವರೂಪನು. ನಿರಾಕಾರಃ ಪಾರಮಾರ್ಥಿಕವಾಗಿ ಆಕಾರ ರಹಿತನು. ಜಗನ್ನಾಥಃ ನಿಖಿಲ

ತ್ರಿಲೋಕಾತ್ಮಾ ತ್ರಿಲೋಕೇಶಃ ಶುದ್ಧಃ ಶುದ್ಧೀ ರಥಾಕ್ಷಜಃ ।
ಅವ್ಯಕ್ತ ಲಕ್ಷಣೋಽವ್ಯಕ್ತೋ ವ್ಯಕ್ತಾವ್ಯಕ್ತೋ ವಿಶಾಂಪತಿಃ ॥
ವರಶೀಲೋ ವರತುಲೋ ಮಾನೋ ಮಾನಧನೋ ಮಯಃ ।
ಬ್ರಹ್ಮಾ ವಿಷ್ಣುಃ ಪ್ರಜಾಪಾಲೋ ಹಂಸೋ ಹಂಸಗತಿರ್ಯಮಃ ॥

---

ಜಗತ್ತಿಗೂ ಸ್ವಾಮಿಯು. ಜಲೇಶ್ವರಃ ಸಕಲ ಉದಕಗಳಿಗೂ ಸ್ವಾಮಿಯು. ತುಂಬವೀಣೀ ತುಂಬವೆಂಬ ಹೆಸರಿನ ಎರಡು ಸೋರೆ ಫಲಗಳಿಂದ ಕೂಡಿ ಮಾಡಿದ ರುದ್ರವೀಣೆ ಎಂದು ಪ್ರಸಿದ್ಧವಾಗಿರುವ ವೀಣೆಯನ್ನು ಧರಿಸಿರುವವನು. ಮಹಾಕಾಯಃ ಪೂಜ್ಯವಾದ ದೇಹವುಳ್ಳವನು. ವಿಶೋಕಃ ಶೋಕರಹಿತನು. ಶೋಕನಾಶನಃ ಭಕ್ತರಶೋಕವನ್ನು ನಾಶಮಾಡುವವನು.

೧೩೪. ತ್ರಿಲೋಕಾತ್ಮಾ ತ್ರಿಲೋಕಸ್ವರೂಪನು. ತ್ರಿಲೋಕೇಶಃ ಮೂರು ಲೋಕಗಳಿಗೂ ಪ್ರಭುವು. ಶುದ್ಧಃ ಕಶ್ಮಲರಹಿತನು. ಶುದ್ಧಿಃ ಶೌಚರೂಪನು. ರಥಾಕ್ಷಜಃ ಸುದರ್ಶನ ಚಕ್ರವನ್ನು ನಿರ್ಮಿಸಿದವನು. ಅವ್ಯಕ್ತಲಕ್ಷಣಃ ಪಾಪಿಗಳಿಗೆ ಸ್ಪಷ್ಟವಾಗಿ ಕಾಣಿಸದಿರುವ ಚಿಹ್ನೆಯುಳ್ಳವನು. ಅವ್ಯಕ್ತಃ ವಿಷ್ಣುವಿನ ಆವಿರ್ಭೂತಿಯೇ ಮುಂತಾದ್ದಕ್ಕೆ ಕಾರಣಭೂತನು. ವಿಶಾಂಪತಿಃ ಸಕಲ ಪ್ರಜಾಪಾಲಕನು.

೧೩೫. ವರಶೀಲಃ ಸದ್ವೃತ್ತವನ್ನು ಕೊಡುವವನು. ವರತುಲಃ ಪರಮ ಮಹತ್ಪರಿಮಾಣಯುಕ್ತನು. ಮಾನಃ ಸಕಲವಸ್ತುಗಳಿಗೂ ಪ್ರಮಾಣಭೂತನು. ಮಾನಧನಃ ಸನ್ಮಾನಮಾಡುವವರಿಗೆ ಧನವನ್ನು ಕೊಡುವವನು. ಮಯಃ ಸುಖರೂಪನು. ಬ್ರಹ್ಮಾ ಪಿತಾಮಹಸ್ವರೂಪನು. ವಿಷ್ಣುಃ ಪ್ರಜಾಪಾಲಃ ವ್ಯಾಪಕನು ಮತ್ತು ಪ್ರಜಾರಕ್ಷಕನು. ಹಂಸಃ ಅಜ್ಞಾನನಾಶಕನು. ಹಂಸಗತಿಃ ಯೋಗಿಗಳಿಗೆ ಪ್ರಾಪ್ಯಸ್ಥಾನನು.

**ವೇಧಾ ಧಾತಾ ವಿಧಾತಾ ಚ ಅತ್ತಾ ಹರ್ತಾ ಚತುರ್ಮುಖಃ ।**
**ಕೈಲಾಸ ಶಿಖರಾವಾಸೀ ಸರ್ವಾವಾಸೀ ಸತಾಂ ಗತಿಃ ॥೧೩೬॥**

**ಹಿರಣ್ಯಗರ್ಭೋ ಹರಿಣಃ ಪುರುಷಃ ಪೂರ್ವಜಃ ಪಿತಾ ।**
**ಭೂತಾಲಯೋ ಭೂತಪತಿಃ ಭೂತಿದೋ ಭುವನೇಶ್ವರಃ ॥೧೩೭॥**

**ಸಂಯೋಗೀ ಯೋಗವಿದ್ಬ್ರಹ್ಮಾ ಬ್ರಹ್ಮಣ್ಯೋ ಬ್ರಾಹ್ಮಣಪ್ರಿಯಃ ।**
**ದೇವಪ್ರಿಯೋ ದೇವನಾಥೋ ದೇವಜ್ಞೋ ದೇವಚಿಂತಕಃ ॥೧೩೮॥**

---

೧೩೬. ವೇಧಾಃ ಸಕಲವಸ್ತುಗಳಿಗೂ ಆಧಾರಭೂತನು. ಧಾತಾ ಜಗದ್ರಕ್ಷಕನು. ವಿಧಾತಾ ಬ್ರಹ್ಮಾಂಡರಕ್ಷಕನು. ಅತ್ತಾ-ಹರ್ತಾ ಜಗತ್ಪ್ರಲಯವನ್ನುಂಟುಮಾಡುವವನು. ಮತ್ತು ಜಗತ್ತನ್ನು ಉಪಸಂಹರಿಸುವವನು. ಚತುರ್ಮುಖಃ ನಾಲ್ಕು ಮುಖಗಳುಳ್ಳ ಬ್ರಹ್ಮಸ್ವರೂಪನು. ಕೈಲಾಸ ಶಿಖರಾವಾಸೀ ಕೈಲಾಸಪರ್ವತದ ಶಿಖರದಲ್ಲಿ ವಾಸಮಾಡುವ ಸ್ವಭಾವವುಳ್ಳವನು. ಸರ್ವಾವಾಸೀ ಸರ್ವಪ್ರದೇಶಗಳಲ್ಲಿಯೂ ವಾಸ ಮಾಡುವ ಸ್ವಭಾವವುಳ್ಳವನು. ಸತಾಂಗತಿಃ ಸಾಧುಗಳಿಗೆ ಪ್ರಾಪ್ಯ ಸ್ಥಾನನು.

೧೩೭. ಹಿರಣ್ಯಗರ್ಭಃ ವೀರ್ಯದಿಂದ ಸುವರ್ಣವನ್ನುಂಟುಮಾಡುವವನು. ಹರಿಣಃ ಶ್ವೇತವರ್ಣನು. ಪುರುಷಃ ದೇಹಗಳಲ್ಲಿ ಅನುಭವಕ್ಕೆ ಬರುವ ಪುರುಷನೆಂದು ಸಂಜ್ಞೆಯುಳ್ಳವನು. "ಪುರುಷಂ ಶಂಕರಂ ಪ್ರಾಹುಃ ಗೌರೀಂ ಚ ಪ್ರಕೃತಿಂ ದ್ವಿಜಾಃ" ಎಂದು ಹಿಂದೆ ಹೇಳಿರುತ್ತದೆ. ಪೂರ್ವಜಃ ಪಿತಾ ಸಕಲ ವಸ್ತುಗಳಿಗಿಂತಲೂ ಮೊದಲು ಹುಟ್ಟಿದವನು ಮತ್ತು ಸಕಲ ವಸ್ತುಗಳ ಜನಕನು. ಭೂತಾಲಯಃ ಭೂತವೆಂಬ ಹೆಸರುಳ್ಳವನದಲ್ಲಿಯೂ, ಭೂತಭೌತ ಪದಾರ್ಥಗಳಲ್ಲಿಯೂ, ವಾಸಿಸುವವನು. ಭೂತಪತಿಃ ಪಂಚಭೂತಗಳ ಪಾಲಕನು. ಭೂತಿದಃ ಐಶ್ವರ್ಯವನ್ನು ಕೊಡುವವನು. ಭುವನೇಶ್ವರಃ ರಾಜರಿಗೂ ಜನಕನು.

೧೩೮. ಸಂಯೋಗೀ ಕರ್ಮಾನುಸಾರವಾದ ಫಲವನ್ನು ಕೊಡುವವನು. ಯೋಗ ವಿದ್ಬ್ರಹ್ಮಾ ಸಕಲಕಲಾ ವಿಶಾರದ ನಾದ ಚತುರ್ಮುಖ

**ವಿಷಮಾಕ್ಷಃ ಕಲಾಧ್ಯಕ್ಷೋ ವೃಷಾಂಕೋ ವೃಷವರ್ಧನಃ ।**
**ನಿರ್ಮದೋ ನಿರಹಂಕಾರೋ ನಿರ್ಮೋಹೋ ನಿರುಪದ್ರವಃ ॥೧೩೯॥**
**ದರ್ಪಹಾ ದರ್ಪಿತೋ ದೃಪ್ತಃ ಸರ್ವರ್ತು ಪರಿವರ್ತಕಃ ।**
**ಸಪ್ತಜಿಹ್ವಃ ಸಹಸ್ರಾರ್ಚಿಃ ಸ್ನಿಗ್ಧಃ ಪಕೃತಿದಕ್ಷಿಣಃ ॥೧೪೦॥**

---

ಬ್ರಹ್ಮನ ಜನಕನು. ಬ್ರಹ್ಮಣ್ಯಃ ತಪಸ್ಸನ್ನು ಮಾಡುವವನು. ಬ್ರಾಹ್ಮಣ ಪ್ರಿಯಃ ಬ್ರಹ್ಮಜ್ಞಾನಿಗಳಾಗಿರುವ ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವನು. ದೇವ ಪ್ರಿಯಃ ದೇವತೆಗಳಲ್ಲಿ ಹೆಚ್ಚು ಪ್ರೀತಿಯುಳ್ಳವನು. ದೇವನಾಥಃ ದೇವತೆಗಳ ಸ್ವಾಮಿಯು. ದೇವಜ್ಞಃ ದೇವತೆಗಳಿಗೆ ಜ್ಞಾನೋದಯ ವನ್ನುಂಟುಮಾಡುವವನು. ದೇವಚಿಂತಕಃ ದೇವತೆಗಳಿಂದಲೂ ಧ್ಯಾನಿ ಸಲ್ಪಡುವವನು.

೧೩೯. ವಿಷಮಾಕ್ಷಃ ಸಮಸಂಖ್ಯೆಯುಲ್ಲದ ಮೂರು ಕಣ್ಣುಗಳುಳ್ಳ ಮುಕ್ಕಣ್ಣನು. ಕಲಾಧ್ಯಕ್ಷಃ ಚತುಃ ಷಷ್ಟಿಕಲೆಗಳ ಸ್ವಾಮಿಯು. ವೃಷಾಂಕಃ ಧರ್ಮವೇ ಆಭರಣವಾಗುಳ್ಳವನು. ಧರ್ಮಪ್ರಿಯನೆಂದ ರ್ಥವು. ವೃಷವರ್ಧನಃ ವರ್ಣಾಶ್ರಮಗಳ ಧರ್ಮವರ್ಧಕನು. ನಿರ್ಮದಃ ಮದವಿಲ್ಲದಿರುವವನು. ನಿರಹಂಕಾರಃ ಆದುದರಿಂದಲೇ ಅಹಂಕಾರರಹಿ ತನು. ನಿರ್ಮೋಹಃ ಮೋಹವಿಲ್ಲದಿರುವವನು. ನಿರುಪದ್ರವಃ ಉಪದ್ರ ವರಹಿತನು.

೧೪೦. ದರ್ಪಹಾ ದುಷ್ಟರಾದ ಸಮಸ್ತರ ಗರ್ವದರ್ಪಗಳನ್ನೂ ನಾಶ ಮಾಡುವವನು. ದರ್ಪಿತಃ ನಿತ್ಯಸಂತುಷ್ಟನು. ದೃಪ್ತಃ ಅಖಂಡಾನಂದ ವನ್ನು ಅನುಭವಿಸುವವನು. ಸರ್ವರ್ತುಪರಿವರ್ತಕಃ ಕ್ರಮವಾಗಿ ಆಯಾ ಋತುಗಳನ್ನು ತಿರುಗಿಸುವವನು. ಸಪ್ತಜಿಹ್ವಃ ಏಳುನಾಲಿಗೆಯಿಂದ ಕೂಡಿ ರುವವನು. ವೇದದಲ್ಲಿ ''ಸಪ್ತತೇ ಅಗ್ನೇ ಸಮಿಧಃ ಸಪ್ತಜಿಹ್ವಾಃ'' ಎಂದು ಹೇಳಿರುತ್ತದೆ. ಸಹಸ್ರಾರ್ಚಿಃ ಸಹಸ್ರ ಕಾಂತಿಯಿಂದ ಯುಕ್ತನು. ಸ್ನಿಗ್ಧಃ ದಯಾರ್ದ್ರನು. ಪ್ರಕೃತಿ ದಕ್ಷಿಣಃ ಸರಳ ಸ್ವಭಾವವುಳ್ಳವನು.

ಭೂತಭವ್ಯ ಭವನ್ನಾಥಃ ಪ್ರಭವೋ ಭ್ರಾಂತಿನಾಶನಃ ।
ಅರ್ಥೋಽನರ್ಥೋ ಮಹಾಕೋಶಃ ಪರಕಾರ್ಯೈಕ ಪಂಡಿತಃ ॥
ನಿಷ್ಕಂಟಕಃ ಕೃತಾನಂದೋ ನಿರ್ವ್ಯಾಜೋ ವ್ಯಾಜಮರ್ದನಃ।
ಸತ್ವವಾನ್ ಸಾತ್ವಿಕಃ ಸತ್ಯಕೀರ್ತಿಃ ಸ್ತಂಭಕೃತಾಗಮಃ ॥೧೪೨॥
ಅಕಂಪಿತೋ ಗುಣಗ್ರಾಹೀ ನೈಕಾತ್ಮಾ ನೈಕಕರ್ಮಕೃತ್ ।
ಸುಪ್ರೀತಃ ಸುಮುಖಃ ಸೂಕ್ಷ್ಮಃ ಸುಕರೋ ದಕ್ಷಿಣೋಽನಲಃ ॥

---

೧೪೧. ಭೂತಭವ್ಯಭವನ್ನಾಥಃ ಭೂತಭವಿಷ್ಯದ್ವರ್ತಮಾನಕಾಲಗಳ ಪ್ರಭುವು. ಪ್ರಭವಃ ಸಂಸಾರಕಾರಣನು. ಭ್ರಾಂತಿನಾಶನಃ ದೇಹಾದಿಗಳಲ್ಲಿರತಕ್ಕ ಆತ್ಮ ಬುದ್ಧಿಯನ್ನು ಆತ್ಮತತ್ವಜ್ಞಾನದಿಂದ ಹೋಗಲಾಡಿಸುವವನು. ಅರ್ಥಃ ಸರ್ವರಿಂದಲೂ ಪ್ರಾರ್ಥ್ಯನು. ಅನರ್ಥಃ ಹೊಸದಾಗಿ ಪಡೆಯ ಬೇಕಾದುದೇನೂ ಇಲ್ಲದ್ದರಿಂದ ಆಪ್ತಕಾಮನು. ಮಹಾಕೋಶಃ ಅಪರಿಮಿತವಾದ ಧನದಿಂದ ಯುಕ್ತನು· ಮಹಾಕೋಶಃ ಅಪರಿಮಿತವಾದ ಧನ ಉಳ್ಳವನು. ಪರಕಾರ್ಯೈಕಪಂಡಿತಃ ಮೋಕ್ಷದಲ್ಲಿ ಅದ್ವಿತೀಯನಾದ ಪಂಡಿತನು. ಸರ್ವದಾ ಮೋಕ್ಷವೆಂಬ ಪುರುಷಾರ್ಥವನ್ನು ಭಕ್ತರಿಗೂ ಜ್ಞಾನಿಗಳಿಗೂ ಅನುಗ್ರಹಿಸುವ ಕೆಲಸದಿಂದ ಯುಕ್ತನಾದವನೆಂದರ್ಥವು.

೧೪೨. ನಿಷ್ಕಂಟಕಃ ಅರಿಷಡ್ವರ್ಗಗಳನ್ನು ಜಯಿಸಿದವನು. ಕೃತಾನಂದಃ ಅಖಂಡಾನಂದ ದಾಯಕನು. ನಿರ್ವ್ಯಾಜಃ ನಿಷ್ಕಪಟಿಯು. ವ್ಯಾಜಮರ್ದನಃ ಕಾಪಟ್ಯವನ್ನು ನಾಶಮಾಡುವವನು. ಸತ್ವವಾನ್ ನಿತ್ಯವಾದ ಶೌರ್ಯಾದಿಗುಣಸಮೂಹದಿಂದ ಯುಕ್ತನು. ಸಾತ್ವಿಕಃ ಸತ್ವಗುಣ ಪ್ರಧಾನನು. ಸತ್ಯಕೀರ್ತಿಸ್ತಂಭಕೃತಾಗಮಃ ಸತ್ಯಕೀರ್ತಿಗಳಿಗೆ ಆಧಾರವಾಗಿರುವ ವೇದಗಳನ್ನು ತಿಳಿಸಿದವನು.

೧೪೩. ಅಕಂಪಿತಃ ನಿಶ್ಚಲನು. ಗುಣಗ್ರಾಹೀ ಭಕ್ತರಗುಣಗಳನ್ನು ಗ್ರಹಣಮಾಡುವ ಸ್ವಭಾವವುಳ್ಳವನು. ನೈಕಾತ್ಮಾನೈಕ ಕರ್ಮಕೃತ್

**ಸ್ಕಂಧಃ ಸ್ಕಂಧಧರೋ ಧುರ್ಯಃ ಪ್ರಕಟಃ ಪ್ರೀತಿವರ್ಧನಃ ।**
**ಅಪರಾಜಿತಃ ಸರ್ವಸಹೋ ವಿದಗ್ಧಃ ಸರ್ವವಾಹನಃ॥ ೧೪೪॥**

**ಅಧೃತಃ ಸ್ವಧೃತಃ ಸಾಧ್ಯಃ ಪೂರ್ತ ಮೂರ್ತಿರ್ಯಶೋಧರಃ ।**
**ವರಾಹ ಶೃಂಗಧೃಗ್ವಾಯು ರ್ಬಲವಾನೇಕ ನಾಯಕಃ ॥೧೪೫॥**

---

ಸಕಲ ಜೀವರ ಸ್ವಭಾವವಾಗಿದ್ದುಕೊಂಡು ಅನೇಕ ಕರ್ಮಗಳನ್ನು ಮಾಡುವವನು. ಸುಪ್ರೀತಃ ಶೋಭನವಾದ ಅನುಗ್ರಹವನ್ನು ಮಾಡುವವನು. ಸುಮುಖಃ ಸಂಸಾರೋತ್ಪತ್ತಿಗೆ ಕಾರಣಭೂತನು. "ಮುಖಂನಿಸ್ಸರಣೇ ವಕ್ತ್ರೇ" ಎಂದು ವಿಶ್ವಕೋಶವು. ಸುಸೂಕ್ಷ್ಮಃ ಸರ್ವವಸ್ತುಗಳಲ್ಲಿಯೂ ಇರುವವನು. "ಸರ್ವಗತಂ ಸೂಕ್ಷ್ಮಂ" ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಸುಕರಃ ವರಗಳನ್ನು ದಯಪಾಲಿಸುವ ಒಳ್ಳೆಯ ಕೈಗಳುಳ್ಳವನು. ದಕ್ಷಿಣಃ ಸರಳಮಾರ್ಗವುಳ್ಳವನು. ಅನಲಃ ಅಲಂಕಾರ ರಹಿತಃ ತಾನೇ ಸರ್ವರಿಗೂ ಅಲಂಕಾರ ಪ್ರಾಯನಾಗಿರುವವನೆಂದರ್ಥವು.

೧೪೪. ಸ್ಕಂಧಃ ತತ್ವಗಳ ಪ್ರಕಾಂಡ ಸ್ವರೂಪನು. "ಸ್ಕಂಧಃ ಪ್ರಕಾಂಡೇ" ಎಂದು ವಿಶ್ವಕೋಶವು. ತತ್ವಗಳೆಂಬ ಪ್ರಕಾಂಡವನ್ನು ಧರಿಸಿರುವವನು. ಧರ್ಮಃ ಸಮಸ್ತಭೂಭಾರವನ್ನೂ ಹೊತ್ತಿರುವವನು. ಪ್ರಕಟಃ ಸೂರ್ಯಮುಂತಾದ ರೂಪದಿಂದ ಸರ್ವರಿಗೂ ಪ್ರತ್ಯಕ್ಷನಾಗುವವನು. ಪ್ರೀತಿವರ್ಧನಃ ಭಕ್ತರಿಗೆ ತನ್ನಲ್ಲಿರುವ ಪ್ರೀತಿಯನ್ನು ಅಭಿವೃದ್ಧಿಗೊಳಿಸುವವನು. ಅಪರಾಜಿತಃ ಪರಾಜಯವಿಲ್ಲದವನು. ಸರ್ವಸಹಃ ಸರ್ವಸಹನಶೀಲನು. ವಿದಗ್ಧಃ ಜ್ಞಾನಾಗ್ನಿಯಿಂದ ಅಜ್ಞಾನವನ್ನು ಸುಡುವವನು. "ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ" ಎಂದು ಗೀತೆಯಲ್ಲಿ ಹೇಳಿರುತ್ತಾರೆ. ಸರ್ವವಾಹನಃ ತನ್ನ ಭಕ್ತರಿಗೂ ಜ್ಞಾನಿಗಳಿಗೂ ಸಕಲ ಐಶ್ವರ್ಯಗಳನ್ನೂ ಹೊಂದಿಸುತ್ತಿರುವವನು.

೧೪೫. ಅಧೃತಃ ಇತರರ ಆಧಾರವಿಲ್ಲದವನು. ಸ್ವಧೃತಃ ತಾನೇ ಈ ಅನೇಕಕ್ಕೆ ಆಧಾರವಾಗಿರುವವನು. ಸಾಧ್ಯಃ ಕರ್ಮ ಮುಂತಾದ

**ಶ್ರುತಿಪ್ರಕಾಶಃ ಶ್ರುತಿಮಾನ್ ಏಕ ಬಂಧುರನೇಕ ಧೃಕ್ ।**
**ಶ್ರೀವಲ್ಲಭ ಶಿವಾರಂಭಃ ಶಾಂತಭದ್ರಃ ಸಮಂಜಸಃ ॥೧೪೬॥**

**ಭೂಶಯೋ ಭೂತಿಕೃದ್ಭೂತಿಃ ಭೂಷಣೋ ಭೂತವಾಹನಃ ।**
**ಅಕಾಯೋ ಭಕ್ತಕಾಯಸ್ಥಃ ಕಾಲಜ್ಞಾನೀ ಕಲಾವಪುಃ ॥೧೪೭॥**

---

ಯೋಗಗಳ ಸಾಧನೆಯಿಂದ ಪಡೆಯಲು ಅರ್ಹನು. ಪೂರ್ತಮೂರ್ತಿಃ ವಾಪೀ ಕೂಪತಟಾಕ ನಿರ್ಮಾಣ ರೂಪವೂ ಆದ ಧರ್ಮಸ್ವರೂಪನು. ಯಶೋಧರಃ ಕೀರ್ತಿಶಾಲಿಯು. ವರಾಹ ಶೃಂಗಧೃಕ್ ಯಜ್ಞವರಾಹದ ಕೋರೆದಾಡೆಗಳನ್ನು ಮುರಿಯುವವನು. ವಾಯುಃ ವಾಯುಸ್ವರೂಪನು. ಬಲವಾನ್ ನಿತ್ಯವಾದ ಶಕ್ತಿವಂತನು. ಏಕನಾಯಕಃ ಅದ್ವಿತೀಯನಾಗಿರುವುದರಿಂದ ಶ್ರೇಷ್ಠನು, ಎಂದರ್ಥವು. "ನಾಯಕೋನೇತರಿ ಶ್ರೇಷ್ಠೇ" ಎಂದು ವಿಶ್ವಕೋಶವು.

೧೪೬. ಶ್ರುತಿಪ್ರಕಾಶಃ ಔಪನಿಷದಂ ಪುರುಷಂ ಪೃಚ್ಛಾಮಿ ಇತ್ಯಾದಿ ಶ್ರುತಿಗಳಿಂದ ತಿಳಿಸಲ್ಪಡುವ ಸ್ವರೂಪ ಉಳ್ಳವನು. ಸರ್ವದಾ ಶ್ರುತಿಯಿಂದಲೇ ತಿಳಿದುಕೊಳ್ಳಲು ಸಾಧ್ಯನು. ಶ್ರುತಿಮಾನ್ ಸರ್ವದಾ ವೇದಗಳನ್ನು ತಿಳಿದುಕೊಂಡಿರುವವನು. ಏಕಬಂಧುಃ ಪ್ರತ್ಯುಪಕಾರವನ್ನು ಅಪೇಕ್ಷೆಮಾಡದೇ ಉಪಕಾರವನ್ನೇ ಮಾಡುವವನು. ಅದುದರಿಂದ ನಿಜವಾದ ಬಂಧುವು ಶಿವನೊಬ್ಬನೇ. ಅನೇಕಧೃಕ್ ಭಕ್ತರನ್ನು ಬುದ್ಧಿವಂತರನ್ನಾಗಿ ಮಾಡುವವನು. ಶ್ರೀವಲ್ಲಭ ಶಿವಾರಂಭಃ ಲಕ್ಷ್ಮೀ ಪತಿಯಾದ ವಿಷ್ಣುವಿಗೆ ಕಲ್ಯಾಣವನ್ನುಂಟುಮಾಡುವವನು. ಶಾಂತಭದ್ರಃ ಶಾಂತಿಯುಕ್ತರಾದವರಿಗೆ ಕಲ್ಯಾಣವನ್ನುಂಟುಮಾಡುವವನು. ಸಮಂಜಸಃ ಯಥಾರ್ಥವನ್ನು ತಿಳಿದು ತಿಳಿಸುವವನು.

೧೪೭. ಭೂಶಯಃ ಭೂಮಿಯೇ ಹಾಸಿಗೆಯಾಗುಳ್ಳವನು. ಭೂತಿಕೃದ್ಭೂತಯೇ ಸಕಲಜನರಿಗೆ ಐಶ್ವರ್ಯವನ್ನು ಕೊಡುವವರಿಗೂ ಐಶ್ವರ್ಯವನ್ನು ಕೊಡುವವನು. ಭೂಷಣಃ ಸಕಲವನ್ನೂ ಅಲಂಕರಿಸುವವನು.

**ಸತ್ಯವ್ರತಮಹಾತ್ಯಾಗೀ ನಿಷ್ಠಾ ಶಾಂತಿಪರಾಯಣಃ ।**
**ಪರಾರ್ಥ ವೃತ್ತಿರ್ವರದೋ ವಿವಿಕ್ತಃ ಶ್ರುತಿಸಾಗರಃ ॥೧೪೮॥**
**ಅನಿರ್ವಿಣ್ಣೋ ಗುಣಗ್ರಾಹೀ ಕಲಂಕಾಂಕಃ ಕಲಂಕಹಾ ।**
**ಸ್ವಭಾವರುದ್ರೋ ಮಧ್ಯಸ್ಥಃ ಶತ್ರುಘ್ನೋ ಮಧ್ಯನಾಶಕಃ ॥೧೪೯॥**

---

ಎಲ್ಲಕ್ಕೂ ಅಲಂಕಾರದಂತೆ ಕಾಂತಿವಿಶೇಷವನ್ನು ಉಂಟುಮಾಡುವವನು. ಭೂತವಾಹನಃ ಸಕಲಭೂತಗಳೂ ವಾಹನವಾಗುಳ್ಳವನು. ಅಕಾಯಃ ವಾಸ್ತವಸ್ವರೂಪದಲ್ಲಿ ಪಾಂಚಭೌತಿಕವಾದ ಶರೀರರಹಿತನು. ಭಕ್ತ ಕಾಯಸ್ಥಃ ಭಕ್ತರ ಹೃದಯದಲ್ಲಿ ಅನುಭವಕ್ಕೆ ಬರುವವನು. ಕಾಲ ಜ್ಞಾನೀ ತ್ರಿಕಾಲಗಳನ್ನು ಸರ್ವದಾ ತಿಳಿದಿರುವವನು. ಕಲಾವಪುಃ ಸ್ಮರಣ ಮಾತ್ರದಿಂದ ಭಕ್ತರನ್ನು ಸಂಸಾರಸಾಗರದಿಂದ ಹಡಗಿನಂತೆ ದಾಟಿಸಿ ಉದ್ಧಾರ ಮಾಡುವವನು.

೧೪೮. ಸತ್ಯವ್ರತಮಹಾತ್ಯಾಗೀ ಡಂಬಾಚಾರ ವಿಲ್ಲದವರಿಗೆ ಎಲ್ಲ ಪುರುಷಾರ್ಥಗಳನ್ನೂ ಕೊಡುವ ಮಹಾತ್ಯಾಗಿಯಾದವನು. ನಿಷ್ಠಾಶಾಂತಿ ಪರಾಯಣಃ ಭಕ್ತರಿಗೆ ಮರಣ ಕಾಲಪರ್ಯಂತವೂ ಶಾಂತಿನಿರತವಾಗುವಂತೆ ಮಾಡುವವನು. ಪರಾರ್ಥವೃತ್ತಿಃ ಮೋಕ್ಷಾರ್ಥವಾದ ವೃತ್ತಿಯುಳ್ಳವನು. ವರದಃ ಅಪಾಯಕರವಾದ ಮಾಯಾವೃತ್ತಿಗಳನ್ನು ನಾಶಮಾಡುವವನು. ವಿವಿಕ್ತಃ ಜಡವಾದ ಪ್ರಪಂಚಕ್ಕಿಂತ ಬೇರೆ ಯಾದವನು. ಶ್ರುತಿ ಸಾಗರಃ ಶ್ರುತಿಗಳಿಗೆ ಅಪಾರವಾದ ಜಲನಿಧಿಪ್ರಾಯನು.

೧೪೯. ಅನಿರ್ವಿಣ್ಣಃ ಜಗತ್ಸೃಷ್ಟಿಯೇ ಮೊದಲಾದ ಕಾರ್ಯಗಳಲ್ಲಿ ನಿರತನಾದವನೆಂದರ್ಥವು. ಗುಣಗ್ರಾಹೀ ವರವನ್ನು ಕೊಡುವುದರ ಮೂಲಕ ಭಕ್ತರ ಮನಸ್ಸನ್ನು ಆಕರ್ಷಿಸುವವನು. ಕಳಂಕಾಂಕಃ ಚಂದ್ರ ರೂಪನು. ಕಲಂಕಹಾ ಲೋಕಾಪವಾದವನ್ನು ಹೋಗಲಾಡಿಸುವವನು. ಸ್ವಭಾವರುದ್ರಃ ಅಜ್ಞಾನವನ್ನು ಹೋಗಲಾಡಿಸುವ ಸ್ವಭಾವವುಳ್ಳವನು. ಮಧ್ಯಸ್ಥಃ ಬ್ರಹ್ಮ, ವಿಷ್ಣು ಮೊದಲಾದವರ ಮಧ್ಯದಲ್ಲಿರುವವನು. ಶತ್ರುಘ್ನಃ ಶತ್ರುನಾಶಕನು. ಮಧ್ಯನಾಶಕಃ ಮಧ್ಯದಲ್ಲಿ ಹುಟ್ಟಿದ ರುದ್ರನ ಮೂಲಕ ಜಗತ್ತನ್ನು ಸಂಹರಿಸುವವನು.

**ಶಿಖಂಡೀ ಕವಚೀ ಶೂಲೀ ಚಂಡೀ ಮುಂಡೀ ಚ ಕುಂಡಲೀ ।**
**ಮೇಖಲೀ ಕವಚೀ ಖಡ್ಗೀ ಮಾಯೀ ಸಂಸಾರ ಸಾರಥಿಃ ॥೧೫೦॥**
**ಅಮೃತ್ಯುಃ ಸರ್ವದೃಕ್ ಸಿಂಹಸ್ತೇಜೋ ರಾಶಿರ್ಮಹಾಮಣಿಃ ।**
**ಅಸಂಖ್ಯೇಯೋಽಪ್ರಮೇಯಾತ್ಮಾ ವೀರ್ಯವಾನ್ ಕಾರ್ಯಕೋವಿದಃ ॥**
**ವೇದ್ಯೋ ವೇದಾರ್ಥ ವಿದ್ಗೋಪ್ತಾ ಸರ್ವಾಚಾರೋ ಮುನೀಶ್ವರಃ ।**
**ಅನುತ್ತಮೋ ದುರಾಧರ್ಷೋ ಮಧುರಃ ಪ್ರಿಯದರ್ಶನಃ ॥೧೫೨॥**

---

೧೫೦–೧೫೧. ಶಿಖಂಡೀ ಮುಕುಟಧಾರಿಯು. ಕವಚೀ ಸುವರ್ಣ ಕವಚ ವುಳ್ಳವನು ಶೂಲೀ ಶೂಲಾಯುಧ ಉಳ್ಳವನು. ಚಂಡೀ ಚಂಡ ನೆಂಬ ಹೆಸರುಳ್ಳ ಪ್ರಮಥಗಣದಿಂದ ಯುಕ್ತನು. ಮುಂಡೀ ಕೇಶರಹಿತವಾದ ಗಣದಿಂದ ಯುಕ್ತನು. ಕುಂಡಲೀ ಸರ್ಪಕುಂಡಲಗಳುಳ್ಳವನು. ಮೇಖಲೀ ಕಟಿಸೂತ್ರಉಳ್ಳವನು. ಕವಚೀ ಭೇರಿಯುಳ್ಳವನು. ಖಡ್ಗೀ ಚಂದ್ರಹಾಸ ವೆಂಬ ಖಡ್ಗಉಳ್ಳವನು. ಮಾಯೀ ಮಾಯೆಗೂ ಪ್ರಭುವು. ಸಂಸಾರ ಸಾರಥಿಃ ಭಕ್ತರನ್ನು ಸಂಸಾರಸಾಗರದಿಂದ ದಾಟಿಸುವವನು. ಅಮೃತ್ಯುಃ ಸರ್ವದೃಕ್ ನಾಶರಹಿತನಾದ್ದರಿಂದಲೇ ಸಮಸ್ತವನ್ನೂ ಸಾಕ್ಷಿಯಾಗಿರು ತ್ತಾ ತಿಳಿಯುವವನು. ಸಿಂಹಃ ಶತ್ರುಗಳನ್ನು ಹಿಂಸಿಸತಕ್ಕವನು. ತೇಜೋ ರಾಶಿಃ ಮಹಾಮಣಿಃ ತೇಜಃ ಪುಂಜವಾದ ಕೌಸ್ತುಭಮಣಿಯ ಸ್ವರೂ ಪನು. ಅಸಂಖ್ಯೇಯಃ ದುರ್ವಿಜ್ಞೇಯನು. ಅಪ್ರಮೇಯಃ ಪ್ರಮಾಣ ಗಳಿಂದ ತಿಳಿದುಕೊಳ್ಳಲು ಅಸಾಧ್ಯವಾದ ಸ್ವರೂಪಉಳ್ಳವನು. ವೀರ್ಯ ವಾನ್ ಪ್ರಭಾವಶಾಲಿಯು. ಕಾರ್ಯಕೋವಿದಃ ಸರ್ವಕಾರ್ಯಸಾಧನೆ ಯಲ್ಲಿ ನಿಪುಣನು.

೧೫೨. ವೇದ್ಯಃ ಮೋಕ್ಷವನ್ನು ಇಚ್ಛಿಸುವವರಿಂದ ತಿಳಿಯಲು ಶಕ್ಯನು. ವೇದಾರ್ಥವಿದ್ಗೋಪ್ತಾ ವೇದಾರ್ಥವನ್ನು ತಿಳಿದುಕೊಂಡಿರು ವವರನ್ನು ರಕ್ಷಿಸುವವನು. ಸರ್ವಾಚಾರಃ ಸರ್ವಕರ್ಮಗಳಿಗೂ ಕಾರಣ ಭೂತನು. ಮುನೀಶ್ವರಃ ಮನನ ಶೀಲರಿಗೆ ಸ್ವಾಮಿಯು. ಅನುತ್ತಮಃ ವಿಷ್ಣುವಿಗಿಂತಲೂ ಉತ್ತಮನು ಶ್ರೇಷ್ಠನು. ದುರಾಧರ್ಷಃ ಅತಿ ಪ್ರಯಾಸದಿಂದಲೂ ಜಯಿಸಲು ಅಸಾಧ್ಯನು. ಮಧುರಃ ಪುಷ್ಪಗಳಲ್ಲಿ ರಸಗಳನ್ನುಂಟು ಮಾಡುವವನು. ಪ್ರಿಯದರ್ಶನಃ ಸರ್ವ ಶ್ರೇಷ್ಠವಾದ ಆತ್ಮದರ್ಶನ ವನ್ನು ಅನುಗ್ರಹಿಸುವವನು.

**ಸುರೇಶಃ ಶರಣಂ ಸರ್ವಃ ಶಬ್ದಬ್ರಹ್ಮ ಸತಾಂ ಗತಿಃ ।**
**ಕಾಲಭಕ್ಷಃ ಕಲಂಕಾರಿಃ ಕಂಕಣೀ ಕೃತ ವಾಸುಕಿಃ ॥೧೫೩॥**
**ಮಹೇಷ್ವಾಸೋ ಮಹೀಭರ್ತಾ ನಿಷ್ಕಲಂಕೋ ವಿಶೃಂಖಲಃ ।**
**ದ್ಯುಮಣಿಸ್ತರಣಿರ್ಧನ್ಯಃ ಸಿದ್ಧಿದಃ ಸಿದ್ಧಿಸಾಧನಃ ॥೧೫೪॥**
**ನಿವೃತ್ತಃ ಸಂವೃತಃ ಶಿಲ್ಪೋ ವ್ಯೂಢೋರಸ್ಕೋ ಮಹಾಭುಜಃ ।**
**ಏಕಜ್ಯೋತಿ ರ್ನಿರಾತಂಕೋ ನರೋ ನಾರಾಯಣಪ್ರಿಯಃ ॥೧೫೫॥**

---

೧೫೩. ಸುರೇಶಃ ಇಂದ್ರ ಮೊದಲಾದ ದೇವತೆಗಳಿಗೆ ಪ್ರಭುತ್ವವನ್ನು ಕೊಟ್ಟಿರುವವನು. ಶರಣಃ ಸಕಲರಕ್ಷಕನು. ಸರ್ವಃ ವಿಶ್ವರೂಪನು. ಶಬ್ದ ಬ್ರಹ್ಮಸತಾಂಗತಿಃ ಶಬ್ದರೂಪವಾದ ಬ್ರಹ್ಮತತ್ವವನ್ನು ಚಿಂತನೆ ಮಾಡುವವರಿಗೆ ಗಮ್ಯವಾದ ಸ್ಥಾನಸ್ವರೂಪನು. ಕಂಕಣೀ ಕೃತವಾಸುಕಿಃ ವಾಸುಕಿಯೆಂಬ ಸರ್ಪವನ್ನು ಕಂಕಣವನ್ನಾಗಿ ಮಾಡಿಕೊಂಡಿರುವವನು.

೧೫೪. ಮಹೇಷ್ವಾಸಃ ಪೂಜ್ಯವಾದ ಧನುಸ್ಸನ್ನು ಧರಿಸಿರುವವನು. ಮಹೀಭರ್ತಾ ಜಗದ್ಧಾರಕನು, ನಿಷ್ಕಲಂಕಃ ಅವಿದ್ಯೆಯೆಂಬ ಮಲದ ಸಂಪರ್ಕವಿಲ್ಲದವನು. ವಿಶೃಂಖಲಃ ಲೋಕವನ್ನು ಮಾಯೆಯೆಂಬ ಬಲೆಯಲ್ಲಿ ಬಂಧಿಸುವವನು. ದ್ಯುಮಣಿಃ ತರಣಿಃ ಅಂತರಿಕ್ಷಕ್ಕೆ ರತ್ನಪ್ರಾಯನಾದ ಸೂರ್ಯನ ಸ್ವರೂಪನು. ಧನ್ಯಃ ಕೃತಕೃತ್ಯನು. ಸಿದ್ಧಿದಃ ಅಣಿಮಾದಿಸಿದ್ಧಿಗಳನ್ನು ಉಂಟುಮಾಡುವವನು. ಸಿದ್ಧಿಸಾಧನಃ ಅಣಿಮಾದಿಸಿದ್ಧಿಗಳ ಸಾಧನಗಳನ್ನು ಕೊಡುವವನು.

೧೫೫. ನಿವೃತ್ತಃ ಕರ್ಮಾಧೀನವಾದ ಜನ್ಮಸಂಬಂಧರಹಿತನು. ಸಂವೃತಃ ಅವಿದ್ಯೆಯಿಂದ ಸುತ್ತುವರಿಯಲ್ಪಟ್ಟವನು. ಶಿಲ್ಪಃ ಬ್ರಹ್ಮಾಂಡ ನಿರ್ಮಾಣವೇ ಮೊದಲಾದ ಕಲಾಕೌಶಲ್ಯವನ್ನು ಹೊಂದಿರುವವನು. ವ್ಯೂಢೋರಸ್ಕಃ ವಿಸ್ತಾರವಾದ ಹೃದಯ ಉಳ್ಳವನು. ಮಹಾಭುಜಃ ಉದ್ದವಾದ ತೋಳುಗಳುಳ್ಳವನು. ಏಕಜ್ಯೋತಿಃ ಅದ್ವಿತೀಯವಾದ ಚಿತ್ಪ್ರಕಾಶ ಉಳ್ಳವನು. ನಿರಾತಂಕಃ ಭಯರೋಗರಹಿತನು. ನರಃ ನಾರಾಯಣ ಪ್ರಿಯಃ ನರನೆಂದು ಹೆಸರುಳ್ಳ ಧರ್ಮಪುತ್ರನು. ಮತ್ತು ನಾರಾಯಣ ನೆಂಬ ಹಿರಿಯಣ್ಣನಿಗೆ ಪ್ರೀತಿಪಾತ್ರನು.

ನಿರ್ಲೇಪೋ ನಿಷ್ಪ್ರಪಂಚಾತ್ಮಾ ನಿರ್ವ್ಯಗ್ರೋ ವ್ಯಗ್ರನಾಶನಃ ।
ಸ್ತವ್ಯಸ್ತವಪ್ರಿಯಃ ಸ್ತೋತಾ ವ್ಯಾಸಮೂರ್ತಿರನಾಕುಲಃ ॥೧೫೬॥
ನಿರವದ್ಯಪದೋಪಾಯೋ ವಿದ್ಯಾರಾಶಿರವಿಕ್ರಮಃ ।
ಪ್ರಶಾಂತ ಬುದ್ಧಿ ರಕ್ಷುದ್ರಃ ಕ್ಷುದ್ರಹಾ ನಿತ್ಯ ಸುಂದರಃ ॥೧೫೭॥
ಧೈರ್ಯಾಗ್ರ್ಯಧುರ್ಯೋ ಧಾತ್ರೀಶಃ ಶಾಕಲ್ಯಃ ಶರ್ವರೀಪತಿಃ ।
ಪರಮಾರ್ಥ ಗುರುರ್ದೃಷ್ಟಿಃ ಗುರುರಾಶ್ರಿತವತ್ಸಲಃ ॥೧೫೮॥

---

೧೫೬. ನಿರ್ಲೇಪಃ ಕರ್ಮಫಲ ಸುಖದುಃಖ ಸಂಬಂಧವಿಲ್ಲದವನು. ನಿಷ್ಪ್ರಪಂಚಾತ್ಮಾ ಪಂಚಭೂತಗಳ ಸಮುದಾಯದಿಂದುಂಟಾದ ದೇಹವಿಲ್ಲದವನು. ನಿರ್ವ್ಯಗ್ರಃ ನಿರ್ಮಲಾಂತಃ ಕರಣನು. ವ್ಯಗ್ರನಾಶನಃ ಕಾಮ್ಯಕರ್ಮದಲ್ಲಿ ನಿರತರಾದ ದುಷ್ಟರನ್ನು ನಾಶಮಾಡುವವನು. ಸ್ತವ್ಯಸ್ತವಪ್ರಿಯಃ ಜ್ಞಾನಿಗಳ ಸ್ತೋತ್ರಗಳಿಗೆ ಪಾತ್ರನು. ಸ್ತೋತಾ ಸ್ತೋತ್ರ ಮಾಡುವವನು. ವ್ಯಾಸಮೂರ್ತಿಃ ವೇದಗಳನ್ನು ವಿಭಾಗಮಾಡಿದ ವ್ಯಾಸಋಷಿಗಳಸ್ವರೂಪನು, ಅನಾಕುಲಃ ಅರಿಡ್ವರ್ಗಗಳಿಂದುಂಟಾಗುವ ತೊಂದರೆಗಳಿಂದ ಬಹಿರ್ಭೂತನು.

೧೫೭. ನಿರವದ್ಯಪದೋಪಾಯಃ ಅಪಾಯ ಮುಂತಾದ ದೋಷಗಳಿಂದ ರಹಿತವಾದ ಮೋಕ್ಷಕ್ಕೆ ಉಪಾಯ ಭೂತನು. ವಿದ್ಯಾರಾಶಿಃ ಸರ್ವ ವಿದ್ಯಾ ಸಮುದಾಯದ ಉತ್ಪಾದಕನು. ಅವಿಕ್ರಮಃ ಅಹಂಕಾರವಿಲ್ಲದ ಅಂತಃ ಕರಣ ಶುದ್ಧಿಯಿಂದ ಸಾಕ್ಷಾತ್ಕರಿಸಲು ಯೋಗ್ಯನೆಂದರ್ಥವು. ಪ್ರಶಾಂತಬುದ್ಧಿಃ ಅಕ್ಷುದ್ರಃ ಶಾಂತಮನಸ್ಸುಳ್ಳವನಾದುದರಿಂದಲೇ ವಿಷಮ ದೃಷ್ಟಿಯಿಲ್ಲದವನು. ಕ್ಷುದ್ರಹಾ ವಿಷಮಬುದ್ಧಿಯುಳ್ಳವರನ್ನು ನಾಶಮಾಡುವವನು. ನಿತ್ಯಸುಂದರಃ ಸದಾಕಾಲವೂ ಸುಂದರನಾಗಿರುವವನು.

೧೫೮. ಧೈರ್ಯಾಗ್ರ್ಯಧುರ್ಯಃ ಧೈರ್ಯವಂತರಲ್ಲಿ ಶ್ರೇಷ್ಠನಾದವನು. ಧಾತ್ರೀಶಃ ಪೃಥ್ವೀಶನು. ಶಾಕಲ್ಯಃ ಶಾಕಲ್ಯನೆಂಬ ಋಷಿಯುಸ್ವರೂಪನು. ಶರ್ವರೀಪತಿಃ ರಾತ್ರಿಗಳಿಗೆ ಸ್ವಾಮಿಯು. ಪರಮಾರ್ಥಗುರುಃ ದೃಷ್ಟಿಃ

**ರಸೋ ರಸಜ್ಞಃ ಸರ್ವಜ್ಞಃ ಸರ್ವಸತ್ತ್ವಾವಲಂಬನಃ ।**

**॥ ಸೂತಃ ಉವಾಚ ॥**

**ಏವಂ ನಾಮ್ನಾಂ ಸಹಸ್ರೇಣ ತುಷ್ಟಾವ ವೃಷಭಧ್ವಜಂ ॥೧೫೯॥**
**ಸ್ನಾಪಯಾಮಾಸ ಚ ವಿಭುಃ ಪೂಜಯಾಮಾಸ ಪಂಕಜೈಃ ।**
**ಪರೀಕ್ಷಾರ್ಥಂ ಹರೇಃ ಪೂಜಾ ಕಮಲೇಷು ಮಹೇಶ್ವರಃ ॥೧೬೦॥**
**ಗೋಪಯಾಮಾಸ ಕಮಲಂ ತದೈಕಂ ಭುವನೇಶ್ವರಃ ।**
**ಹೃತಪುಷ್ಪೋ ಹರಿಸ್ತತ್ರ ಕಿಮಿದಂ ತ್ವಭ್ಯ(ತ್ವಿತ್ಯ) ಚಿಂತಯತ್ ॥**

---

ಮೋಕ್ಷಮಾರ್ಗಗಳನ್ನು ಉಪದೇಶಿಸುವ ವೇದಗಳಸ್ವರೂಪನು. ಆದ್ದರಿಂದಲೇ ಕಣ್ಣಿನಸ್ವರೂಪನು. "ವೇದೈಃ ಪಶ್ಯಂತಿ ವಾಡವಾಃ" ಎಂದು ಹೇಳಿರುತ್ತದೆ. ಗುರುಃ ಹಿತೋಪದೇಶಕನು. ಆಶ್ರಿತವತ್ಸಲಃ ಭಕ್ತರಲ್ಲಿ ಪ್ರೀತಿಯುಳ್ಳವನು.

೧೫೯. ರಸಃ ಬ್ರಹ್ಮರಸಸ್ವರೂಪನು. "ರಸೋ ವೈ ಸಃ" ಎಂದು ವೇದದಲ್ಲಿ ಹೇಳಿರುತ್ತದೆ. ರಸಜ್ಞಃ ಭಕ್ತರಿಗೆ ಬ್ರಹ್ಮರಸದ ಅನುಭವ ಜ್ಞಾನವನ್ನು ಉಂಟುಮಾಡುವವನು. ಸರ್ವಜ್ಞಃ ಸಮಸ್ತವನ್ನೂ ತಿಳಿದಿರುವವನು. ಸರ್ವಸತ್ತ್ವಾವಲಂಬನಃ ನಿಖಿಲಪ್ರಾಣಿಗಳಿಗೆ ಆಶ್ರಯಭೂತನು. ಎಲ್ಲಕ್ಕೂ ಇರುವಿಕೆಯನ್ನು ಉಂಟುಮಾಡುವವನು.
ಸೂತನು ಹೇಳಿದನು :—

ಮೇಲೆ ಹೇಳಿದರೀತಿಯಲ್ಲಿ ವಿಷ್ಣುವು ವೃಷಭವೇಧ್ವಜವಾಗಿ ಉಳ್ಳ ಆ ಪರಮೇಶ್ವರನನ್ನು ಸ್ನಾನಮಾಡಿಸಿ ಸಹಸ್ರನಾಮಗಳಿಂದ ಸ್ತೋತ್ರಮಾಡಿ ಕಮಲಗಳಿಂದ ಪೂಜಿಸಿದನು.

೧೬೦. ಹೀಗೆ ಪೂಜಿಸುತ್ತಿದ್ದ ವಿಷ್ಣುವಿನ ಭಕ್ತಿಯನ್ನು ಪರೀಕ್ಷೆ ಮಾಡುವುದಕ್ಕೋಸ್ಕರ ಪೂಜ್ಯನಾದ ಪರಮೇಶ್ವರನು ಪೂಜೆಗಾಗಿ ಶೇಖರಿಸಿದ್ದ ಕಮಲಗಳಲ್ಲಿ ಒಂದು ಕಮಲವನ್ನು ಕಣ್ಮರೆಯಾಗುವಂತೆ ಮಾಡಿದನು. ಅವನ ಕಣ್ಣಿಗೆ ಕಾಣಿಸದಂತೆ ಮಾಡಿದನೆಂದರ್ಥವು.

೧೬೧-೧೬೨. ಒಂದು ಹೂವು ಕಣ್ಣಿಗೆ ಕಾಣಿಸದೆ ಇರಲು ವಿಷ್ಣುವು

ಜ್ಞಾತ್ವಾ ಸ್ವನೇತ್ರ ಮುದ್ಧೃತ್ಯ ಸರ್ವತತ್ವಾವಲಂಬಿನಂ ।
ಪೂಜಯಾಮಾಸ ಭಾವೇನ ನಾಮ್ನಾ ತೇನ ಜಗದ್ಗುರುಂ ॥೧೬೨॥

ತತಸ್ತತ್ರ ವಿಭು ರ್ದೃಷ್ಟ್ವಾ ತಥಾಭೂತಂ ಹರೋ ಹರಿಂ ।
ತಸ್ಮಾ ದವ ತತಾರಾಶು ಮಂಡಲಾ ತ್ಪಾವಕಸ್ಯ ಚ ॥೧೬೩॥

ಕೋಟಿಭಾಸ್ಕರ ಸಂಕಾಶಂ ಜಟಾಮುಕುಟ ಮಂಡಿತಂ ।
ಜ್ವಾಲಾ ಮಾಲಾಽಽವೃತಂ ದಿವ್ಯಂ ತೀಕ್ಷ್ಣದಂಷ್ಟ್ರಭಯಂಕರಂ ॥

ಶೂಲಟಂಕಗದಾಚಕ್ರ ಕುಂತಪಾಶಧರಂ ಹರಂ ।
ವರದಾಭಯ ಹಸ್ತಂ ಚ ದ್ವೀಪಿಚರ್ಮೋತ್ತರೀಯಕಂ ॥೧೬೫॥

ಇತ್ಥಂ ಭೂತಂ ತದಾ ದೃಷ್ಟ್ವಾ ಭವಂ ಭಸ್ಮವಿಭೂಷಿತಂ ।
ಹೃಷ್ಟೋ ನಮಶ್ಚಕಾರಾಶು ದೇವದೇವಂ ಜನಾರ್ದನಃ ॥೧೬೬॥

---

ಇದು ಏನೆಂದು ಚಿಂತಿಸುವವನಾಗಿ, ಅನಂತರದಲ್ಲಿ ಈಶ್ವರನ ಇಚ್ಛೆಯನ್ನು ತಿಳಿದು, ಕಮಲದಂತಿರುವ ತನ್ನ ಒಂದು ಕಣ್ಣನ್ನು ಕಿತ್ತು ಸಮಸ್ತ ಪ್ರಾಣಿಗಳಿಗೂ ಆಶ್ರಯಭೂತನಾದ ಪರಮೇಶ್ವರನನ್ನು ಅದೇ ಭಾವನೆಯಿಂದ ಪೂಜಿಸಿದನು.

೧೬೩. ಈ ರೀತಿಯಲ್ಲಿ ಕಣ್ಣನ್ನು ಕಿತ್ತು ತನ್ನ ಪೂಜೆಯನ್ನು ಮಾಡಿದ ವಿಷ್ಣುವನ್ನು ನೋಡಿ, ಪರಮೇಶ್ವರನು ಅಗ್ನಿಲಿಂಗದ ಮಂಡಲದ ಮೂಲಕ ಪ್ರಾದುರ್ಭವಿಸಿದನು.

೧೬೪–೧೬೬. ಕೋಟಿ ಸೂರ್ಯರಿಗೆ ಸಮಾನವಾದ ಪ್ರಕಾಶವುಳ್ಳ ಜಟೆಯನ್ನೂ ಮತ್ತು ಕಿರೀಟವನ್ನೂ ಧರಿಸಿ, ಅಗ್ನಿಜ್ವಾಲೆಗಳ ಸಮುದಾಯದಿಂದ ಯುಕ್ತನೂ, ತೀಕ್ಷ್ಣವಾದ ಕೋರೆದಾಡೆಗಳುಳ್ಳವನೂ ಆಗಿ, ಭಯಂಕರನಾಗಿರುವ, ಶೂಲವೇ ಮೊದಲಾದ ಆಯುಧಗಳನ್ನು ಧರಿಸಿದವನಾಗಿಯೂ, ವರಗಳನ್ನು ಕೊಡುವ ಅಭಯ ಹಸ್ತಗಳನ್ನು ನೀಡಿರುವ ಮತ್ತು ವ್ಯಾಘ್ರಚರ್ಮವನ್ನು ಹೊದ್ದಿರುವ ಭಸ್ಮದಿಂದ ಅಲಂಕೃತನಾದ ಪೂಜ್ಯನಾದ ಶಿವನನ್ನು ನೋಡಿ ಸಂತೋಷಗೊಂಡ ವಿಷ್ಣುವು ನಮಸ್ಕಾರವನ್ನು ಮಾಡಿದನು.

ದುದ್ರುವು ಸ್ತಂ ಪರಿಕ್ರಮ್ಯ ಸೇಂದ್ರಾ ದೇವಾ ಸ್ತ್ರಿಲೋಚನಂ ।
ಚಚಾಲ ಬ್ರಹ್ಮಭುವನಂ ಚಕಂಪೇ ಚ ವಸುಂಧರಾ ॥೧೬೭॥

ದದಾಹ ತೇಜಸ್ತತ್ ಶಂಭೋಃ ಪ್ರಾಂತಂ ವೈ ಶತಯೋಜನಂ ।
ಅಧಸ್ತಾಚ್ಚೋರ್ಧ್ವತಶ್ಚೈವ ಹಾಹೇತ್ಯಕೃತ ಭೂತಲೇ ॥೧೬೮॥

ತದಾ ಪ್ರಾಹ ಮಹಾದೇವಃ ಪ್ರಹಸನ್ನಿವ ಶಂಕರಃ ।
ಸಂಪ್ರೇಕ್ಷ್ಯ ಪ್ರಣಯಾದ್ವಿಷ್ಣುಂ ಕೃತಾಂಜಲಿಪುಟಂ ಸ್ಥಿತಂ ॥೧೬೯॥

ಜ್ಞಾತಂ ಮಯೇದ ಮಧುನಾ ದೇವಕಾರ್ಯಂ ಜನಾರ್ದನ ।
ಸುದರ್ಶನಾಖ್ಯಂ ಚಕ್ರಂ ಚ ದದಾಮಿ ತವ ಶೋಭನಂ ॥೧೭೦॥

ಯದ್ರೂಪಂ ಭವತಾ ದೃಷ್ಟಂ ಸರ್ವಲೋಕಭಯಂಕರಂ ।
ಹಿತಾಯ ತವ ಯತ್ನೇನ ತವ ಭಾವಾಯ ಸುವ್ರತ ॥೧೭೧॥

---

೧೬೭-೧೬೮. ರೌದ್ರಾವತಾರಯುಕ್ತನಾದ ಶಿವನನ್ನು ನೋಡಿ ಇಂದ್ರನಿಂದ ಒಡಗೂಡಿದ ದೇವತೆಗಳು ಓಡಿಹೋದರು. ಬ್ರಹ್ಮ ಲೋಕವೂ ನಡುಗಿತು. ಭೂಮಿಯೂ ನಡುಗಿತು. ಪರಮೇಶ್ವರನ ಆದಿವ್ಯ ತೇಜಸ್ಸು ಶತಯೋಜನ ವಿಸ್ತೀರ್ಣವುಳ್ಳ ಪ್ರದೇಶವನ್ನು ದಹಿಸಿತು. ಅಂತರಿಕ್ಷದಲ್ಲಿಯೂ, ಪಾತಾಳದಲ್ಲಿಯೂ, ಮತ್ತು ಭೂಲೋಕದಲ್ಲಿಯೂ, ಹಾಹಾಕಾರವನ್ನುಂಟುಮಾಡಿತು.

೧೬೯. ಆಗ ಪೂಜ್ಯನಾದ ಮತ್ತು ಲೋಕ ಕಲ್ಯಾಣಕರನಾದ ಪರಮೇಶ್ವರನು ಪ್ರೀತಿಯಿಂದ ಅಂಜಲಿ ಬದ್ಧನಾದ ವಿಷ್ಣುವನ್ನು ಕುರಿತು ಮಂದಹಾಸವುಳ್ಳವನಾಗಿ ಹೀಗೆಂದನು.

೧೭೦-೧೭೧. ಎಲೈ ವಿಷ್ಣುವೇ, ದೇವತೆಗಳು ಯಾವಕಾರ್ಯ ಸಾಧನೆಗೆ ಬಂದಿರುವರೋ ಅದನ್ನು ನಾನು ತಿಳಿದಿರುವೆನು. ಮತ್ತು ಪೂಜ್ಯವಾದ ಸುದರ್ಶನವೆಂಬ ಚಕ್ರವನ್ನು ನಿನಗೆ ಕೊಡುತ್ತೇನೆ. ಸಮಸ್ತ ಲೋಕಗಳಿಗೂ ಭಯಕಾರಕವಾದ ಯಾವ ಘೋರರೂಪವನ್ನು ನೀನು ನೋಡಿರುವೆಯೋ ಆ ರೂಪವು ನಿನ್ನ ಭಕ್ತಿಗೂ ಮತ್ತು ನಿನ್ನ ಹಿತಕ್ಕೂ ಸಾಧಕವಾಗಿರುತ್ತದೆ. ದೇವತೆಗಳಿಗೆ ಯುದ್ಧದಲ್ಲಿ ಸೌಮ್ಯರೂಪವು

**ಶಾಂತಂ ರಣಾಜಿರೇ ವಿಷ್ಣೋ ದೇವಾನಾಂ ದುಃಖಸಾಧನಂ ।**
**ಶಾಂತಸ್ಯ ಚಾಸ್ತ್ರಂ ಶಾಂತಿಃ ಸ್ಯಾ ಚ್ಛಾಂತೇನಾಸ್ತ್ರೇಣ ಕಿಂ ಫಲಂ ॥**
**ಶಾಂತಸ್ಯ ಸಮರೇ ಚಾಸ್ತ್ರಂ ಶಾಂತಿರೇವ ತಪಸ್ವಿನಂ ।**
**ಯೋದ್ಧುಃ ಶಾಂತ್ಯಾ ಬಲಚ್ಛೇದಃ ಪರಸ್ಯ ಬಲವೃದ್ಧಿದಃ ॥೧೭೩॥**
**ದೇವೈರಶಾಂತೈರ್ಯದ್ರೂಪಂ ಮದೀಯಂ ಭಾವಯಾವ್ಯಯಂ ।**
**ಕಿಮಾಯುಧೇನ ಕಾರ್ಯಂ ವೈ ಯೋದ್ಧುಂ ದೇವಾರಿಸೂದನ (೦) ॥**
**ಕ್ಷಮಾ ಯುಧಿ ನ ಕಾರ್ಯಂ ವೈ ಯೋದ್ಧುಂ ದೇವಾರಿಸೂದನ ।**
**ಅನಾಗತೇಽತೀತೇ ಚ ದೌರ್ಬಲ್ಯೇ ಸ್ವಜನೋತ್ಕರೇ ॥೧೭೫॥**
**ಅಕಾಲಿಕೇ ತ್ವಧರ್ಮೇ ಅನರ್ಥೇ ವಾಽರಿಸೂದನ ।**
**ಏವಮುಕ್ತ್ವಾ ದದೌ ಚಕ್ರಂ ಸೂರ್ಯಾಯುತ ಸಮಪ್ರಭಂ ॥೧೭೬॥**

---

ದುಃಖಜನಕವಾಗಿರುತ್ತದೆ. ಶಾಂತನಾದವನಿಗೆ ಶಾಂತಿಯೇ ಅಸ್ತ್ರವಾಗಿರುತ್ತದೆ. ಯುದ್ಧದಲ್ಲಿ ಆಶಾಂತಾಸ್ತ್ರದಿಂದ ಏನು ಪ್ರಯೋಜನವು?

೧೭೩–೧೭೫. ಶಾಂತನಾಗಿರುವವನು ತಪಸ್ವಿಯನ್ನು ಉದ್ದೇಶಿಸಿ ಶಾಂತಿಯನ್ನೇ ಅಸ್ತ್ರವಾಗಿ ಉಪಯೋಗಿಸಬೇಕು. ಯುದ್ಧಮಾಡುವವನಿಗೆ ಶಾಂತಿ ಗುಣರೂಪದ ಧ್ಯಾನದಿಂದ ಬಲಕುಗ್ಗುವುದು. ಅಲ್ಲದೆ ಶತ್ರುವಿನ ಬಲವು ಹೆಚ್ಚುತ್ತದೆ. ಆದುದರಿಂದ ದೇವಶತ್ರುನಾಶಕನಾದ ವಿಷ್ಣುವೇ, ಶಾಂತರಾದ ದೇವತೆಗಳು ಶಾಶ್ವತವಾದ ದೇವತೆಗಳ ಶತ್ರುಗಳ ಶತ್ರುಗಳನ್ನು ನಾಶಮಾಡುವ, ಘೋರವಾದ ನನ್ನರೂಪವನ್ನು ಧ್ಯಾನಿಸುವಂತೆಮಾಡು. ಶಸ್ತ್ರಾಸ್ತ್ರಗಳಿಂದ ಪ್ರಯೋಜನವೇನು? ಯುದ್ಧದಲ್ಲಿ ಕ್ಷಮಾ ಗುಣವನ್ನು ತೋರಿಸಬಾರದು. ಯುದ್ಧವು ಬರದೆಇರುವಾಗಲೂ, ಅಶಕ್ತಿಯಲ್ಲೂ, ಸ್ವಜನಸಮುದಾಯದಲ್ಲೂ, ಅನುಚಿತವಾದ ಕಾಲದಲ್ಲಿ ಅಧರ್ಮಾಚರಣೆಯಲ್ಲೂ, ಅನರ್ಥವಾಗುವಾಗಲೂ, ಓ ಶತ್ರುನಾಶಕ ವಿಷ್ಣುವೇ, ( ಅ )ಕ್ಷಮೆಯನ್ನು ತೋರಿಸಬೇಕು.

೧೭೬–೧೭೮. ಹೀಗೆಂಬುದಾಗಿ ಹೇಳಿ ಸ್ವಾಮಿಯಾದ ಪರಮೇಶ್ವರನು ಸೂರ್ಯ ಮಂಡಲಕ್ಕೆ ಸದೃಶವಾದ ಕಾಂತಿಯುಳ್ಳ ಸುದರ್ಶನವೆಂಬ ಚಕ್ರವನ್ನು ಮತ್ತು ಪದ್ಮಸದೃಶವಾದ ಕಣ್ಣನ್ನೂ ವಿಷ್ಣುವಿಗೆ ದಯಪಾಲಿಸಿ

ನೇತ್ರಂ ಚ ನೇತಾ ಜಗತಾಂ ಪ್ರಭುರ್ವೈ ಪದ್ಮಸನ್ನಿಭಂ ।
ತದಾ ಪ್ರಭೃತಿ ತಂ ಪ್ರಾಹುಃ ಪದ್ಮಾಕ್ಷಮಿತಿ ಸುವ್ರತಂ ॥೧೭೭॥
ದತ್ವೈನಂ ನಯನಂ ಚಕ್ರಂ ವಿಷ್ಣವೇ ನೀಲಲೋಹಿತಃ ।
ಪಸ್ಪರ್ಶ ಚ ಕರಾಭ್ಯಾಂ ವೈ ಸುಶುಭಾಭ್ಯಾಂ ಮುವಾಚ ಹ ॥೧೭೮॥
ವರದೋಽಹಂ ವರಶ್ರೇಷ್ಠ ವರಾನ್ವರಯ ಚೇಪ್ಸಿತಾನ್ ।
ಭಕ್ತ್ಯಾ ವಶೀಕೃತೋ ನೂನಂ ತ್ವಯಾಽಹಂ ಪುರುಷೋತ್ತಮ ॥
ಇತ್ಯುಕ್ತೋ ದೇವದೇವೇನ ದೇವದೇವಂ ಪ್ರಣಮ್ಯ ತಂ ।
ತ್ವಯಿ ಭಕ್ತಿರ್ಮಹಾದೇವ ಪ್ರಸೀದ ವರಮುತ್ತಮಂ ॥೧೮೦॥

---

ದನು. ಆ ಕಾಲದಿಂದ ಮೊದಲುಗೊಂಡು ವಿಷ್ಣುವನ್ನು ಪದ್ಮಾಕ್ಷನೆಂದು ಪುಂಡರೀ ಕಾಕ್ಷನೆಂದೂ ಕರೆಯುತ್ತಾರೆ. ಈರೀತಿಯಲ್ಲಿ ವಿಷ್ಣುವಿಗೆ ಚಕ್ರವನ್ನೂ ಮತ್ತು ಕಣ್ಣನ್ನೂ ಕೊಟ್ಟು, ಪರಮೇಶ್ವರನು ತನ್ನ ಶೋಭನ ವಾದ ಕೈಗಳಿಂದ ವಿಷ್ಣುವನ್ನು ಸ್ಪರ್ಶಿಸಿ, ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.

೧೭೯. ಎಲೈ ಶ್ರೇಷ್ಠನಾದ ವಿಷ್ಣುವೇ, ನಾನು ವರಗಳನ್ನು ಕೊಡು ವವನಾಗಿರುವೆನು. ಅಭಿಪ್ರೇತವಾದ ವರಗಳನ್ನು ಕೇಳುವವನಾಗು. ನಿಸ್ಸಂಶಯವಾಗಿಯೂ ನಿನ್ನ ಭಕ್ತಿಯಿಂದ ನಾನು ನಿನಗೆ ಅಧೀನನಾಗಿ ರುವೆನು.

೧೮೦. ಪರಮೇಶ್ವರನಿಂದ ಹೀಗೆ ಹೇಳಲ್ಪಟ್ಟವನಾಗಿ ವಿಷ್ಣುವು ದೇವತೆಗಳಿಗೆ ಸ್ವಾಮಿಯಾದ ಆ ಮಹಾದೇವನನ್ನು ನಮಸ್ಕರಿಸಿ ಹೀಗೆ ವಿಜ್ಞಾಪಿಸಿದನು. ಓ ಮಹಾದೇವನೇ, ಯಾವ ವರದಿಂದ ದೇವತೆಗಳ ತೊಂದರೆಯು ನಿವಾರಣೆಯಾಗುತ್ತದೆಯೋ ಆ ವರಗಳಲ್ಲಿ ಶ್ರೇಷ್ಠವಾದು ದನ್ನು ಅನುಗ್ರಹಿಸುವವನಾಗು. ಅದಕ್ಕಿಂತಲೂ ಬೇರೆಯ ವರವನ್ನು ನಾನು ಅಪೇಕ್ಷಿಸುವುದಿಲ್ಲ.

ನಾನ್ಯಮಿಚ್ಛಾಮಿ ಭಕ್ತಾನಾ ಮಾರ್ತಯೋ ನಾಸ್ತಿ ಯತ್ಪ್ರಭೋ ।
ತಚ್ಛ್ರುತ್ವಾ ವಚನಂ ತಸ್ಯ ದಯಾವಾನ್ ಸುತರಾಂ ಭವಃ ।
ಪಸ್ಪರ್ಶ ಚ ದದೌ ತಸ್ಮೈ ಶ್ರದ್ಧಾಂ ಶೀತಾಂಶು ಭೂಷಣಃ ॥೧೮೧॥

ಪ್ರಾಹ ಚೈವ ಮಹಾದೇವಃ ಪರಮಾತ್ಮಾನ ಮಚ್ಯುತಂ ।
ಮಯಿ ಭಕ್ತಶ್ಚ ವಂದ್ಯಶ್ಚ ಪೂಜ್ಯಶ್ಚೈವ ಸುರಾಸುರೈಃ ॥೧೮೨॥

ಭವಿಷ್ಯಸಿ ನ ಸಂದೇಹೋ ಮತ್ಪ್ರಸಾದಾತ್ಸುರೋತ್ತಮ ।
ಯದಾ ಸತೀ ದಕ್ಷಪುತ್ರೀ ವಿನಿಂದ್ಯೈವ ಸುಲೋಚನಾ ॥೧೮೩॥

ಮಾತರಂ ಪಿತರಂ ದಕ್ಷಂ ಭವಿಷ್ಯತಿ ಸುರೇಶ್ವರೀ ।
ದಿವ್ಯಾ ಹೈಮವತೀ ವಿಷ್ಣೋ ತದಾ ತ್ವಮಪಿ ಸುವ್ರತಾ ॥೧೮೪॥

ಭಗಿನೀಂ ತವ ಕಲ್ಯಾಣೀಂ ದೇವೀಂ ಹೈಮವತೀ ಮುಮಾಂ ।
ನಿಯೋಗಾದ್ಬ್ರಹ್ಮಣಃ ಸಾಧ್ವೀಂ ಪ್ರದಾಸ್ಯಸಿ ಮಮೈವ ತಾಂ ॥

---

೧೮೧-೧೮೨. ಹೀಗೆಂದು ಹೇಳಿದ ವಿಷ್ಣುವಿನ ಮಾತನ್ನು ಕೇಳಿ ದಯಾವಂತನಾದ ಮತ್ತು ಚಂದ್ರಶೇಖರನಾದ ಶಿವನು ವಿಷ್ಣುವನ್ನು ಮುಟ್ಟಿದನು. ಮತ್ತು ಶ್ರದ್ಧಾಗುಣವನ್ನು ಕೊಟ್ಟನು. ಅನಂತರದಲ್ಲಿ ಶ್ರೇಷ್ಠನಾದ ವಿಷ್ಣುವನ್ನು ಕುರಿತು ಮುಂದೆ ಹೇಳುವರೀತಿಯಲ್ಲಿ ಹೇಳಿದನು. ಎಲೈ ದೇವತೆಗಳಲ್ಲಿ ಶ್ರೇಷ್ಠನಾದ ವಿಷ್ಣುವೇ, ನನ್ನ ಅನುಗ್ರಹದಿಂದ ನೀನು ಶಿವಭಕ್ತನಾಗಿಯೂ, ದೇವತೆಗಳಿಂದ ನಮುಸ್ಕರಿಸಲ್ಪಡುವವನಾಗಿಯೂ, ಮತ್ತು ಪೂಜಿಸಲ್ಪಡುವವನಾಗಿಯೂ ಇರುವೆ. ಈ ವಿಷದಲ್ಲಿ ಯಾವ ಸಂದೇಹವೂ ಇರುವುದಿಲ್ಲ.

೧೮೩-೧೮೭. ಸತೀ ಯೆಂದು ಸಂಜ್ಞೆಯುಳ್ಳ ದಕ್ಷಪುತ್ರಿಯು ಯಾಗದಲ್ಲಿ ತಂದೆಯಿಂದಾದ ಅವಮಾನವನ್ನು ಸಹಿಸಲಾರದವಳಾಗಿ, ತಂದೆಯಾದ ದಕ್ಷ ಪ್ರಜಾಪತಿಯನ್ನ ದೂಷಿಸಿ, ಅಗ್ನಿಕುಂಡದಲ್ಲಿ ದೇಹತ್ಯಾಗಮಾಡಿದವಳಾಗಿ, ಮುಂದಿನಜನ್ಮದಲ್ಲಿ ಹಿಮವಂತನಿಗೆ ಪುತ್ರಿಯಾಗಿ ಜನ್ಮವನ್ನು ತಾಳುವಳು. ಆ ಕಾಲದಲ್ಲಿ ನೀನೂ ನಿನ್ನ ಸಹೋ

ಮತ್ಸಂಬಂಧೀ ಚ ಲೋಕಾನಾಂ ಮಧ್ಯೇ ಪೂಜ್ಯೋ ಭವಿಷ್ಯಸಿ ॥
ಮಾಂ ದಿವ್ಯೇನ ಚ ಭಾವೇನ ತದಾ ಪ್ರಭೃತಿ ಶಂಕರಂ ।
ದ್ರಕ್ಷ್ಯಸೇ ಚ ಪ್ರಸನ್ನೇನ ಮಿತ್ರಭೂತ ಮಿವಾತ್ಮನಾ ॥೧೮೭॥
ಇತ್ಯುಕ್ತ್ವಾಽಂತ ರ್ದಧೇ ರುದ್ರೋ ಭಗವಾನ್ನೀಲಲೋಹಿತಃ ।
ಜನಾರ್ದನೋಽಪಿ ಭಗವಾನ್ ದೇವಾನಾಮಪಿ ಸನ್ನಿಧೌ ॥೧೮೮॥
ಅಯಾಚತ ಮಹಾದೇವಂ ಬ್ರಹ್ಮಾಣಂ ಮುನಿಭಿಃ ಸಮಂ ।
ಮಯಾಪ್ರೋಕ್ತಂ ಸ್ತವಂ ದಿವ್ಯಂ ಪದ್ಮಯೋನೇ ಸುಶೋಭನಂ ॥

---

ದರಿಯಾದ ಪಾರ್ವತಿಯನ್ನು ಬ್ರಹ್ಮನ ಆಜ್ಞೆಯಿಂದ ನನಗೆ ದಾನ ಮಾಡುವೆ. ಹೀಗೆ ದಾನಮಾಡಿದ ಮೇಲೆ ನೀನು ನನ್ನ ಸಂಬಂಧಿಯಾಗಿಯೂ, ಮತ್ತು ದೇವತೆಗಳ ಮಧ್ಯದಲ್ಲಿ ಪೂಜ್ಯನಾಗಿಯೂ ಇರುವೆ. ಆಕಾಲದಿಂದ ಮೊದಲುಗೊಂಡು ಶಂಕರನಾದ ನನ್ನನ್ನು ಮಿತ್ರನೋಪಾದಿಯಲ್ಲಿ ತಿಳಿದುಕೊಳ್ಳುವೆ.

ಹೀಗೆಂದು ಹೇಳಿ, ಷಡ್ಗುಣ್ಯೈಶ್ವರ್ಯ ಸಂಪನ್ನನಾದ ಆ ರುದ್ರನು ಅಂತರ್ಧಾನವನ್ನೈದಿದನು.

೧೮೮. ದುಷ್ಟರನ್ನು ಪೀಡಿಸುವ ಷಡ್ಗುಣ್ಯೈಶ್ವರ್ಯ ಸಂಪನ್ನನಾದ ವಿಷ್ಣುವು ದೇವತೆಗಳ ಸಮೀಪದಲ್ಲಿ ಋಷಿಗಳಿಂದೊಡಗೂಡಿರುವ ಬ್ರಹ್ಮನನ್ನು ಕುರಿತು ಹೀಗೆಂದು ಬಿನ್ನವಿಸಿದನು.

೧೮೯–೧೯೦. ಎಲೈ ಪದ್ಮಸಂಭವನಾದ ಬ್ರಹ್ಮನೇ, ನನ್ನಿಂದ ಹೇಳಲ್ಪಟ್ಟ ಈ ಕಲ್ಯಾಣಕರವಾದ ಶಿವಸ್ತೋತ್ರವನ್ನು ಯಾವಮನುಜನು ಪಠಿಸುತ್ತಾನೋ ಅಲ್ಲದೆ ಯಾವನು ಇತರರಿಗೆ ಕೇಳುವಂತೆ ತಿಳಿಯ ಹೇಳುತ್ತಾನೋ ಕೇಳುತ್ತಾನೋ, ಮತ್ತು ಯಾವನು ಬ್ರಾಹ್ಮಣಶ್ರೇಷ್ಠರಿಗೆ ಕೇಳಿಸುತ್ತಾನೋ ಅವನು ಪ್ರತಿಯೊಂದು ನಾಮಕ್ಕೂ ಸುವರ್ಣದಾನವನ್ನು ಮಾಡಿದ ಫಲವನ್ನು ಹೊಂದುತ್ತಾನೆ. ಅದಲ್ಲದೇ

ಯಃ ಪಠೇಚ್ಛೃಣುಯಾದ್ವಾಪಿ ಶ್ರಾವಯೇದ್ವಾ ದ್ವಿಜೋತ್ತಮಾನ್।
ಪ್ರತಿನಾಮ್ನಿ ಹಿರಣ್ಯಸ್ಯ ದತ್ತಸ್ಯ ಫಲಮಾಪ್ನುಯಾತ್ ॥೧೯೦॥
ಅಶ್ವಮೇಧ ಸಹಸ್ರೇಣ ಫಲಂ ಭವತಿ ತಸ್ಯ ವೈ ।
ಘೃತಾದ್ಯೈಃ ಸ್ನಾಪಯೇದ್ರುದ್ರಂ ಸ್ಥಾಲ್ಯಾಮ್ವೈ ಕಲಶೈಃ ಶುಭೈಃ ॥
ನಾಮ್ನಾಂ ಸಹಸ್ರೇಣಾನೇನ ಶ್ರದ್ಧಯಾ ಶಿವಮೀಶ್ವರಂ ।
ಸೋಽಪಿ ಯಜ್ಞಸಹಸ್ರಸ್ಯ ಫಲಂ ಲಬ್ಧ್ವಾ ಸುರೇಶ್ವರೈಃ ॥೧೯೨॥
ಪೂಜ್ಯೋ ಭವತಿ ರುದ್ರಸ್ಯ ಪ್ರೀತಿರ್ಭವತಿ ತಸ್ಯ ವೈ ।
ತಥಾಽಸ್ತ್ವಿತಿ ತಥಾ (ದಾ) ಪ್ರಾಹ ಪದ್ಮಯೋನೇರ್ಜನಾರ್ದನಂ ॥
ತಸ್ಮಾನ್ನಾಮ್ನಾಂ ಸಹಸ್ರೇಣ ಪೂಜಯೇದನಘಂ ದ್ವಿಜಾಃ ॥೧೯೪॥

---

ಸಾವಿರ ಅಶ್ವಮೇಧ ಯಾಗವನ್ನು ಮಾಡಿದರೆ ಯಾವ ಫಲವು ಉಂಟಾಗುವುದೋ ಆ ಫಲವನ್ನು ಹೊಂದುವನು.

೧೯೧–೧೯೨. ಯಾವನು ಶಿವನನ್ನು ಘೃತದಿಂದಲೂ ಮತ್ತು ಕಲಶೋದಕದಿಂದಲೂ ಸ್ನಾನಮಾಡಿಸಿ, ಸಹಸ್ರನಾಮದಿಂದ ಪೂಜಿಸುವನೋ ಅವನು ಯಜ್ಞಸಹಸ್ರದಿಂದುಟಾಗುವ ಫಲವನ್ನು ಪಡೆದವನಾಗಿ ದೇವತೆಗಳಿಂದಲೂ ಪೂಜಿಸಲ್ಪಡುವನು. ಮತ್ತು ಶಿವನೂ ಸಂತುಷ್ಟನಾಗುವನು.

೧೯೩. ವಿಷ್ಣುವಿನ ಮಾತನ್ನು ಕೇಳಿ ಪದ್ಮಸಂಭವನಾದ ಬ್ರಹ್ಮನು ಹಾಗೇ ಆಗಲೆಂದು ಅನುಮೋದಿಸಿ, ದೇವತೆಗಳಿಗೆ ಒಡೆಯನಾದ ಜಗತ್ತಿನ ಹಿತೋಪದೇಶಕನಾದ ಶಿವನನ್ನು ನಮಸ್ಕರಿಸಿ ವಿಷ್ಣುವಿನೊಂದಿಗೆ ಸ್ವಸ್ಥಾನವನ್ನು ಕುರಿತು ತೆರಳಿದನು.

೧೯೪–೧೯೫. ಎಲೈ ಬ್ರಾಹ್ಮಣರೇ, ಆದ ಕಾರಣದ ದೆಸೆಯಿಂದ ಕಲ್ಮಷರಹಿತನಾದ ಶಿವನನ್ನು ಸಹಸ್ರನಾಮುಗಳಿಂದ ಪೂಜಿಸಬೇಕು.

**ಜಪೇನ್ನಾಮ್ನಾಂ ಸಹಸ್ರಂ ಚ ಸ ಯಾತಿ ಪರಮಾಂ ಗತಿಂ ॥೧೯೫॥**

**ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಸಹಸ್ರನಾಮಭಿಃಪೂಜನಾ ದ್ವಿಷ್ಣು ಚಕ್ರಲಾಭೋನಾಮ ಅಷ್ಟನವತಿತಮೋಽಧ್ಯಾಯಃ**

---

ಮತ್ತು ಜಪಿಸಬೇಕು. ಹೀಗೆ ಅನುಷ್ಠಾನಮಾಡಿದವನು ಮುಕ್ತಿಯನ್ನೂ ಪಡೆಯುವನು.

ಇಲ್ಲಿಗೆ ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಶಿವಸಹಸ್ರನಾಮ ಪೂಜೆಯಿಂದ ವಿಷ್ಣುವಿಗೆ ಚಕ್ರಲಾಭವನ್ನು ತಿಳಿಸುವ ತೊಂಬತ್ತೆಂಟನೆಯ ಅಧ್ಯಾಯವು ಮುಗಿದುದು.

ಅಥ ಲಿಂಗಮಹಾಪುರಾಣೇ ಪೂರ್ವಭಾಗೇ
ನವನವತಿತಮೋಽಧ್ಯಾಯಃ

॥ ಋಷಯ ಊಚುಃ ॥

**ಸಂಭವಃ ಸೂಚಿತೋ ದೇವ್ಯಾಃ ತ್ವಯಾ ಸೂತ ಮಹಾಮತೇ।**
**ಸವಿಸ್ತರಂ ವದಸ್ವಾದ್ಯ ಸತೀತ್ವೇ ಚ ಯಥಾತಥಂ ॥ ೧ ॥**
**ಮೇನಾಜತ್ವಂ ಮಹಾದೇವ್ಯಾಃ ದಕ್ಷಯಜ್ಞ ವಿಮರ್ದನಂ।**
**ವಿಷ್ಣುನಾ ಚ ಕಥಂ ದತ್ತಾ ದೇವದೇವಾಯ ಶಂಭವೇ ॥ ೨ ॥**
**ಕಲ್ಯಾಣಂ ವಾ ಕಥಂ ತಸ್ಯ ವಕ್ತುಮರ್ಹಸಿ ಸಾಂಪ್ರತಂ।**

॥ ಸೂತ ಉವಾಚ ॥

**ತೇಷಾಂ ತದ್ವಚನಂ ಶ್ರುತ್ವಾ ಸೂತಃ ಪೌರಾಣಿಕೋತ್ತಮಃ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ತೊಂಬತ್ತೊಂಬತ್ತನೆಯ
ಅಧ್ಯಾಯವು.

೧-೨. ತೊಂಬತ್ತೆಂಟನೆಯ ಅಧ್ಯಾಯದಲ್ಲಿ ದೇವಿಯಾದ ದಾಕ್ಷಾಯಣಿಯ ಉತ್ಪತ್ತಿ ಕ್ರಮವು ಸೂತಮಹರ್ಷಿಯಿಂದ ವಿವರಿಸಲ್ಪಟ್ಟಿದೆ. ತೊಂಬತ್ತೊಂಬತ್ತನೆಯ ಅಧ್ಯಾಯದಲ್ಲಿ ದಾಕ್ಷಾಯಣಿಯು ಸತಿಯಾಗಿ ಅವತರಿಸಿದ ಕ್ರಮವನ್ನೂ, ಅನಂತರದಲ್ಲಿ ಮೇನಾದೇವಿಯಿಂದ ಜನ್ಮವನ್ನು ತಾಳಿದ ಕ್ರಮವನ್ನೂ, ದಕ್ಷಯಜ್ಞ ನಾಶಮಾಡಿದ ಬಗೆಯನ್ನೂ, ಅವಳು ವಿಷ್ಣುವಿನಿಂದ ಪರಮೇಶ್ವರನಿಗೆ ಕೊಡಲ್ಪಟ್ಟ ಕ್ರಮವನ್ನೂ, ಮತ್ತು ಪರಮೇಶ್ವರನ ವಿವಾಹವಾದ ಬಗೆಯನ್ನೂ ಹೇಳಬೇಕೆಂದು ಋಷಿಗಳು ಕೇಳಿದರು.

೩. ಸೂತನು ಹೇಳಿದನು:— ಋಷಿಗಳು ಹೇಳಿದಮಾತನ್ನು ಕೇಳಿ, ಪುರಾಣಗಳನ್ನು ರಚಿಸುವುದರಲ್ಲಿಯೂ, ಮತ್ತು ವಿವರಿಸುವುದರಲ್ಲಿಯೂ ಉತ್ತಮನಾದ ಸೂತಮಹರ್ಷಿಯು ದೇವಿಯ ಉತ್ಪತ್ತಿ ಕ್ರಮವನ್ನು ಋಷಿಗಳಿಗೆ ಹೇಳಿದನು.

ಸಂಭವಂ ಚ ಮಹಾದೇವ್ಯಾಃ ಪ್ರಾಹ ತೇಷಾಂ ಮಹಾತ್ಮನಾಂ ।
ಬ್ರಹ್ಮಣಾ ಕಥಿತಂ ಪೂರ್ವಂ ದಂಡಿನೇ ತತ್ಸುವಿಸ್ತರಂ ॥ ೪ ॥
ಯುಷ್ಮಾಭಿರ್ನೈ ಕುಮಾರಾಯ ತೇನ ವ್ಯಾಸಾಯ ಧೀಮತೇ ।
ತಸ್ಮಾದಹ ಮುಪಶ್ರುತ್ಯ ಪ್ರವದಾಮಿ ಸುವಿಸ್ತರಂ ॥ ೫ ॥
ವಚನಾದ್ವೋ ಮಹಾಭಾಗಾಃ ಪ್ರಣಮ್ಯೋಮಾಂ ತಥಾ ಭವಂ ।
ಸಾ ಭಗಾಖ್ಯಾ ಜಗದ್ಧಾತ್ರೀ ಲಿಂಗಮೂರ್ತಿ ಸ್ತ್ರಿವೇದಿಕಾ ॥ ೬ ॥
ಲಿಂಗಸ್ತು ಭಗವಾನ್ ದ್ವಾಭ್ಯಾಂ ಜಗತ್ಸೃಷ್ಟಿ ರ್ದ್ವಿಜೋತ್ತಮಾಃ ।
ಲಿಂಗಮೂರ್ತಿಃ ಶಿವೋ ಜ್ಯೋತಿಃ ತಮಸಶ್ಚೋಪರಿ ಸ್ಥಿತಃ ॥ ೭ ॥

---

೪–೫. ಎಲೈ ಬ್ರಾಹ್ಮಣರೇ, ನೀವು ಕೇಳಿದ ಈ ವಿಷಯುವನ್ನೇ ಈ ಹಿಂದೆ ದಂಡಿಯೆಂಬುವನಿಗೆ ಬ್ರಹ್ಮನು ತಿಳಿದು ಹೇಳಿದನು. ದಂಡಿಯಿಂದ ಕ್ರಮವಾಗಿ ಸನತ್ಕುಮಾರನಿಗೂ, ಸನತ್ಕುಮಾರನಿಂದ ಬುದ್ಧಿಶಾಲಿಯಾದ ವ್ಯಾಸನಿಗೂ ಹೇಳಲ್ಪಟ್ಟಿತು. ವ್ಯಾಸನಿಂದ ನಾನು ಕೇಳಿದೆನು. ನಿಮ್ಮ ಕೋರಿಕೆಯಂತೆ ಉಮಾದೇವಿಯನ್ನೂ ಮತ್ತು ಪರಮೇಶ್ವರನನ್ನೂ ನಮಸ್ಕರಿಸಿ, ಈ ವಿಷಯುವನ್ನು ವಿಸ್ತರಿಸಿ ಹೇಳುತ್ತೇನೆ.

೬. ಭಗಾ, ಎಂದು ಸಂಜ್ಞೆಯುಳ್ಳ ಜಗತ್ಕಾರಣಳಾದ ಆ ಮಹಾದೇವಿಯು ಲಿಂಗರೂಪನಾದ ಶಿವನ ಪ್ರಕೃತಿಸ್ವರೂಪಳು. (ತ್ರಿವೇದಿಕಾ ಎಂದರೆ ಮೂರು ಸತ್ವರಜಸ್ತಮೋಗುಣಗಳಿಗೆ ಅಧಿಷ್ಠಾತ್ರಿಯಾದ ಮಾಯೆಯೆಂದರ್ಥವು.)

೭. ಭಗವಂತನಾದರೋ ಲಿಂಗಸ್ವರೂಪನು. ಲಿಂಗಸ್ವರೂಪನಾದ ಪರಮೇಶ್ವರನು ಯಾವಾಗಲೂ ಸೃಷ್ಟಿಯಲ್ಲಿ ಭಗವೆಂದು ಹೆಸರುಳ್ಳ ಮಾಯೆಯಿಂದ ಕೂಡಿಕೊಂಡಿರುವನು. ಲಿಂಗ ಮತ್ತು ಭಗ ಇವೆರಡರಿಂದ, ಎಂದರೆ ಸ್ತ್ರೀಪುರುಷತತ್ವಗಳಿಂದ,ಜಗತ್ತಿನ ಸೃಷ್ಟಿಯು ಸಾಗುತ್ತಿರುತ್ತದೆ. ಲಿಂಗಸ್ವರೂಪನಾದ ಶಿವನು. ಸ್ವಯಂಪ್ರಕಾಶರೂಪನು. ಮತ್ತು ಮಾಯೆಯೆಂಬ ಉಪಾಧಿಯನ್ನು ಎಂದರೆ ಶಕ್ತಿತತ್ವವನ್ನು ತನ್ನ ಅಧೀನದಲ್ಲಿಟ್ಟು ಕೊಂಡಿರತಕ್ಕವನು. ವೇದದಲ್ಲಿಯೂ ಇದೇ ಪ್ರಕಾರವಾಗಿ ಹೇಳಲ್ಪಟ್ಟಿದೆ. "ಆದಿತ್ಯವರ್ಣಂ ತಮಸಃ ಪರಸ್ತಾತ್" ಎಂದು.

**ಲಿಂಗವೇದಿ ಸಮಾಯೋಗಾ ದರ್ಧನಾರೀಶ್ವರೋಽಭವತ್ ।**
**ಬ್ರಹ್ಮಾಣಂ ವಿದಧೇ ಪೂರ್ವ ಮಗ್ರೇ ಪುತ್ರಂ ಚತುರ್ಮುಖಂ ॥ ೮ ॥**
**ಪ್ರಾಹಿಣೋತಿ ಸ್ಮ ತಸ್ಯೈವ ಜ್ಞಾನಂ ಜ್ಞಾನಮಯೋ ಹರಃ ।**
**ವಿಶ್ವಾಧಿಕೋಽಸೌ ಭಗವಾನ್ ಅರ್ಧನಾರೀಶ್ವರೋ ವಿಭುಃ ॥ ೯ ॥**
**ಹಿರಣ್ಯಗರ್ಭಂ ತಂ ದೇವೋ ಜಾಯಮಾನಮಪಶ್ಯತ ।**
**ಸೋಽಪಿ ರುದ್ರಂ ಮಹಾದೇವಂ ಬ್ರಹ್ಮಾಪಶ್ಯತ ಶಂಕರಂ ॥೧೦॥**
**ತಂ ದೃಷ್ಟ್ವಾ ಸಂಸ್ಥಿತಂ ದೇವಂ ಅರ್ಧನಾರೀಶ್ವರಂ ಪ್ರಭುಂ ।**
**ತುಷ್ಟಾವ ವಾಗ್ಭಿರಿಷ್ಟಾಭಿಃ ವರದಂ ವಾರಿಜೋದ್ಭವಃ ॥೧೧॥**

---

೮. ಲಿಂಗ ಮತ್ತು ಮಾಯೆ ಇವೆರಡರ ಸಂಬಂಧದಿಂದ ಅರ್ಧನಾರೀಶ್ವರ ಸ್ವರೂಪನಾದನು. ಎಂದರೆ ಅರ್ಧಭಾಗದಲ್ಲಿ ಸ್ತ್ರೀ ಸ್ವರೂಪಿಯಾಗಿಯೂ, ಇನ್ನರ್ಧಭಾಗದಲ್ಲಿ ಪುರುಷಸ್ವರೂಪಿಯಾಗಿಯೂ, ಆದನು. ಈ ಅರ್ಧನಾರೀಶ್ವರನು ಮೊದಲು ತನ್ನ ಮಗನೆಂದೆನಿಸಿದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಮಾಡಿದನು. ವೇದದಲ್ಲಿಯೂ ಹೀಗೆಯೇ ಹೇಳಲ್ಪಟ್ಟಿದೆ. "ಯೋ ಬ್ರಹ್ಮಾಣಂ ವಿಧಧಾತಿ ಪೂರ್ವಂ" ಎಂದು.

೯. ಅರ್ಧನಾರೀಶ್ವರನಾಗಿಯೂ, ಪ್ರಪಂಚಕ್ಕೆ ಒಡೆಯನಾಗಿಯೂ, ಜ್ಞಾನಸ್ವರೂಪಿಯಾಗಿಯೂ, ಇರುವ ಪರಮೇಶ್ವರನು ಆ ಬ್ರಹ್ಮನಿಗಾಗಿ ಜ್ಞಾನವನ್ನು ಕೊಟ್ಟನು. ಹರಃ ಎಂದರೆ ತನ್ನಲ್ಲಿ ಭಕ್ತಿಯುಳ್ಳವರ ಅಜ್ಞಾನವನ್ನು ನಾಶಮಾಡತಕ್ಕವನೆಂದು ಭಗವಂತನಿಗೆ ಅನ್ವರ್ಥಸಂಜ್ಞೆಯು. ಇವನು ಪ್ರಪಂಚಕ್ಕಿಂತಲೂ ಮಿಗಿಲಾದವನು.

೧೦. ಚತುರ್ಮುಖ ಬ್ರಹ್ಮನ ಉತ್ಪತ್ತಿಯಾದ ಅನಂತರದಲ್ಲಿ ಹಿರಣ್ಯಗರ್ಭನು ಜನ್ಮವನ್ನು ತಾಳಿದನು. ಅನಂತರದಲ್ಲಿ ರುದ್ರಸ್ವರೂಪಿಯಾದ ಮಹಾದೇವನೂ ಆವಿರ್ಭವಿಸಿದನು.

೧೧. ತನ್ನ ಮುಂದೆ ನಿಂತಿರತಕ್ಕ, ವರವನ್ನು ಕೊಡಲು ಸಮರ್ಥನಾದ ಮತ್ತು ಅರ್ಧನಾರೀಶ್ವರನಾದ ಆ ಪ್ರಭುವನ್ನು ಕಮಲಾಸನನಾದ ಬ್ರಹ್ಮನು ಇಷ್ಟವಾದ ಮಾತುಗಳಿಂದ ಹೀಗೆ ಸ್ತೋತ್ರಮಾಡಿದನು.

**ವಿಭಜಸ್ವೇತಿ ವಿಶ್ವೇಶಂ ವಿಶ್ವಾತ್ಮಾನ ಮಜೋ ವಿಭುಃ ।**
**ಸಸರ್ಜ ದೇವೀಂ ವಾಮಾಂಗಾತ್ ಪತ್ನೀಂ ಚೈವಾತ್ಮನಃ ಸಮಾಂ ॥**
**ಶ್ರದ್ಧಾ ಹ್ಯಸ್ಯ ಶುಭಾ ಪತ್ನೀ ತತಃ ಪುಂಸಃ ಪುರಾತನೀ।**
**ಸೈವಾಜ್ಞಯಾ ವಿಭೋರ್ದೇವೀ ದಕ್ಷಪುತ್ರೀ ಬಭೂವ ಹ ॥೧೩॥**
**ಸತೀಸಂಜ್ಞಾ ತದಾ ಸಾ ವೈ ರುದ್ರಮೇವಾಶ್ರಿತಾ ಪತಿಂ ।**
**ದಕ್ಷಂ ವಿನಿಂದ್ಯ ಕಾಲೇನ ದೇವೀ ಮೇನಾ ಹ್ಯಭೂತ್ಸುನಃ ॥೧೪॥**
**ನಾರದಸ್ಯೈವ ದಕ್ಷೋಽಪಿ ಶಾಪಾದೇವಂ ವಿನಿಂದ್ಯ ಚ ।**
**ಅವಜ್ಞಾ ದುರ್ಮದೋ ದಕ್ಷೋ ದೇವದೇವಮುಮಾಪತಿಂ ॥**

---

೧೨. ಜನ್ಮರಹಿತನಾದ ಮತ್ತು ವಿಭುವಾದ ಆ ಬ್ರಹ್ಮನು ಅರ್ಧ ನಾರೀಶ್ವರನ ಎಡಭಾಗದಿಂದ ಲೀಲಾ ಮಯುವಾದ ವಿಗ್ರಹಕ್ಕೆ ಸಮಾನ ಸ್ಕಂಧವಾದ ಮತ್ತು ಪತ್ನಿಯಾದ ದೇವಿಯನ್ನು ಪ್ರತ್ಯೇಕವಾಗಿ ಸೃಷ್ಟಿಸಿದನು. ಮತ್ತು ಅರ್ಧನಾರೀಶ್ವರನ ಶರೀರವನ್ನು ವಿಭಾಗಮಾಡೆಂದು ಆಗ ಪ್ರಾರ್ಥಿಸಿದನು. ಎಂದರೆ ಸ್ತ್ರೀ ರೂಪವನ್ನೂ ಮತ್ತು ಪುರುಷ ರೂಪವನ್ನು ವಿಂಗಡಿಸೆಂದು ಪ್ರಾರ್ಥಿಸಿದನು.

೧೩. ಅನಂತರದಲ್ಲಿ ಪುರುಷನಾಗಿಯೂ, ವ್ಯಾಪಕನಾಗಿಯೂ, ಮತ್ತು ಆತ್ಮಸ್ವರೂಪನಾಗಿಯೂ, ಇರುವ ಶಿವನ ಅಪ್ಪಣೆಯಿಂದ ಶ್ರದ್ಧಾ ಎಂದು ಹೆಸರುಳ್ಳ ಶಿವನ ಪತ್ನಿಯಾದ ಆ ದೇವಿಯೇ ದಕ್ಷನ ಮಗಳಾಗಿ ಅವತರಿಸಿದಳು. ವೇದದಲ್ಲಿ ಹಾಗೆಯೇ "ತಸ್ಯೈವಂ ವಿದುಷೋಯಜ್ಞಸ್ಯಾತ್ಮಾ ಯಜಮಾನಃ ಶ್ರದ್ಧಾ ಪತ್ನೀ" ಎಂಬುದಾಗಿ ಹೇಳಿದೆ.

೧೪. ಅವಳೇ ದಕ್ಷಪುತ್ರಿಯಾದಳು ಮತ್ತು ಸಕಾಲದಲ್ಲಿ ಸತೀ ಎಂಬ ಹೆಸರುಳ್ಳವಳಾಗಿ ರುದ್ರನನ್ನೇ ತನ್ನ ಪತಿಯನ್ನಾಗಿ ವರಿಸಿದಳು. ಕೆಲವುಕಾಲ ಕಳೆದ ಅನಂತರದಲ್ಲಿ ಆ ದಕ್ಷ ಪ್ರಜಾಪತಿಯನ್ನು ಅವನು ಮಾಡಿದ ತಿರಸ್ಕಾರಕ್ಕಾಗಿ ನಿಂದಿಸಿ ಆ ದೇಹವನ್ನು ಬಿಟ್ಟು ಅನಂತರದಲ್ಲಿ ಮೇನಾದೇವಿಯ ಮಗಳಾಗಿ ಜನ್ಮವನ್ನೆತ್ತಿದಳು.

೧೫–೧೭. ದಕ್ಷನೂ ಕೂಡ ನಾರದನು ಕೊಟ್ಟ ಶಾಪದ ದೆಸೆಯಿಂದ

ಅನಾದೃತ್ಯ ಕೃತಿಂ ಜ್ಞಾತ್ವಾ ಸತೀ ದಕ್ಷೇಣ ತತ್ ಕ್ಷಣಾತ್ ।
ಭಸ್ಮೀಕೃತ್ವಾಽಽತ್ಮನೋದೇಹಂ ಯೋಗ ಮಾರ್ಗೇಣ ಸಾ ಪುನಃ ॥
ಬಭೂವ ಪಾರ್ವತೀ ದೇವೀ ತಪಸಾ ಚ ಗಿರೇಃ ಪ್ರಭೋಃ ।
ಜ್ಞಾತ್ವೈತ ದ್ಭಗವಾ ನ್ಭರ್ಗೋ ದದಾಹ ರುಷಿತಃ ಪ್ರಭುಃ ॥೧೭॥
ದಕ್ಷಸ್ಯ ವಿಪುಲಂ ಯಜ್ಞಂ ಚ್ಯಾವನೇರ್ವಚನಾದಪಿ ।
ಚ್ಯವನಸ್ಯ ಸುತೋ ಧೀಮಾನ್ ದಧೀಚ ಇತಿ ವಿಶ್ರುತಃ ॥೧೮॥
ವಿಜಿತ್ಯ ವಿಷ್ಣುಂ ಸಮರೇ ಪ್ರಸಾದಾ ತ್ರ್ಯಂಬಕಸ್ಯ ಚ ।
ವಿಷ್ಣುನಾ ಲೋಕಪಾಲಾಂಶ್ಚ ಶಶಾಪ ಚ ಮುನೀಶ್ವರಃ ॥೧೯॥

---

ಯಜ್ಞ ನಿಮಂತ್ರಣದ ಕಾಲದಲ್ಲಿ ಪ್ರತ್ಯುತ್ಥಾನಾದಿಗಳನ್ನು ಮಾಡದೇ ದುಷ್ಟನಾಗಿಯೂ ಮತ್ತು ಮದಾಂಧನಾಗಿಯೂ, ದೇವತೆಗಳಿಗೂ ಪ್ರಭುವೆಂದೆನಿಸಿದ ಉಮಾಪತಿಯಾದ ಪರಮೇಶ್ವರನನ್ನು ನಿಂದಿಸಿ ಯಜ್ಞ ಮಾಡಿದನು. ಶಿವನ ವಿಷಯದಲ್ಲಿ ಈ ರೀತಿಯಾಗಿ ಅನಾದರ ಪೂರ್ವಕವಾದ ವರ್ತನೆಯನ್ನು ತಿಳಿದು ಸತಿಯು ತನ್ನ ದೇಹವನ್ನು ಯಜ್ಞಕುಂಡದಲ್ಲಿ ಭಸ್ಮಮಾಡಿ, ಅನಂತರದಲ್ಲಿ ಪರ್ವತಗಳಿಗೆ ರಾಜನಾದ ಹಿಮವಂತನ ತಪಸ್ಸಿನ ಪ್ರಭಾವದಿಂದ ಹಿಮವಂತನ ಮನೆಯಲ್ಲಿ ಜನ್ಮವನ್ನು ತಾಳಿದಳು. ಈ ರೀತಿಯಾಗಿ ಸತಿಯು ದೇಹತ್ಯಾಗಮಾಡಿದ ವಿಷಯವನ್ನು ತಿಳಿದು ಕೋಪಗೊಂಡ ರುದ್ರನು ಚ್ಯವನನೆಂದು ಹೆಸರುಗೊಂಡ ಮಹರ್ಷಿಯ ಮಗನಾದ ದಧೀಚನ ಕೋರಿಕೆಯಂತೆ ದಕ್ಷಬ್ರಹ್ಮನ ಯಜ್ಞವನ್ನು ನಾಶಮಾಡಿದನು.

೧೮–೧೯. ಬುದ್ಧಿವಂತನಾಗಿಯೂ, ಮತ್ತು ವಿಖ್ಯಾತನಾಗಿಯೂ, ಇರುವ ಚ್ಯವನನ ಮಗನಾದ ದಧೀಚನು ಈಶ್ವರನ ಅನುಗ್ರಹದಿಂದ ಯುದ್ಧದಲ್ಲಿ ವಿಷ್ಣುವನ್ನು ಜಯಿಸಿ ವಿಷ್ಣುವಿಂದೊಡಗೂಡಿದ ಲೋಕಪಾಲಕರಿಗೆಲ್ಲರಿಗೂ ಶಾಪವನ್ನಿತ್ತನು.

**ರುದ್ರಸ್ಯ ಕ್ರೋಧಜೇನೈವ ವಹ್ನಿನಾ ಹವಿಷಾ ಸುರಾಃ ।**
**ವಿನಾಶೋ ವೈ ಕ್ಷಣಾದೇವ ಮಾಯಯಾ ಶಂಕರಸ್ಯ ವೈ ॥೨೦॥**

**ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಸತೀಸಂಭವೋನಾಮ ನವನವತಿತಮೋಽಧ್ಯಾಯಃ**

---

೨೦. ಹೇಗೆಂದರೆ, ಎಲೈ ದೇವತೆಗಳಿರಾ, ರುದ್ರದೇವನ ಕೋಪದಿಂದ ಉಂಟಾಗುವ ಬೆಂಕಿಯಲ್ಲಿ ಹವಿಸ್ಸಿನಿಂದಾಗುವ ತಾಪದಿಂದಲೂ, ಪರಶಿವನ ಮಾಯಾಶಕ್ತಿಯ ಪ್ರಭಾವದಿಂದಲೂ, ಎಲ್ಲವೂ ಸ್ವಲ್ಪಕಾಲದಲ್ಲಿಯೇ ನಾಶವಾಗಲಿ. ಎಂದು ದಧೀಚನು ಶಾಪವನ್ನು ಕೊಟ್ಟನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಸತೀದೇವಿಯ ಚರಿತವೆಂಬ ತೊಂಬತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे पूर्वभागे
शततमोऽध्यायः

॥ ಋಷಯ ಊಚುಃ ॥

ನಿಜಿತ್ಯವಿಷ್ಣುನಾ ಸಾರ್ಧಂ ಭಗವಾನ್ಪರಮೇಶ್ವರಃ ।
ಸರ್ವಾನ್ ದಧೀಚವಚನಾತ್ಕಥಂ ಭೇಜೇ ಮಹೇಶ್ವರಃ ॥ ೧ ॥

॥ ಸೂತ ಉವಾಚ ॥

ದಕ್ಷಯಜ್ಞೇ ಸುವಿಪುಲೇ ದೇವಾನ್ ವಿಷ್ಣು ಪುರೋಗಮಾನ್ ।
ದದಾಹ ಭಗವಾನ್ ರುದ್ರಃ ಸರ್ವಾನ್ಮುನಿಗಣಾನಪಿ ॥ ೨ ॥

ಭದ್ರೋ ನಾಮ ಗಣಸ್ತೇನ ಪ್ರೇಷಿತಃ ಪರಮೇಷ್ಠಿನಾ ।
ವಿಪ್ರಯೋಗೇನ ದೇವ್ಯಾ ವೈ ದುಸ್ಸಹೇನೈವ ಸುವ್ರತಾಃ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರನೆಯ ಅಧ್ಯಾಯವು.

೧. ಓ ಸೂತಮಹರ್ಷಿಯೇ, ಪರಮೇಶ್ವರನಾದ ಮಹಾಮಹಿಮ ಶಾಲಿಯಾದ ಶಿವನು ಧಧೀಚಋಷಿಯ ಶಾಪಕ್ಕೆ ಅನುಸಾರವಾಗಿ ವಿಷ್ಣು ವಿನೊಡನೆ ಎಲ್ಲ ದೇವತೆಗಳನ್ನೂ ಜಯಿಸಿ ಆ ದಕ್ಷಯಜ್ಞವನ್ನು ಹೇಗೆ ಸೇವಿಸಿದನು? ಈವಿಷಯವನ್ನು ವಿವರವಾಗಿ ತಿಳಿಯಹೇಳಿರಿ.

೨. ಹೆಚ್ಚಾದ ವಿಭವ ವಿಸ್ತಾರಗಳಿಂದ ಕೂಡಿದ್ದ, ಆ ದಕ್ಷಬ್ರಹ್ಮನುನೆರವೇರಿಸುತ್ತಿದ್ದ ಆ ಯಾಗವನ್ನೂ ವಿಷ್ಣುವೇ ಮೊದಲಾದ ದೇವತೆಗಳನ್ನೂ, ಎಲ್ಲ ಋಷಿಗಳ ಸಮೂಹಗಳನ್ನೂ, ಶಿವನು ಧ್ವಂಸಮಾಡಿದನು.

೩. ಧರ್ಮನಿಷ್ಠರಾದ ಋಷಿಗಳೇ, ದಕ್ಷನಯಾಗದ ಅಗ್ನಿಯಲ್ಲಿ ಸತೀದೇವಿಯು ನಾಶವಾಗಲು ಅದರಿಂದ ಉಂಟಾದ ಸಹಿಸಲು ಅಸಾಧ್ಯವಾದ ವಿಯೋಗ ದುಃಖದಿಂದ ಪೀಡಿತನಾದ ಪರಮೇಶ್ವರನು ಯಾಗ ನಾಶಕ್ಕಾಗಿ ವೀರಭದ್ರ ಎಂಬ ಹೆಸರಿನಿಂದ ಪ್ರಸಿದ್ಧವಾದ ಗಣಗಳನ್ನು ಕಳುಹಿಸಿದನು.

ಸೋಽಸೃಜದ್ವೀರಭದ್ರಶ್ಚ ಗಣೇಶಾನ್ರೋಮಜಾನ್ ಶುಭಾನ್ ।
ಗಣೇಶ್ವರೈ ಸ್ಸಮಾರುಹ್ಯ ರಥಂ ಭದ್ರಃ ಪ್ರತಾಪವಾನ್ ॥ ೪॥

ಗಂತುಂ ಚಕ್ರೇ ಮತಿಂ ಯಸ್ಯ ಸಾರಥಿರ್ಭಗವಾನಜಃ ।
ಗಣೇಶ್ವರಾಶ್ಚ ತೇ ಸರ್ವೇ ವಿವಿಧಾಯುಧ ಪಾಣಯಃ ॥ ೫ ॥

ವಿಮಾನೈಃ ವಿಶ್ವತೋಭದ್ರೈಃ ತಮನ್ವಯು ರಥೋ ಸುರಾಃ ।
ಹಿಮವಚ್ಛಿಖರೇ ರಮ್ಯೇ ಹೇಮಶೃಂಗೇ ಸುಶೋಭನೇ ॥ ೬ ॥

ಯಜ್ಞವಾಟಸ್ತಥಾ ತಸ್ಯ ಗಂಗಾದ್ವಾರ ಸಮೀಪತಃ ।
ತದ್ದೇಶೇ ಚೈವ ವಿಖ್ಯಾತಂ ಶುಭಂ ಕನಖಲಂ ದ್ವಿಜಾಃ ॥ ೭ ॥

---

೪. ಆ ವೀರಭದ್ರದೇವನೂ ತನ್ನ ರೋಮಕೂಪಗಳಿಂದ ಆವಿರ್ಭವಿಸಿದ, ಜಗತ್ಕಲ್ಯಾಣಸಾಧಕರಾದ, ಪ್ರಮಥಗಣನಾಯಕರನ್ನು ಉಂಟು ಮಾಡಿದನು. ಆ ಗಣಾಧಿಪರೊಡನೆ ಪರಾಕ್ರಮಶಾಲಿಯಾದ ವೀರಭದ್ರನು ರಥವನ್ನು ಹತ್ತಿ ಯುದ್ಧಕ್ಕೆ ಹೊರಟನು.

೫. ಆಗ ಪರಮೇಶ್ವರ ಸಾರಥಿಯಾದ ಬ್ರಹ್ಮನೂ, ನಾನಾ ಬಗೆಯ ಆಯುಧಗಳನ್ನು ಕೈಯಲ್ಲಿ ಧರಿಸಿರುವ ಪ್ರಮಥಗಣಗಳ ನಾಯಕರೂ ಆ ವೀರಭದ್ರನನ್ನು ಅನುಸರಿಸಿ ಹೊರಟರು.

೬. ಆ ದೇವತೆಗಳೆಲ್ಲರೂ ಎಲ್ಲ ಭಾಗಗಳಲ್ಲೂ ಮಂಗಳಕರವಾದ ವಿಮಾನಗಳಿಂದ ಆ ವೀರಭದ್ರದೇವನನ್ನು ಹಿಂಬಾಲಿಸಿದರು. ಮನೋಹರವಾದ ಶಿಖರವುಳ್ಳ ಹಿಮಾಲಯಪರ್ವತದಲ್ಲೂ, ಸುವರ್ಣಮಯವಾದ ಮಂಗಳಕರವಾದ ಶಿಖರದಲ್ಲೂ ಆ ದೇವತೆಗಳು ಅನುಸರಿಸಿ ಹೊರಟರು.

೭. ಓ ಶೌನಕಾದಿ ಋಷಿಗಳೇ, ಗಂಗಾದ್ವಾರಕ್ಕೆ ಸಮೀಪದಲ್ಲಿ ಕನಖಲವೆಂಬ ಮಂಗಳಕರವಾದ ಕ್ಷೇತ್ರದ ಪ್ರದೇಶದಲ್ಲಿ ದಕ್ಷಬ್ರಹ್ಮನ ಯಾಗ ಶಾಲೆಯು ರಚಿತವಾಗಿತ್ತು.

ದಗ್ಧುಂ ವೈ ಪ್ರೇಷಿತ ಶ್ಚಾಸೌ ಭಗವಾನ್ ಪರಮೇಷ್ಠಿನಾ ।
ತದೋತ್ಪಾತೋ ಬಭೂವಾಽಥ ಲೋಕಾನಾಂ ಭಯಶಂಸನಃ ॥ ೮ ॥
ಪರ್ವತಾಶ್ಚ ವ್ಯಶೀರ್ಯಂತ ಪ್ರಚಕಂಪೇ ವಸುಂಧರಾ ।
ಮರುತ ಶ್ಚಾ ಸ್ಯ ಘೂರ್ಣಂತ ಚುಕ್ಷುಭೇ ಮಕರಾಲಯಃ ॥ ೯ ॥
ಅಗ್ನಯೋ ನೈವ ದೀಪ್ಯಂತಿ ನ ಚ ದೀಪ್ಯತಿ ಭಾಸ್ಕರಃ ।
ಗ್ರಹಾಶ್ಚ ನ ಪ್ರಕಾಶಂತೇ ನ ದೇವಾ ನ ಚ ದಾನವಾಃ ॥೧೦॥
ತತಃ ಕ್ಷಣಾತ್ ಪ್ರವಿಶ್ಯೈವ ಯಜ್ಞವಾಟಂ ಮಹಾತ್ಮನಃ ।
ರೋಮಜೈಃ ಸಹಿತೋ ಭದ್ರಃ ಕಾಲಾಗ್ನಿರಿವ ಚಾಪರಃ ॥೧೧॥

---

೮. ಪರಮೇಶ್ವರನಿಂದ ಮಹಾಮಹಿಮನಾದ ವೀರಭದ್ರನು ಆ ದಕ್ಷನ ಯಾಗವನ್ನು ಧ್ವಂಸಮಾಡಲು ಕಳುಹಿಸಲ್ಪಟ್ಟನು. ಆಗ ಲೋಕಗಳಿಗೆ ಭಯವನ್ನು ಸೂಚಿಸುವ ದುಶ್ಶಕುನಗಳೂ ಉತ್ಪಾತಗಳೂ ತೋರಿದವು! ಹೇಗೆಂದರೆ,

೯. ಬೆಟ್ಟಗಳ ಸಾಲುಗಳು ಬಿರಿದುವು. ಭೂಮಿಯು ಹೆಚ್ಚಾಗಿ ಕಂಪಿಸಿ ನಡುಗಿತು. ಸುಂಟರಗಾಳಿಗಳು ಬಳಸಿ ಬೀಸಿದುವು. ಸಾಗರಗಳೂ ಉಲ್ಲೋಲಕಲ್ಲೋಲವಾಗಿ ಕ್ಷೋಭೆಗೊಂಡವು!

೧೦. ಆಗ ಅಗ್ನಿಗಳು ಬೆಳಗುತ್ತಿರಲಿಲ್ಲ. ಸೂರ್ಯನೂ ಪ್ರಕಾಶಹೀನನಾದನು. ಚಂದ್ರ ಮುಂತಾದ ಗ್ರಹಗಳೂ ಕಾಂತಿಗುಂದಿದುವು. ದೇವತೆಗಳೂ ರಾಕ್ಷಸರೂ ಕಳೆಗೆಟ್ಟಿದ್ದರು.

೧೧. ಆಮೇಲೆ ಪ್ರಳಯಕಾಲದ ಎರಡನೆಯ ಅಗ್ನಿಯೋ ಎಂಬಂತೆ ಭಯಂಕರವಾದ ತೇಜಸ್ಸಿನಿಂದೊಡಗೂಡಿದ್ದ ವೀರಭದ್ರದೇವನು ತನ್ನ ರೋಮ ಕೂಪಗಳಿಂದ ಆವಿರ್ಭವಿಸಿದ್ದ ಪ್ರಮಥಗಣಗಳೊಡನೆ ಮಹಾತ್ಮನಾದ ದಕ್ಷಬ್ರಹ್ಮನ ಯಾಗಶಾಲೆಯ ಒಳಕ್ಕೆ ಸ್ವಲ್ಪಕಾಲದಲ್ಲಿಯೇ ನುಗ್ಗಿದನು.

ಉವಾಚ ಭದ್ರೋ ಭಗವಾನ್ ದಕ್ಷಂ ಚಾಮಿತ ತೇಜಸಂ ।
ಸಂಪರ್ಕಾದೇವ ದಕ್ಷಾದ್ಯ ಮುನೀನ್ ದೇವಾನ್ಪಿನಾಕಿನಾ ॥೧೨॥
ದಗ್ಧುಂ ಸಂಪ್ರೇಷಿತ ಶ್ಚಾಹಂ ಭವಂತಂ ಸಮುನೀಶ್ವರೈಃ ।
ಇತ್ಯುಕ್ತ್ವಾ ಯಜ್ಞಶಾಲಾಂ ತಾಂ ದದಾಹ ಮುನಿಪುಂಗವಃ ॥೧೩॥
ಗಣೇಶ್ವರಾಶ್ಚ ಸಂಕ್ರುದ್ಧಾಃ ಯೂಪಾನುತ್ಪಾಟ್ಯ ಚಿಕ್ಷಿಪುಃ ।
ಪ್ರಸ್ತೋತ್ರಾ ಸಹ ಹೋತ್ರಾ ಚ ದಗ್ಧಂ ಚೈವ ಗಣೇಶ್ವರೈಃ ॥೧೪॥
ಗೃಹೀತ್ವಾ ಗಣಪಾಃ ಸರ್ವಾನ್ ಗಂಗಾಸ್ರೋತಸಿ ಚಿಕ್ಷಿಪುಃ ।
ವೀರಭದ್ರೋ ಮಹಾತೇಜಾಃ ಶಕ್ರಸ್ಯೋದ್ಯಚ್ಛತಃ ಕರಂ । ॥೧೫॥

---

೧೨-೧೩. ಮಹಾತ್ಮನಾದ ಆವೀರಭದ್ರನು ಹೆಚ್ಚಾಗಿ ತೇಜಸ್ಸುಳ್ಳ ದಕ್ಷಬ್ರಹ್ಮನನ್ನು ಕುರಿತು ಹೀಗೆ ಹೇಳಿದನು. ಎಲೈ ದಕ್ಷನೇ, ಋಷಿ ಶ್ರೇಷ್ಠರಿಂದೊಡಗೂಡಿದ ನಿನ್ನನ್ನೂ, ದೇವತೆಗಳನ್ನೂ, ಮುನಿಗಳನ್ನೂ, ಸ್ಪರ್ಶಮಾತ್ರದಿಂದಲೇ ಈಗ ಸುಟ್ಟು ಧ್ವಂಸಮಾಡಲು, ಪಿನಾಕದನುರ್ಧಾರಿಯಾದ ಈಶ್ವರನಿಂದ ನಾನು ಕಳುಹಿಸಲ್ಪಟ್ಟಿರುವೆನು. ಹೀಗೆಂದು ಹೇಳಿ ಆ ವೀರಭದ್ರನಾಯಕನು ಆ ಯಾಗಶಾಲೆಯನ್ನು ಸುಟ್ಟು ಧ್ವಂಸ ಮಾಡಿದನು.

೧೪. ತುಂಬ ಕೋಪಗೊಂಡಿದ್ದ ಆ ಭದ್ರಗಣನಾಯಕರೂ ಆ ಯಾಗಶಾಲೆಯಲ್ಲಿದ್ದ ಯೂಪಸ್ತಂಭಗಳನ್ನು ಕಿತ್ತು ಎಸೆದರು. ಪ್ರಸ್ತೋತೃ ಹೋತೃ, ಮುಂತಾದ ಋತ್ವಿಜರೊಡನೆ ಎಲ್ಲರನ್ನೂ ಆಗಣಗಳು ಸುಟ್ಟು ಧ್ವಂಸಮಾಡಿದರು.

೧೫-೧೬. ಆ ಭದ್ರಗಣನಾಯಕರು ಆ ಯಾಗಶಾಲೆಯಲ್ಲಿದ್ದ ಎಲ್ಲರನ್ನೂ ಹಿಡಿದು ಗಂಗಾನದಿಯ ಪ್ರವಾಹದಲ್ಲಿ ಎಸೆದರು. ತುಂಬ ತೇಜಸ್ವಿಯಾದ ಮಹಾತ್ಮನಾದ ವೀರಭದ್ರನೂ ಕೈಯಲ್ಲಿ ವಜ್ರಾಯುಧವನ್ನು ಎತ್ತಿದ್ದ ಇಂದ್ರನನ್ನೂ, ಹಾಗೆಯೇ ಇತರ ದೇವತೆಗಳನ್ನೂ ಅಲುಗಾಡ

ವ್ಯಷ್ಟಂಭಯದದೀ ನಾತ್ಮಾ ತಥಾಽನ್ಯೇಷಾಂ ದಿವೌಕಸಾಂ ।
ಭಗಸ್ಯ ನೇತ್ರೇ ಚೋತ್ಪಾಟ್ಯ ಕರಜಾಗ್ರೇಣ ಲೀಲಯಾ ।   ॥೧೬॥

ನಿಹತ್ಯ ಮುಷ್ಟಿನಾ ದಂತಾನ್ ಪೂಷ್ಣಶ್ಚೈವ ನ್ಯಪಾತಯತ್ ।
ತಥಾ ಚಂದ್ರಮಸಂ ದೇವಂ ಪಾದಾಂಗುಷ್ಠೇನ ಲೀಲಯಾ   ॥೧೭॥

ಘರ್ಷಯಾಮಾಸ ಭಗವಾನ್ ವೀರಭದ್ರಃ ಪ್ರತಾಪವಾನ್ ।
ಚಿಚ್ಛೇದ ಚ ಶಿರಸ್ತಸ್ಯ ಶಕ್ರಸ್ಯ ಭಗವಾನ್ ಪ್ರಭೋಃ   ॥೧೮॥

ವಹ್ನೇರ್ಹಸ್ತದ್ವಯಂ ಛಿತ್ವಾ ಜಿಹ್ವಾಮುತ್ಪಾಟ್ಯ ಲೀಲಯಾ ।
ಜಘಾನ ಮೂರ್ಧ್ನಿ ಪಾದೇನ ವೀರಭದ್ರೋ ಮಹಾಬಲಃ   ॥೧೯॥

ಯಮಸ್ಯ ದಂಡಂ ಭಗವಾನ್ ಪ್ರಚಿಚ್ಛೇದ ಸ್ವಯಂ ಪ್ರಭುಃ ।
ಜಘಾನ ದೇವಮೀಶಾನಂ ತ್ರಿಶೂಲೇನ ಮಹಾಬಲಂ   ॥೨೦॥

---

ದಂತೆ ಸ್ತಂಭನಮಾಡಿದನು. ಭಗ (ಸೂರ್ಯ) ದೇವನ ಕಣ್ಣುಗಳನ್ನು ತನ್ನ ಉಗುರಿನ ಕೊನೆಯಿಂದ ಸುಲಭವಾಗಿ ಕಿತ್ತುಹಾಕಿದನು.

೧೭–೧೮. ಅಲ್ಲದೆ ಆ ವೀರಭದ್ರನು ಮುಷ್ಟಿಯಿಂದಹೊಡೆದು ಸೂರ್ಯನ ಹಲ್ಲುಗಳನ್ನು ಉದುರಿಸಿದನು. ಆ ಪರಾಕ್ರಮಿಯಾದ ವೀರಭದ್ರನು ಚಂದ್ರನನ್ನು ತನ್ನಕಾಲಿನಹೆಬ್ಬೆಟ್ಟಿನಿಂದ ಸುಲಭವಾಗಿ ತಿಕ್ಕಿದನು. ಹಾಗೆಯೇ ಗಟ್ಟಿಗನಾದ ಆ ಇಂದ್ರನ ತಲೆಯನ್ನು ಕತ್ತರಿಸಿದನು.

೧೯. ಗಟ್ಟಿಗನಾದ ಆ ವೀರಭದ್ರನು ಅಗ್ನಿದೇವನ ಎರಡು ಕೈಗಳನ್ನೂ ಕತ್ತರಿಸಿ, ಸುಲಭವಾಗಿ ಅವನ ನಾಲಿಗೆಯನ್ನು ಕಿತ್ತು ಕಾಲಿನಿಂದ ತಲೆಯ ಮೇಲೆ ಒದೆದನು.

೨೦. ಅಲ್ಲದೆ ಆ ವೀರಭದ್ರನು ಯಮನ ದಂಡಾಯುಧವನ್ನೂ ತಾನೇ ಕತ್ತರಿಸಿದನು. ಮತ್ತು ಬಲಶಾಲಿಯಾದ ಈಶಾನದೇವನನ್ನು ತ್ರಿಶೂಲದಿಂದ ಹೊಡೆದನು. ಹೀಗೆ ಆ ವೀರನು ದಿಕ್ಪಾಲಕರನ್ನೂ ನಿಗ್ರಹಿಸಿದನು.

ತ್ರಯಸ್ತ್ರಿಂಶತ್ಸುರಾನೇವಂ ವಿನಿಹತ್ಯಾ ಪ್ರಯತ್ನತಃ ।
ತ್ರಯಶ್ಚ ತ್ರಿಶತಂ ತೇಷಾಂ ತ್ರಿಸಾಹಸ್ರಂ ಚ ಲೀಲಯಾ ॥೨೧॥
ತ್ರಯಂ ಚೈವ ಸುರೇಂದ್ರಾಣಾಂ ಜಘಾನ ಚ ಮುನೀಶ್ವರಾನ್ ।
ಅನ್ಯಾಂಶ್ಚ ದೇವಾನ್ ದೇವೋಽಸೌ ಸರ್ವಾನ್ ಯುದ್ಧಾಯ ಸಂಸ್ಥಿತಾನ್ ॥೨೨॥
ಜಘಾನ ಭಗವಾನ್ ರುದ್ರಃ ಖಡ್ಗಮುಷ್ಟ್ಯಾದಿ ಸಾಯಕೈಃ ।
ಅಥ ವಿಷ್ಣುರ್ಮಹಾತೇಜಾಃ ಚಕ್ರಮುದ್ಯಮ್ಯ ಮೂರ್ಛಿತಃ ॥೨೩॥
ಯುಯೋಧ ಭಗವಾಂಸ್ತೇನ ರುದ್ರೇಣ ಸಹ ಮಾಧವಃ ।
ತಯೋಃ ಸ್ಸಮಭವದ್ಯುದ್ಧಂ ಸುಘೋರಂ ರೋಮಹರ್ಷಣಂ ॥೨೪॥

---

೨೧. ಹಾಗೆಯೇ ಆ ವೀರಭದ್ರನು ಮೂವತ್ತುಮೂರು ಜನ ದೇವತೆಗಳ ಮುಖಂಡರಾದ ವಸು, ರುದ್ರ, ಆದಿತ್ಯ, ಇವರನ್ನೂ ಮೂರುಸಾವಿರದ ಮುನ್ನೂರು ಜನ ದೇವನಾಯಕರನ್ನೂ ಹೆಚ್ಚುಪ್ರಯತ್ನ ಆಯಾಸಗಳಿಲ್ಲದೆ ಸುಲಭವಾಗಿ ನಿಗ್ರಹಿಸಿದನು.

೨೨. ಅಲ್ಲದೆ ಆವೀರಭದ್ರದೇವನು ದೇವಪ್ರಮುಖರಲ್ಲಿ ಮುಂದಾಳುಗಳಾದ ಇಂದ್ರ, ಅಗ್ನಿ, ಸೋಮ ಈ ಮೂವರನ್ನೂ ಮುನಿಶ್ರೇಷ್ಠರನ್ನೂ, ಯುದ್ಧಮಾಡಲು ಸಿದ್ಧರಾಗಿದ್ದ ಇತರ ದೇವತೆಗಳನ್ನೂ ಹೊಡೆದು ನಿಗ್ರಹಿಸಿದನು.

೨೩. ಅನಂತರದಲ್ಲಿ ಭಗವಂತನಾದ ರುದ್ರದೇವನು ಮುಷ್ಟಿ, ಕತ್ತಿ, ಬಾಣ ಮುಂತಾದ ಸಾಧನಗಳಿಂದ ಅಲ್ಲಿದ್ದವರನ್ನು ಸಂಹರಿಸಲು, ಆಮೇಲೆ ತುಂಬ ತೇಜಸ್ವಿಯಾದ ವಿಷ್ಣುವು ಕೋಪಾವೇಶವುಳ್ಳವನಾಗಿ ಚಕ್ರಾಯುಧವನ್ನು ಎತ್ತಿ ಹಿಡಿದು ಮುಂದಕ್ಕೆ ನುಗ್ಗಿದನು.

೨೪. ಆಗ ಮಹಾಮಹಿಮನಾದ ಮಾಧವನು ಆ ರುದ್ರದೇವನೊಡನೆ ಯುದ್ಧಮಾಡಿದನು. ಅವರಿಬ್ಬರಿಗೂ ಸಂಭವಿಸಿದ ಆ ಯುದ್ಧವು ನೋಡುವವರಿಗೆ ತುಂಬ ಭಯಂಕರವಾಗಿಯೂ ರೋಮಾಂಚವನ್ನು ಉಂಟುಮಾಡುವಂಥಾದ್ದಾಗಿಯೂ ಇತ್ತು.

ವಿಷ್ಣೋ ರ್ಯೋಗಬಲಾತ್ತಸ್ಯ ದಿವ್ಯದೇಹಾ ಸ್ಸುದಾರುಣಾಃ ।
ಶಂಖಚಕ್ರ ಗದಾಹಸ್ತಾಃ ಅಸಂಖ್ಯಾತಾ ಶ್ಚ ಜಜ್ಞಿರೇ ॥೨೫॥
ತಾನ್ ಸರ್ವಾನಪಿ ದೇವೋಽಸೌ ನಾರಾಯಣಸಮಪ್ರಭಾನ್ ।
ನಿಹತ್ಯ ಗದಯಾ ವಿಷ್ಣುಂ ತಾಡಯಾಮಾಸ ಮೂರ್ಧನಿ ॥೨೬॥
ತತಶ್ಚೋರಸಿ ತಂ ದೇವಂ ಲೀಲಯೈವ ರಣಾಜಿರೇ ।
ಪಪಾತ ಚ ತದಾ ಭೂಮೌ ವಿಸಂಜ್ಞಃ ಪುರುಷೋತ್ತಮಃ ॥೨೭॥
ಪುನರುತ್ಥಾಯ ತಂ ಹಂತುಂ ಚಕ್ರಮುದ್ಯಮ್ಯ ಸ ಪ್ರಭುಃ ।
ಕ್ರೋಧರಕ್ತೇಕ್ಷಣಃ ಶ್ರೀಮಾನ್ ಅತಿಷ್ಠತ್ ಪುರುಷರ್ಷಭಃ ॥೨೮॥

---

೨೫. ಆಗ ಮಹಾ ವಿಷ್ಣುವಿನ ಯೋಗಶಕ್ತಿಯ ಪ್ರಭಾವದಿಂದ ದಿವ್ಯವಾದ ಶರೀರವುಳ್ಳ, ಭಯಂಕರರಾದ, ಶಂಖ, ಚಕ್ರ, ಗದೆಗಳನ್ನು ಕೈಯಲ್ಲಿ ಧರಿಸಿರುವ ಅವನಂತಿರುವ ವ್ಯಕ್ತಿಗಳು ಲೆಕ್ಕವಿಲ್ಲದಷ್ಟು ಜನರು ಆವಿರ್ಭವಿಸಿದರು !

೨೬. ಅನಂತರದಲ್ಲಿ ಆ ನಾರಾಯಣನಿಗೆ ಸಮಾನವಾದ ತೇಜಸ್ಸುಳ್ಳ ಆ ಪುರುಷರನ್ನೆಲ್ಲರನ್ನೂ ಈ ರುದ್ರದೇವನು ಸಂಹರಿಸಿ ವಿಷ್ಣುವನ್ನು ತಲೆಯಲ್ಲಿ ಹೊಡೆದನು.

೨೭. ಆಮೇಲೆ ಆ ಯುದ್ಧದಲ್ಲಿ ರುದ್ರದೇವನು ವಿಷ್ಣುದೇವನನ್ನು ಎದೆಯಲ್ಲಿಯೂ ಹೊಡೆದನು. ಅದರಿಂದ ಆ ಪುರುಷೋತ್ತಮನೂ ಜ್ಞಾನತಪ್ಪಿದವನಾಗಿ ಭೂಮಿಯಲ್ಲಿ ಬಿದ್ದು ಬಿಟ್ಟನು.

೨೮. ತರುವಾಯ ಸ್ವಲ್ಪಹೊತ್ತಿನಲ್ಲಿಯೇ ಜಗದೊಡೆಯನಾದ ಆ ಪುರುಷಶ್ರೇಷ್ಠನಾದ ವಿಷ್ಣುವು ಪುನಃ ಚೇತರಿಸಿಕೊಂಡು ಎದ್ದು ಚಕ್ರಾಯುಧವನ್ನು ಕೈಯಲ್ಲಿ ಎತ್ತಿ ಹಿಡಿದು ಕೋಪದಿಂದ ಕೆಂಪಾದ ಕಣ್ಣುಗಳುಳ್ಳವನಾಗಿ, ರುದ್ರದೇವನನ್ನು ಹೊಡೆಯುವುದರಲ್ಲಿದ್ದನು.

ತಸ್ಯ ಚಕ್ರಂ ಚ ಯದ್ರೌದ್ರಂ ಕಾಲಾದಿತ್ಯ ಸಮಪ್ರಭಂ ।
ವ್ಯಷ್ಟಂಭಯದದೀನಾತ್ಮಾ ಕರಸ್ಥಂ ನ ಚಚಾಲ ಸಃ ॥೨೯॥
ಅತಿಷ್ಠತ್ ಸ್ತಂಭಿತಸ್ತೇನ ಶೃಂಗವಾನಿವ ನಿಶ್ಚಲಃ ॥೩೦॥
ತ್ರಿಭಿಶ್ಚ ಧರ್ಷಿತಂ ಶಾರ್ಙ್ಗಂ ತ್ರಿಧಾ ಭೂತಂ ಪ್ರಭೋಸ್ತದಾ ।
ಶಾರ್ಙ್ಗಕೋಟಿಪ್ರಸಂಗಾದ್ವೈ ಚಿಚ್ಛೇದ ಚ ಶಿರಃ ಪ್ರಭೋಃ ॥೩೧॥
ಭಿನ್ನಂ ಚ ನಿಪಪಾತಾಸು(ಶು) ಶಿರಸ್ತಸ್ಯ ರಸಾತಲೇ ।
ವಾಯುನಾ ಪ್ರೇರಿತಂ ಚೈವ ಪ್ರಾಣಜೇನ ಪಿನಾಕಿನಾ ॥೩೨॥
ಪ್ರವಿವೇಶ ತದಾ ಚೈವ ತದೀಯಾ ಹವನೀಯಕಂ ।
ತತ್ಪ್ರವಿಧ್ವಸ್ತಕಲಶಂ ಭಗ್ನಯೂಪಂ ಸತೋರಣಂ ॥೩೩॥

---

೨೯. ಅಷ್ಟರಲ್ಲಿಯೇ ಮಹಾತ್ಮನಾದ ರುದ್ರದೇವನು ಪ್ರಳಯ ಕಾಲದ ಸೂರ್ಯನಿಗೆ ಸಮವಾದ ಕಾಂತಿಯುಳ್ಳ ಆ ವಿಷ್ಣುವಿನ ಕೈಯ್ಯಲ್ಲಿದ್ದ ಚಕ್ರವನ್ನು ಅಲ್ಲಾಡದಂತೆ ಸ್ತಂಭನಮಾಡಿದನು. ಅದರಿಂದ ಆ ವಿಷ್ಣುವೂ ಅಲ್ಲಾಡದಂತಾದನು. ಹಾಗೆ ಸ್ತಂಭಿತನಾದ ವಿಷ್ಣುವು ಶಿಖರವುಳ್ಳ ಬೆಟ್ಟದಂತೆ ಚಲಿಸಲಾರದೆ ಇದ್ದನು!

೩೦. ಪ್ರಭಾವಶಾಲಿಯಾದ ವಿಷ್ಣುವು ಹಿಡಿದಿದ್ದ ಶಾರ್ಙ್ಗವೆಂಬ ಧನುಸ್ಸು ಹೀಗೆ ಮೂರು ಬಗೆಯಾದ ಏಟಿನಿಂದ ಮೂರು ತುಂಡಾಗಲು ಆ ಧನುಸ್ಸಿನ ತುದಿಯು ತಗುಲಿ ವಿಷ್ಣುವಿನ ತಲೆಯೂ ಕತ್ತರಿಸಿ ಬಿದ್ದಿತು.

೩೧–೩೨. ಪಿನಾಕವೆಂಬ ಧನುಸ್ಸನ್ನು ಧರಿಸಿರುವ ಈಶ್ವರನ ನಿಶ್ವಾಸ ವಾಯುವಿನಿಂದ ಹಾರಿಸಲ್ಪಟ್ಟದ್ದಾಗಿ ವಿಷ್ಣುವಿನ ತಲೆಯು ರಸಾತಲ ಲೋಕದಲ್ಲಿ ಹೋಗಿಬಿದ್ದಿತು!

೩೩. ಆಗ ಆ ಯಾಗದ ಆಹವನೀಯಾಗ್ನಿಯಲ್ಲಿ ಆ ಯಾಗ ಶಾಲೆಯು ಎಲ್ಲವೂ ನಷ್ಟವಾದ ಕಲಶಗಳುಳ್ಳದ್ದಾಗಿ, ಮುರಿದುಹೋದ ಯೂಪಸ್ತಂಭಗಳುಳ್ಳದ್ದಾಗಿ, ತೋರಣಗಳೊಡನೆ ಭಸ್ಮವಾಗಿಹೋಯಿತು.

ಪ್ರದೀಪಿತ ಮಹಾಶಾಲಂ ದೃಷ್ಟ್ವಾ ಯಜ್ಞೋಽಪಿ ದುದ್ರುವೇ ।
ತೇ ತದಾ ಮೃಗರೂಪೇಣ ಧಾವಂತಂ ಗಗನಂ ಪ್ರತಿ ॥೩೪॥

ವೀರಭದ್ರ ಸ್ಸಮಾಧಾಯ ವಿಶಿರಸ್ಕಮಥಾಕರೋತ್ ।
ತತಃ ಪ್ರಜಾಪತಿಂ ಧರ್ಮಂ ಕಶ್ಯಪಂ ಚ ಜಗದ್ಗುರುಂ ॥೩೫॥

ಅರಿಷ್ಟನೇಮಿನಂ ವೀರೋ ಬಹುಪುತ್ರಂ ಮುನೀಶ್ವರಂ ।
ಮುನಿಮಂಗಿರಸಂ ಚೈವ ಕೃಷ್ಣಾಶ್ವಂ ಚ ಮಹಾಬಲಃ ॥೩೬॥

ಜಘಾನ ಮೂರ್ಧ್ನಿ ಪಾದೇನ ದಕ್ಷಂ ಚೈವ ಯಶಸ್ವಿನಂ ।
ಚಿಚ್ಛೇದ ಚ ಶಿರಸ್ತಸ್ಯ ದದಾಹಾಗ್ನೌ ದ್ವಿಜೋತ್ತಮಾಃ ॥೩೭॥

ಸರಸ್ವತ್ಯಾಶ್ಚ ನಾಸಾಗ್ರಂ ದೇವಮಾತು ಸ್ತಥೈವ ಚ ।
ನಿಕೃತ್ಯ ಕರಜಾಗ್ರೇಣ ವೀರಭದ್ರಃ ಪ್ರತಾಪವಾನ್ ॥೩೮॥

---

೩೪. ಯಾಗಶಾಲೆಯು ಉರಿದು ಹೋದುದನ್ನು ನೋಡಿ ಯಜ್ಞ ಪುರುಷನೂ ಓಡಲಾರಂಭಿಸಿದನು. ಅವನು ಮೃಗದ ರೂಪನ್ನು ಹೊಂದಿ ಆಕಾಶದಲ್ಲಿ ಓಡಿ ಹೋಗುತ್ತಿರುವುದನ್ನು ಅವರು ನೋಡಿ, ವೀರಭದ್ರ ದೇವನು ಅವನನ್ನು ಹಿಡಿದು ತಲೆ ಇಲ್ಲದವನನ್ನಾಗಿ ಮಾಡಿದನು.

೩೫–೩೬. ಆಮೇಲೆ ತುಂಬ ಶಕ್ತಿಯುಳ್ಳ ವೀರಭದ್ರದೇವನು ಬ್ರಹ್ಮ, ಧರ್ಮ, ಲೋಕಗುರುವಾದ ಕಾಶ್ಯಪ, ಅನೇಕ ಮಕ್ಕಳುಳ್ಳ ಮುನಿಶ್ರೇಷ್ಠನಾದ ಅರಿಷ್ಟನೇಮಿ, ಅಂಗಿರೋ ಋಷಿ ಮತ್ತು ಕೃಷ್ಣಾಶ್ವ, ಈ ಮುಂತಾದವರನ್ನೂ ಹೊಡೆದನು.

೩೭. ಓ ಶೌನಕಾದಿ ಋಷಿಗಳೇ, ಅನಂತರದಲ್ಲಿ ಆ ವೀರಭದ್ರನು ಪ್ರಸಿದ್ಧನಾದ ದಕ್ಷನನ್ನು ತಲೆಯಲ್ಲಿ ಕಾಲಿನಿಂದ ಒದೆದನು. ಆವನ ತಲೆಯನ್ನು ಕತ್ತರಿಸಿ ಅಗ್ನಿಯಲ್ಲಿ ಸುಟ್ಟುಬಿಟ್ಟನು.

೩೮. ಪರಾಕ್ರಮಿಯಾದ ಆ ವೀರಭದ್ರನು ಹಾಗೆಯೇ ದೇವತೆಗಳಿಗೆ ತಾಯಿಯಾದ ಸರಸ್ವತೀದೇವಿಯ ತುದಿಮೂಗನ್ನೂ ಉಗುರಿನ ತುದಿಯಿಂದ ಕತ್ತರಿಸಿದನು. ಹೀಗೆ ಆ ಯಾಗಶಾಲೆಯ ಮಧ್ಯದಲ್ಲಿ ಆ ವೀರಭದ್ರನು ಜಯಲಕ್ಷ್ಮಿಯಿಂದ ಕೂಡಿದವನಾಗಿ, ಸ್ಮಶಾನ ಮಧ್ಯದಲ್ಲಿರುವ ಕ್ಷೇತ್ರಪಾಲಸ್ವರೂಪನಾದ ರುದ್ರನಂತೆ, ಕಾಣಿಸುತ್ತಿದ್ದನು.

ತಸ್ಥೌ ಶ್ರಿಯಾ ವೃತೋ ಮಧ್ಯೇ ಪ್ರೇತಸ್ಥಾನೇ ಯಥಾ ಭವಃ ।
ಏತಸ್ಮಿನ್ನೇವ ಕಾಲೇ ತು ಭಗವಾನ್ ಪದ್ಮಸಂಭವಃ ॥೩೯॥

ಭದ್ರಮಾಹ ಮಹಾತೇಜಾಃ ಪ್ರಾರ್ಥಯನ್ ಪ್ರಣತಃ ಪ್ರಭುಃ ।
ಅಲಂ ಕ್ರೋಧೇನ ವೈ ಭದ್ರ ನಷ್ಟಾಶ್ಚೈವ ದಿವೌಕಸಃ ॥೪೦॥

ಪ್ರಸೀದ ಕ್ಷಮ್ಯತಾಂ ಸರ್ವಂ ರೋಮಜೈಸ್ಸಹ ಸುವ್ರತ ।
ಸೋಽಪಿ ಭದ್ರಃ ಪ್ರಭಾವೇಣ ಬ್ರಹ್ಮಣಃ ಪರಮೇಷ್ಠಿನಃ ॥೪೧॥

ಶಮಂ ಜಗಾಮ ಶನಕೈಃ ಶಾಂತಸ್ತಸ್ಥೌ ತದಾಜ್ಞಯಾ ।
ದೇವೋಽಪಿ ತತ್ರ ಭಗವಾನ್ ಅಂತರಿಕ್ಷೇ ವೃಷಧ್ವಜಃ ॥೪೨॥

---

೩೯. ಈ ಸಮಯದಲ್ಲಿ ಷಡ್ಗುಣೈಶ್ವರ್ಯವುಳ್ಳ, ಕಮಲದಲ್ಲಿ ಹುಟ್ಟಿದ ತುಂಬ ಕಾಂತಿಯುಳ್ಳ, ಜಗದೊಡೆಯನಾದ ಬ್ರಹ್ಮನು ಆ ವೀರಭದ್ರನನ್ನು ಕುರಿತು ನಮಸ್ಕರಿಸಿ ಪ್ರಾರ್ಥಿಸುತ್ತಾ ಹೀಗೆ ಹೇಳಿದನು.

೪೦. ಓ ವೀರಭದ್ರದೇವನೇ, ಕೋಪವನ್ನು ಇಷ್ಟಕ್ಕೆ ಸಾಕು ಮಾಡು. ದಕ್ಷನ ಯಾಗದಲ್ಲಿ ಭಾಗವನ್ನು ವಹಿಸಿದ್ದ ದೇವತೆಗಳೆಲ್ಲರೂ ನಾಶವನ್ನು ಹೊಂದಿದರು. ಇದುವರೆಗೆ ಆದುದೆಲ್ಲವನ್ನೂ ಕ್ಷಮಿಸು. ರೋಮಕೂಪಗಳಿಂದ ಉಂಟಾಗಿರುವ ನಿನ್ನ ಗಣಗಳೊಡನೆ ಧರ್ಮನಿಯಮಗಳನ್ನು ಪಾಲಿಸುವವನಾದ ನೀನು ಸಮಾಧಾನವನ್ನು ಹೊಂದು.

೪೧. ಈ ಲೋಕದಲ್ಲಿ ಮೇಲಾದ ಸ್ಥಾನವನ್ನು ಪಡೆದಿರುವ ಆ ಬ್ರಹ್ಮನ ಮಹಿಮೆಯಿಂದ ಆ ವೀರಭದ್ರನೂ ನಿಧಾನವಾಗಿ ಕೋಪವನ್ನು ಬಿಟ್ಟು ಶಾಂತಿಯನ್ನು ಹೊಂದಿದನು. ಆ ಬ್ರಹ್ಮನ ಅಪ್ಪಣೆಯಂತೆ ಚಿತ್ತ ಸಮಾಧಾನವನ್ನು ಪಡೆದಿದ್ದನು.

೪೨–೪೩. ಅಲ್ಲಿ ಆಕಾಶದಲ್ಲಿ ತೇಜೋರೂಪಿಯೂ, ಮಹಾಮಹಿಮನೂ, ವೃಷಭವೇ ಧ್ವಜದಲ್ಲಿ ಗುರುತಾಗಿ ಉಳ್ಳವನೂ, ಭಕ್ತರಿಗೆ ಎಲ್ಲ ಕೋರಿಕೆಗಳನ್ನೂ ಸಲ್ಲಿಸುವವನೂ, ಎಲ್ಲ ಲೋಕಗಳಿಗೂ ದೊಡ್ಡ ದೊರೆಯೂ ಆದ ಶಂಭುವು ಬ್ರಹ್ಮದೇವನಿಂದ ಪ್ರಾರ್ಥಿಸಲ್ಪಟ್ಟವನಾಗಿ, ಅವನ ಕೋರಿಕೆಯಂತೆ ಆ ಯಾಗದಲ್ಲಿ ಸತ್ತವರೆಲ್ಲರಿಗೂ ಪುನಃ ಮುಂಚಿನಂತೆಯೇ ಅವರವರ ಶರೀರ ರೂಪಗಳುಂಟಾಗುವಂತೆ ವರಗಳನ್ನು ಅನು

ಸಗಣ ಸ್ಸರ್ವದಶ್ಯಂಭುಃ ಸರ್ವಲೋಕ ಮಹೇಶ್ವರಃ ।
ಪ್ರಾರ್ಥಿತಶ್ಚೈವ ದೇವೇನ ಬ್ರಹ್ಮಣಾ ಭಗವಾನ್ ಭವಃ ॥೪೩॥

ಹತಾನಾಂ ಚ ತದಾ ತೇಷಾಂ ಪ್ರದದೌ ಪೂರ್ವವತ್ತನುಂ ।
ಇಂದ್ರಸ್ಯ ಚ ಶಿರಸ್ತಸ್ಯ ವಿಷ್ಣೋಶ್ಚೈವ ಮಹಾತ್ಮನಃ ॥೪೪॥

ದಕ್ಷಸ್ಯ ಚ ಮುನೀಂದ್ರಸ್ಯ ತಥಾಽನ್ಯೇಷಾಂ ಮಹೇಶ್ವರಃ ।
ವಾಗೀಶ್ಯಾಶ್ಚೈವ ನಾಸಾಗ್ರಂ ದೇವಮಾತು ಸ್ತಥೈವ ಚ ॥
ನಷ್ಟಾನಾಂ ಜೀವಿತಂ ಚೈವ ವರಾಣಿ ವಿವಿಧಾನಿ ಚ ॥೪೫॥

ದಕ್ಷಸ್ಯ ಧ್ವಸ್ತವಕ್ತ್ರಸ್ಯ ಶಿರಸಾ ಭಗವಾನ್ಪ್ರಭುಃ ।
ಕಲ್ಪಯಾಮಾಸ ವೈ ವಕ್ತ್ರಂ ಲೀಲಯಾ ಚ ಮಹಾನ್ ಭವಃ ॥೪೬॥

ಸ್ತುತಸ್ತೇನ ಮಹಾತೇಜಾಃ ಪ್ರದಾಯ ವಿವಿಧಾನ್ ವರಾನ್ ।
ಗಾಣಪತ್ಯಂ ದದೌ ತಸ್ಮೈ ದಕ್ಷಾಯಾ ಕ್ಲಿಷ್ಟಕರ್ಮಣೇ ॥೪೭॥

ದೇವಾಶ್ಚ ಸರ್ವೇ ದೇವೇಶಂ ತುಷ್ಟುವುಃ ಪರಮೇಶ್ವರಂ ।
ನಾರಾಯಣಶ್ಚ ಭಗವಾನ್ ತುಷ್ಟಾವ ಚ ಕೃತಾಂಜಲಿಃ ॥೪೮॥

---

ಗ್ರಹಿಸಿದನು. ಹೇಗೆಂದರೆ, ಇಂದ್ರ, ವಿಷ್ಣು, ದಕ್ಷ, ಮತ್ತು ಇತರ ಎಲ್ಲಾ ಋಷಿಗಳ ರುಂಡಗಳನ್ನೂ ಕೂಡ ದಯಪಾಲಿಸಿದ್ದಲ್ಲದೆ ದೇವಮಾತೆಯಾದ ಸರಸ್ವತಿದೇವಿಗೆ ಮೂಗಿನ ತುದಿಯನ್ನೂ ಮುಂಚಿನಂತೆಯೇ ಕೊಟ್ಟನು.

೪೫–೪೬. ಮೃತರಾಗಿದ್ದವರಿಗೆ ಪುನಃ ಪ್ರಾಣವನ್ನು ದಯಪಾಲಿಸಿದ್ದಲ್ಲದೆ ನಾನಾವಿಧವಾದ ವರಗಳನ್ನೂ ಕೊಟ್ಟನು. ಮತ್ತು ಮುಖವಿಲ್ಲದೇ ಹೋಗಿದ್ದ ದಕ್ಷಬ್ರಹ್ಮನಿಗೂ ಯಜ್ಞದ ಪಶುವಾದ ಆಡಿನಮುಖವನ್ನು ಶಿರಸ್ಸಿನಸ್ಥಾನದಲ್ಲಿ ಕೂಡಿಸಿದನು.

೪೭. ದಕ್ಷನಿಂದ ಸ್ತುತಿಸಲ್ಪಟ್ಟ ಪರಮೇಶ್ವರನು ಅವನಿಗೆ ನಾನಾವಿಧಗಳಾದ ವರಗಳನ್ನು ಕೊಟ್ಟು ಪ್ರಮಥಗಣಗಳ ಆಧಿಪತ್ಯವನ್ನೂ ಕೊಟ್ಟನು. ದೇವತೆಗಳೂ ಕೂಡ ಪರಮೇಶ್ವರನನ್ನು ಸ್ತುತಿಸಿದರು.

೪೮–೪೯. ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಮನ್ನಾರಾಯಣನೂ ಕೂಡ ಕೈಯನ್ನು ಮುಗಿದವನಾಗಿ ಈಶ್ವರನನ್ನು ಸ್ತೋತ್ರಮಾಡಿದನು.

ತುಷ್ಟುವುರ್ದೇವದೇವೇಶಂ ನೀಲಕಂಠಂ ವೃಷಧ್ವಜಂ ।
ತಾನ್ ದೇವಾ ನನುಗೃಹ್ಯೈವ ಭವೋಽಪ್ಯಂತರಧೀಯತ ॥೪೯॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಶಿವಕೃತದಕ್ಷಯಾಗ
ವಿಧ್ವಂಸೋ ನಾಮ ಶತತಮೋಽಧ್ಯಾಯಃ

---

ಇದೇ ರೀತಿಯಲ್ಲಿ ಬ್ರಹ್ಮನೂ ಮತ್ತು ಸಮಸ್ತ ಋಷಿಗಳೂ ವೃಷಭಾರೂಢನಾದ ಭಗವಂತನನ್ನು ಸ್ತೋತ್ರಮಾಡಿದರು. ಅವರೆಲ್ಲರನ್ನೂ ಅನುಗ್ರಹಿಸಿ ಪರಮೇಶ್ವರನು ಮಾಯವಾದನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಶಿವಕೃತದಕ್ಷಯಾಗ
ಧ್ವಂಸನ ವೆಂಬ ನೂರನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಏಕಾಧಿಕ ಶತತಮೋऽಧ್ಯಾಯಃ

**॥ ಋಷಯ ಊಚುಃ ॥**

**ಕಥಂ ಹಿಮವತಃ ಪುತ್ರೀ ಬಭೂವಾಂಬಾ ಸತೀ ಶುಭಾ ।**
**ಕಥಂ ವಾ ದೇವದೇವೇಶ ಮವಾಪ ಪತಿಮೀಶ್ವರಂ ॥ ೧ ॥**

**॥ ಸೂತ ಉವಾಚ ॥**

**ಸಾ ಮೇನಾತನುಮಾಶ್ರಿತ್ಯ ಸ್ವೇಚ್ಛಯೈವ ವರಾಂಗನಾ ।**
**ತದಾ ಹೈಮವತೀ ಜಜ್ಞೇ ತಪಸಾ ಚ ದ್ವಿಜೋತ್ತಮಾಃ ॥ ೨ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರೊಂದನೆಯ ಅಧ್ಯಾಯವು

ನೂರನೆಯ ಅಧ್ಯಾಯದಲ್ಲಿ ರುದ್ರನ ಅಪ್ಪಣೆಯಂತೆ ವೀರಭದ್ರನು ದಕ್ಷನಯಜ್ಞವನ್ನು ಅಲ್ಲಿದ್ದವರೊಡನೆ ನಾಶಮಾಡಲು ಈಶ್ವರನು ಅವರನ್ನು ಪುನಃ ರಕ್ಷಿಸಿದ ರೀತಿಯನ್ನು ಸೂತನು ಹೇಳಲು, ಪುನಃ ಋಷಿಗಳು ಸೂತನನ್ನು ಕುರಿತು ಹೀಗೆಂದು ಕೇಳಿದರು.

೧. ಋಷಿಗಳು ಸೂತನನ್ನು–ಮಂಗಳಸ್ವರೂಪಳೂ ಮತ್ತು ಲೋಕಮಾತೆಯೂ ಆದ ಸತೀದೇವಿಯು ಹಿಮವಂತನ ಮಗಳಾಗಿ ಹೇಗೆ ಜನ್ಮವನ್ನೆತ್ತಿದಳು? ಮತ್ತು ಈಶ್ವರನನ್ನು ಯಾವಬಗೆಯಿಂದ ತನ್ನ ಪತಿಯನ್ನಾಗಿ ಪಡೆದಳು? ಎಂಬುದನ್ನು ದಯಮಾಡಿ ಹೇಳಬೇಕು. ಎಂದು ಕೇಳಲು,

೨. ಸೂತನು ಹೇಳಿದನು:—ಸತೀದೇವಿಯು ತನ್ನ ಇಚ್ಛೆಗೆ ಅನುಗುಣವಾಗಿ ಮಕ್ಕಳನ್ನು ಪಡೆಯುವುದಕ್ಕೋಸ್ಕರ ಕಠಿಣವಾದ ತಪಸ್ಸನ್ನು ಕೈಗೊಂಡಿದ್ದ ಮೆನಾದೇವಿಯ ಇಷ್ಟಾರ್ಥವನ್ನು ನೆರವೇರಿಸಲು ಅವಳ ಗರ್ಭವನ್ನು ಪಡೆದು ಹಿಮವಂತನ ಪುತ್ರಿಯಾಗಿ ಜನ್ಮವನ್ನು ಎತ್ತಿದಳು.

ಜಾತಕರ್ಮಾದಿಕಾಃ ಸರ್ವಾ ಶ್ಚಕಾರ ಚ ಗಿರೀಶ್ವರಃ ।
ದ್ವಾದಶೇ ಚ ತದಾ ವರ್ಷೇ ಪೂರ್ಣೇ ಹೈಮವತೀ ಶುಭಾ ॥ ೩ ॥

ತಪಸ್ತೇಪೇ ತಯಾ ಸಾರ್ಧ ಮನುಜಾ ಚ ಶುಭಾನನಾ ।
ಅನ್ಯಾ ಚ ದೇವೀ ಹ್ಯನುಜಾ ಸರ್ವಲೋಕನಮಸ್ಕೃತಾ ॥ ೪ ॥

ಋಷಯಶ್ಚ ತದಾ ಸರ್ವೇ ಸರ್ವಲೋಕಮಹೇಶ್ವರಂ ।
ತುಷ್ಟುವುಸ್ತಪಸಾ ದೇವೀಂ ಸಮಾವೃತ್ಯ ಸಮಂತತಃ ॥ ೫ ॥

ಜ್ಯೇಷ್ಠಾ ಹ್ಯಪರ್ಣಾ ಹ್ಯನುಜಾ ಚೈಕಪರ್ಣಾ ಶುಭಾನನಾ ।
ತೃತೀಯಾ ಚ ವರಾರೋಹಾ ತಥಾ ಚೈವೈಕಪಾಟಲಾ ॥ ೬ ॥

---

೩. ಪರ್ವತೇಶ್ವರನಾದ ಹಿಮವಂತನು ತನ್ನಮಗಳಿಗೆ ತ್ರೈವರ್ಣಿಕರಿಗೆ ಉಚಿತವಾದ ಸಮಸ್ತ ಜಾತಕರ್ಮಾದಿ ಸಂಸ್ಕಾರಗಳನ್ನೂ ನೆರವೇರಿಸಿದನು.

೪. ಹನ್ನೆರಡು ವರ್ಷಗಳು ತುಂಬಲು ಹಿಮವಂತನ ಪುತ್ರಿಯಾದ ಪಾರ್ವತಿಯು ತಪಸ್ಸನ್ನು ಆಚರಿಸಿದಳು. ಅವಳೊಡನೆ ಅವಳ ಇನ್ನಿಬ್ಬರೂ ತಂಗಿಯರೂ ತಪಸ್ಸನ್ನಾಚರಿಸಿದರು.

೫. ಆ ಕಾಲದಲ್ಲಿಯೇ ಎಲ್ಲಾ ಋಷಿಗಳೂ ಜಗದ್ಧಾತ್ರಿಯಾದ ಪಾರ್ವತಿಯ ಸುತ್ತಲೂ ಸುತ್ತುವರಿದು ಅವಳ ತಪಸ್ಸಿನಿಂದ ಸಂತೋಷಗೊಂಡವರಾಗಿ ಸ್ತುತಿಸಿದರು.

೬. ಆ ಮೂವರು ಅಕ್ಕ ತಂಗಿಯರಲ್ಲಿ ಹಿರಿಯವಳ ಹೆಸರು ಅಪರ್ಣಾ ಎಂಬುದಾಗಿಯೂ, (ಅಪರ್ಣಾ ಎಂದರೆ ಉದುರಿದ ಎಲೆಯನ್ನೂ ತಿನ್ನದೆ ತಪಸ್ಸನ್ನು ಮಾಡಿದ ಪಾರ್ವತೀ ಎಂದರ್ಥವು.) ಎರಡನೆಯವಳ ಹೆಸರು ಏಕಪರ್ಣಾ ಎಂದೂ ಕಿರಿಯವಳ ಹೆಸರು ಏಕಪಾಟಲಾ ಎಂಬುದಾಗಿಯೂ ಇದ್ದಿತು.

ತಪಸಾ ಚ ಮಹಾದೇವ್ಯಾಃ ಪಾರ್ವತ್ಯಾಃ ಪರಮೇಶ್ವರಃ ।
ವಶೀಕೃತೋ ಮಹಾದೇವಃ ಸರ್ವಭೂತಪತಿರ್ಭವಃ ॥ ೭ ॥

ಏತಸ್ಮಿನ್ನೇವ ಕಾಲೇ ತು ತಾರಕೋ ನಾಮ ದಾನವಃ ।
ತಾರಾತ್ಮಜೋ ಮಹಾತೇಜಾ ಬಭೂವ ದಿತಿನಂದನಃ ॥ ೮ ॥

ತಸ್ಯ ಪುತ್ರಾ ಸ್ತ್ರಯಶ್ಚಾಪಿ ತಾರಕಾಕ್ಷೋ ಮಹಾಸುರಃ ।
ವಿದ್ಯುನ್ಮಾಲೀ ಚ ಭಗವಾನ್ ಕಮಲಾಕ್ಷಶ್ಚ ವೀರ್ಯವಾನ್ ॥ ೯ ॥

ಪಿತಾಮಹಸ್ತಥಾ ತೇಷಾಂ ತಾರೋ ನಾಮ ಮಹಾಬಲಃ ।
ತಪಸಾ ಲಬ್ಧವೀರ್ಯಶ್ಚ ಪ್ರಸಾದಾದ್ಬ್ರಹ್ಮಣಃ ಪ್ರಭೋಃ ॥೧೦॥

ಸೋಽಪಿ ತಾರೋ ಮಹಾತೇಜಾ ಸ್ತ್ರೈಲೋಕ್ಯಂ ಸಚರಾಚರಂ ।
ವಿಜಿತ್ಯ ಸಮರೇ ಪೂರ್ವಂ ವಿಷ್ಣುಂ ಚ ಜಿತವಾನಸೌ ॥೧೧॥

---

೭. ಮಹಾದೇವಿಯಾದ ಪಾರ್ವತಿಯ ತಪಸ್ಸಿನಿಂದ ಸಂತೋಷ ಗೊಂಡ ಪರಮೇಶ್ವರನು ಅವಳ ಅಧೀನನಾದನು. ಎಂದರೆ ಪರಮೇಶ್ವರನು ಅವಳನ್ನು ವಿವಾಹಮಾಡಿಕೊಂಡನು.

೮. ಅದೇ ಕಾಲದಲ್ಲಿ ತಾರನೆಂಬ ರಾಕ್ಷಸನ ಮಗನಾದ ತಾರಕನೆಂಬ ಪರಾಕ್ರಮಿಯಾದ ರಾಕ್ಷಸನು ಇದ್ದನು.

೯. ಆ ತಾರಕನೆಂಬ ರಾಕ್ಷಸನಿಗೆ ತಾರಕಾಕ್ಷನೆಂದೂ, ಕಮಲಾಕ್ಷನೆಂದೂ, ವಿದ್ಯುನ್ಮಾಲಿಎಂದೂ ಹೆಸರುಳ್ಳ ಮೂವರು ಮಕ್ಕಳಿದ್ದರು.

೧೦. ಆ ಮೂವರ ಅಜ್ಜನಾದ ಬಲಿಷ್ಠನಾದ ತಾರನೆಂಬ ರಾಕ್ಷಸನು ತಪಸ್ಸಿನಿಂದ ಬ್ರಹ್ಮನನ್ನು ಸಂತೋಷಗೊಳಿಸಿ ಬ್ರಹ್ಮನ ಅನುಗ್ರಹ ದಿಂದ ಅತ್ಯಂತ ಪರಾಕ್ರಮಿಯಾಗಿದ್ದನು.

೧೧. ಆ ಮಹಾತೇಜಸ್ವಿಯಾದ ತಾರನೂ ಮೊಟ್ಟಮೊದಲು ಮೂರು ಲೋಕಗಳನ್ನೂ ಯುದ್ಧದಲ್ಲಿ ಜಯಿಸಿ ಅನಂತರದಲ್ಲಿ ವಿಷ್ಣುವನ್ನೂ ಜಯಿಸಿದನು.

ತಯೋಃ ಸಮಭವದ್ಯುದ್ಧಂ ಸುಘೋರಂ ರೋಮಹರ್ಷಣಂ ।
ದಿವ್ಯಂ ವರ್ಷಸಹಸ್ರಂ ತು ದಿವಾರಾತ್ರ ಮವಿಶ್ರಮಂ ॥೧೨॥
ಸರಥಂ ವಿಷ್ಣುಮಾದಾಯ ಚಿಕ್ಷೇಪ ಶತಯೋಜನಂ ।
ತಾರೇಣ ವಿಜಿತಃ ಸಂಖ್ಯೇ ದುದ್ರಾವ ಗರುಡಧ್ವಜಃ ॥೧೩॥
ತಾರೋ ವರಾನ್ ಶತಗುಣಂ ಲಬ್ಧ್ವಾ ಶತಗುಣಂ ಬಲಂ ।
ಪಿತಾಮಹಾ ಜ್ಜಗತ್ಸರ್ವ ಮವಾಪ ದಿತಿ ನಂದನಃ ॥೧೪॥
ದೇವೇಂದ್ರಪ್ರಮುಖಾನ್ ಜಿತ್ವಾ ದೇವಾನ್ ದೇವೇಶ್ವರೇಶ್ವರಃ ।
ವಾರಯಾಮಾಸ ತೈರ್ದೇವಾನ್ ಸರ್ವಲೋಕೇಷು ಮಾಯಯಾ ॥

---

೧೨. ವಿಷ್ಣುವಿಗೂ ಮತ್ತು ತಾರನಿಗೂ ವಿಶ್ರಾಂತಿಯಿಲ್ಲದೇ ಅಹೋರಾತ್ರವೂ ಸಾವಿರ ದಿವ್ಯ ವರ್ಷಗಳಪರ್ಯಂತ ಭಯಂಕರವಾಗಿಯೂ ರೋಮಾಂಚಕಾರಿಯಾಗಿಯೂ ಆದ ಯುದ್ಧವು ಜರುಗಿತು.

೧೩. ತಾರನು ವಿಷ್ಣುವನ್ನು ರಥದಿಂದ ಸಹಿತವಾಗಿ ನೂರು ಯೋಜನದ ದೂರದಲ್ಲಿ ಹಾರಿಸಿದನು. ಈ ಪ್ರಕಾರವಾಗಿ ಯುದ್ಧದಲ್ಲಿ ಸೋತ ವಿಷ್ಣುವು ಓಡಿಹೋದನು.

೧೪. ಆ ದೈತ್ಯನು ಬ್ರಹ್ಮನದೆಸೆಯಿಂದ ನೂರಾರು ವರಗಳನ್ನು ಪಡೆದು ಅವುಗಳಮೂಲಕ ನೂರರಷ್ಟು ಶಕ್ತಿಯನ್ನು ಪಡೆದು ಸಮಸ್ತ ಜಗತ್ತನ್ನೂ ತನ್ನ ಸ್ವಾಧೀನ ಪಡಿಸಿಕೊಂಡನು.

೧೫. ತಾರಕಾಸುರನು ರುದ್ರಪುತ್ರನಿಂದ ಹೊರತು ಮತ್ತೆ ಯಾರಿಂದಲೂ ತನಗೆ ಮರಣವು ಸಂಭವಿಸಕೂಡದು. ಎಂದು ಮುಂತಾದ ಬ್ರಹ್ಮನಿಂದ ಪಡೆದ ವರಗಳಿಂದ ದೇವೇಂದ್ರನೇ ಪ್ರಮುಖನಾಗಿ ಉಳ್ಳ ಸಕಲ ದೇವತೆಗಳನ್ನೂ ಜಯಿಸಿ ಸಮಸ್ತ ಲೋಕಗಳಲ್ಲಿಯೂ ದೇವತೆಗಳನ್ನು ತನ್ನ ಮಾಯೆಯಿಂದ ತನ್ನ ಅಧೀನರನ್ನಾಗಿ ಮಾಡಿಸಿಕೊಂಡಿದ್ದನು.

ದೇವತಾಶ್ಚ ಸಹೇಂದ್ರೇಣ ತಾರಕಾದ್ಭಯಪೀಡಿತಾಃ ।
ನ ಶಾಂತಿಂ ಲೇಭಿರೇ ಶೂರಾಃ ಶರಣಂ ವಾ ಭಯಾರ್ದಿತಾಃ ॥೧೬॥

ತದಾಽಮರಪತಿಃ ಶ್ರೀಮಾನ್ ಸನ್ನಿಪತ್ಯಾ ಮರಪ್ರಭುಃ ।
ಉವಾಚಾಂಗಿರಸಂ ದೇವೋ ದೇವಾನಾಮಪಿ ಸನ್ನಿಧೌ ॥೧೭॥

ಭಗವಂ ಸ್ತಾರಕೋ ನಾಮ ತಾರಜೋ ದಾನವೋತ್ತಮಃ ।
ತೇನ ಸನ್ನಿಹತಾಃ ಯುದ್ಧೇ ವತ್ಸಾ ಗೋಪತಿನಾ ಯಥಾ ॥೧೮॥

ಭಯಾತ್ತಸ್ಮಾನ್ಮಹಾಭಾಗ ಬೃಹದ್ಯುದ್ಧೇ ಬೃಹಸ್ಪತೇ ।
ಅನಿಕೇತಾ ಭ್ರಮಂತ್ಯೇತೇ ಶಕುಂತಾ ಇವ ಪಂಜರೇ ॥೧೯॥

ಅಸ್ಮಾಕಂ ಯಾನ್ಯಮೋಘಾನಿ ಆಯುಧಾನ್ಯಂಗಿರೋವರ ।
ತಾನಿ ಮೋಘಾನಿ ಜಾಯಂತೇ ಪ್ರಭಾವಾದಮರದ್ವಿಷಃ ॥೨೦॥

ದಶವರ್ಷಸಹಸ್ರಾಣಿ ದ್ವಿಗುಣಾನಿ ಬೃಹಸ್ಪತೇ ।
ವಿಷ್ಣುನಾ ಯೋಧಿತೋ ಯುದ್ಧೇ ತೇನಾಪಿ ನ ಚ ಸೂದಿತಃ ॥೨೧॥

---

೧೬. ಇಂದ್ರನಿಂದೊಡಗೂಡಿದ ದೇವತೆಗಳು ತಾರಕಾಸುರನ ಹೆದರಿಕೆಯಿಂದ ತೊಂದರೆಗೊಳಗಾಗಿ ಯಾರನ್ನೂ ಶರಣು ಹೋಗಲೂ ಅಸಮರ್ಥರಾಗಿ ಶಾಂತಿಯನ್ನು ಹೊಂದಲಿಲ್ಲ.

೧೭. ಆಗ ಇಂದ್ರನು ದೇವತೆಗಳಿಂದೊಡಗೂಡಿದವನಾಗಿ, ಬೃಹಸ್ಪತಿಯನ್ನು ಶರಣು ಹೊಕ್ಕವನಾಗಿ ಅವನನ್ನು ಕುರಿತು ಹೀಗೆಂದನು.

೧೮-೨೦. ಕುಶಾಗ್ರಬುದ್ಧಿಯಾದ ಓ ಬೃಹಸ್ಪತಿಯೇ, ಗೋಪಾಲಕನಿಂದ ಹೊಡೆಯಲ್ಪಟ್ಟ ಕರುಗಳಂತೆ, ಈ ಎಲ್ಲಾ ದೇವತೆಗಳೂ ಯುದ್ಧದಲ್ಲಿ ತಾರಕಾಸುರನಿಂದ ಸೋಲಿಸಲ್ಪಟ್ಟವರಾಗಿ, ವಾಸಮಾಡುವುದಕ್ಕೆ ಸ್ಥಳವನ್ನು ಕಾಣದೇ, ಪಂಜರದ ಮಧ್ಯದಲ್ಲಿರುವ ಹಕ್ಕಿಗಳೋಪಾದಿಯಲ್ಲಿ, ಸುತ್ತುತ್ತಾರೆ. ಆ ರಾಕ್ಷಸನ ಪ್ರಭಾವದಿಂದ ಅಮೋಘವಾದ ನಮ್ಮ ಆಯುಧಗಳೂ ವಿಫಲವಾಗಿರುತ್ತವೆ.

೨೧-೨೨ ಇಪ್ಪತ್ತುಸಾವಿರ ವರ್ಷಗಳವರೆಗೆ ವಿಷ್ಣುವು ಆ ರಾಕ್ಷಸನೊಂದಿಗೆ ಯುದ್ಧಮಾಡಿದರೂ ಆದಾನವನು ಯುದ್ಧದಲ್ಲಿ ಸಾಯಲಿಲ್ಲ.

ಯಸ್ತೇನಾನಿರ್ಜಿತೋ ಯುದ್ಧೇ ವಿಷ್ಣುನಾ ಪ್ರಭವಿಷ್ಣುನಾ ।
ಕಥಮಸ್ಮದ್ವಿಧಸ್ತಸ್ಯ ಸ್ಥಾಸ್ಯತೇ ಸಮರೇಽಗ್ರತಃ ॥೨೨॥

ಏವಮುಕ್ತಸ್ತು ಶಕ್ರೇಣ ಜೀವಃ ಸಾರ್ಧಂ ಸುರಾಧಿಪೈಃ ।
ಸಹಸ್ರಾಕ್ಷೇಣ ಚ ವಿಭುಂ ಸಂಪ್ರಾಪ್ಯಾಹ ಕುಶಧ್ವಜಂ ॥೨೩॥

ಸೋಽಪಿ ತಸ್ಯ ಮುಖಾಚ್ಛ್ರುತ್ವಾ ಪ್ರಣಯಾತ್ಪ್ರಣತಾರ್ತಿಹಾ ।
ದೇವೈ ರಶೇಷೈಃ ಸೇಂದ್ರೈಸ್ತು ಜೀವಮಾಹ ಪಿತಾಮಹಃ ॥೨೪॥

ಜಾನೇ ವೋಽರ್ತಿಂ ಸುರೇಂದ್ರಾಣಾಂ ತಥಾಽಪಿ ಶೃಣು ಸಾಂಪ್ರತಂ।
ವಿನಿಂದ್ಯ ದಕ್ಷಂ ಯಾ ದೇವೀ ಸತೀ ರುದ್ರಾಂಗ ಸಂಭವಾ ॥೨೫॥

ಉಮಾ ಹೈಮವತೀ ಯಜ್ಞೇ ಸರ್ವಲೋಕ ನಮಸ್ಕೃತಾ ।
ತಸ್ಯಾ ಶ್ಚೈವೇಹ ರೂಪೇಣ ಯೂಯಂ ದೇವಾಃ ಸುರೋತ್ತಮಾಃ ॥

---

ಹೀಗೆ ಶತ್ರುಗಳನ್ನು ಜಯಿಸುವುದರಲ್ಲಿ ಸಮರ್ಥನಾದ ವಿಷ್ಣುವೇ ಅವನ ಮುಂದೆ ಸೋತು, ನಿಲ್ಲಲು ಅಂಜುತ್ತಿರಲು ನಮ್ಮಂಥವರು ಹೇಗೆತಾನೇ ನಿಲ್ಲಬಲ್ಲೆವು?

೨೩. ಈ ರೀತಿಯಲ್ಲಿ ಇಂದ್ರನು ಹೇಳಿಕೊಳ್ಳಲು ಬೃಹಸ್ಪತಿಯು ಇಂದ್ರನೊಂದಿಗೂ ಮತ್ತು ದೇವತೆಗಳೊಂದಿಗೂ ಕೂಡಿ ಬ್ರಹ್ಮನ ಸನ್ನಿಧಿಯನ್ನೂ ಪಡೆದು ಅವನೊಂದಿಗೆ ದೇವತೆಗಳ ಕಷ್ಟಗಳನ್ನು ಹೇಳಿಕೊಂಡನು.

೨೪. ಆ ಗುರುವಿನ ಮುಖದಿಂದ ದೇವತೆಗಳ ದುರ್ದಶೆಯನ್ನು ಕೇಳಿ ಶರಣು ಹೋದವರನ್ನು ಕಾಪಾಡತಕ್ಕ ಆ ಬ್ರಹ್ಮನೂ ಕೂಡ ಪ್ರೀತಿಪೂರ್ವಕವಾಗಿ ಆ ಬೃಹಸ್ಪತಿಯನ್ನು ಕುರಿತು ಹೀಗೆ ಹೇಳಿದನು.

೨೫-೨೬. ದೇವತೆಗಳಾದ ನಿಮ್ಮ ದುಃಖವನ್ನು ನಾನೂ ಬಲ್ಲವನಾಗಿರುತ್ತೇನೆ. ಆದರೂ ಈಗ ನಾನು ಹೇಳುವಮಾತನ್ನು ಲಾಲಿಸಿರಿ. ರುದ್ರನ ಶರೀರಸಂಭೂತಳಾದ ಯಾವ ಆ ಸತೀದೇವಿಯು ದಕ್ಷನನ್ನು ದೂಷಿಸಿ, ದೇಹತ್ಯಾಗಮಾಡಿದವಳಾಗಿ ಹಿಮವಂತನ ಮಗಳಾಗಿ ಜನ್ಮವನ್ನು ತಾಳಿದಾಳೆ. ನೀವು ಪರಮೇಶ್ವರನ ಮನಸ್ಸನ್ನು ಆಕರ್ಷಿಸಿ ಅವಳ ರೂಪದಿಂದ ಮೋಹಗೊಳ್ಳುವಂತೆ ಮಾಡಿರಿ.

ವಿಭೋರ್ಯರ್ತಧ್ವನಾಕ್ರಷ್ಟುಂ ರುದ್ರಸ್ಯಾಸ್ಯ ಮನೋ ಮಹತ್ ।
ತಯೋರ್ಯೋಗೇನ ಸಂಭೂತಃ ಸ್ಕಂದಃ ಶಕ್ತಿಧರಃ ಪ್ರಭುಃ ॥೨೭॥

ಷಡಾಸ್ಯೋ ದ್ವಾದಶಭುಜಃ ಸೇನಾನೀಃ ಪಾವಕಿಃ ಪ್ರಭುಃ ।
ಸ್ವಾಹೇಯಃ ಕಾರ್ತಿಕೇಯಶ್ಚ ಗಾಂಗೇಯಃ ಶರಧಾಮಜಃ ॥೨೮॥

ದೇವಃ ಶಾಖೋ ವಿಶಾಖಶ್ಚ ನೈಗಮೇಶಶ್ಚ ವೀರ್ಯವಾನ್ ।
ಸೇನಾಪತಿಃ ಕುಮಾರಾಖ್ಯಃ ಸರ್ವಲೋಕನಮಸ್ಕೃತಃ ॥೨೯॥

ಲೀಲಯೈವ ಮಹಾಸೇನಃ ಪ್ರಬಲಂ ತಾರಕಾಸುರಂ ।
ಬಾಲೋಽಪಿ ವಿನಿಹತ್ಯೈಕೋ ದೇವಾನ್ ಸಂತಾರಯಿಷ್ಯತಿ ॥೩೦॥

ಏವಮುಕ್ತಸ್ತದಾ ತೇನ ಬ್ರಹ್ಮಣಾ ಪರಮೇಷ್ಠಿನಾ ।
ಬೃಹಸ್ಪತಿ ಸ್ತಥಾ ಸೇಂದ್ರೈಃ ದೇವೈರ್ದೇವಂ ಪ್ರಣಮ್ಯ ತಂ ॥೩೧॥

ಮೇರೋಃಶಿಖರಮಾಸಾದ್ಯ ಸ್ಮರಂ ಸಸ್ಮಾರ ಸುವ್ರತಾಃ ।
ಸ್ಮರಣಾದ್ದೇವದೇವಸ್ಯ ಸ್ಮರೋಽಪಿ ಸಹ ಭಾರ್ಯಯಾ ॥೩೨॥

---

೨೭-೩೦. ನೀವು ಈ ರೀತಿಯಾಗಿ ಪ್ರಯತ್ನಪಟ್ಟಲ್ಲಿ ಅವರಿಬ್ಬರ ಸಂಯೋಗದಿಂದ ಶಕ್ತ್ಯಾಯುಧವನ್ನು ಧರಿಸಿದವನಾಗಿಯೂ ಆರುಮುಖಗಳಿಂದಕೂಡಿದವನಾಗಿಯೂ ಹನ್ನೆರಡು ಭುಜಗಳಿಂದ ಯುಕ್ತನಾಗಿಯೂ, ದೇವತೆಗಳ ಸೇನಾಪತಿಯಾಗುವವನಾಗಿಯೂ, ಮಹಾಪರಾಕ್ರಮಿಯೂ ಗಾಂಗೆಯನೇ ಮೊದಲಾದ ಹೆಸರುಗಳಿಂದ ಪ್ರಸಿದ್ಧನೂ, ಸೇನಾನಾಯಕನೂ ಆಗುವ ಕುಮಾರನೆಂಬ ಹೆಸರುಳ್ಳ ಪುತ್ರನು ಜನಿಸುವನು. ಅವನು ಚಿಕ್ಕವನಾದರೂ, ಪ್ರಬಲನಾದ ತಾರಕಾಸುರನನ್ನು ಲೀಲಾಜಾಲವಾಗಿ ಕೊಂದು ನಿಮ್ಮೆಲ್ಲರಿಗೂ ಈಗ ಒದಗಿರುವ ವಿಪತ್ತನ್ನು ಹೋಗಲಾಡಿಸುವನು.

೩೧-೩೩. ಹೀಗೆಂದು ಬ್ರಹ್ಮನು ಹೇಳಲಾಗಿ ಬೃಹಸ್ಪತಿಯು ಅವನನ್ನು ನಮಸ್ಕರಿಸಿ ದೇವತೆಗಳೊಂದಿಗೆ ಮೇರುಪರ್ವತದ ಶಿಖರಗಳನ್ನು ಪಡೆದು ಮನ್ಮಥನನ್ನು ಸ್ಮರಿಸಿದನು. ಮನ್ಮಥನೂ ಕೂಡ ಬೃಹಸ್ಪತಿಯು ಮಾಡಿದ ಸ್ಮರಣೆಯಿಂದ ಹರ್ಷಗೊಂಡವನಾಗಿ ತನ್ನಪತ್ನಿಯಾದ ರತೀ

ರತ್ಯಾ ಸಮಂ ಸಮಾಗಮ್ಯ ನಮಸ್ಕೃತ್ಯ ಕೃತಾಂಜಲಿಃ ।
ಸಶಕ್ರಮಾಹ ತಂ ಜೀವಂ ಜಗಜ್ಜೀವೋ ದ್ವಿಜೋತ್ತಮಾಃ ॥೩೩॥

ಸ್ಮೃತೋ ಯದ್ಭವತಾ ಜೀವ ಸಂಪ್ರಾಪ್ತೋಽಹಂ ತವಾಂತಿಕಂ ।
ಬ್ರೂಹಿ ಯನ್ಮೇ ವಿಧಾತವ್ಯಂ ತಮಾಹ ಸುರ ಪೂಜಿತಃ ॥೩೪॥

ತಮಾಹ ಭಗವಾನ್ ಶಕ್ರಃ ಸಂಭಾವ್ಯ ಮಕರಧ್ವಜಂ ।
ಶಂಕರೇಣಾಂಬಿಕಾಮದ್ಯ ಸಂಯೋಜಯ ಯಥಾ ಸುಖಂ ॥೩೫॥

ತಯಾ ಸ ರಮತೇ ಯೇನ ಭಗವಾನ್ ವೃಷಭಧ್ವಜಃ ।
ತೇನ ಮಾರ್ಗೇಣ ಮಾರ್ಗಸ್ವ ಪತ್ನ್ಯಾ ರತ್ಯಾಽನಯಾ ಸಹ ॥೩೬॥

ಸೋಽಪಿ ತುಷ್ಟಃ ಮಹಾದೇವಃ ಪ್ರದಾಸ್ಯತಿ ಶುಭಾಂ ಗತಿಂ ।
ವಿಪ್ರಯುಕ್ತಸ್ತಯಾ ಪೂರ್ವಂ ಲಬ್ಧ್ವಾ ತಾಂ ಗಿರಿಜಾಮುಮಾಂ ॥

---

ದೇವಿಯೊಂದಿಗೆ ದೇವತೆಗಳ ಸನ್ನಿಧಿಯನ್ನು ಪಡೆದು ನಮಸ್ಕರಿಸಿ ಅಂಜಲಿ ಬದ್ಧನಾಗಿ ಬೃಹಸ್ಪತಿಯನ್ನು ಕುರಿತು ಮನ್ಮಥನು ಹೀಗೆಂದು ಹೇಳಿದನು

೩೪. ಪೂಜ್ಯನಾದ ಬೃಹಸ್ಪತಿಯೇ, ನಿನ್ನಸಮೀಪವನ್ನು ಪಡೆದಿರುವ ನನ್ನಿಂದ ಆಗಬೇಕಾದ ಕಾರ್ಯವನ್ನು ಆಜ್ಞಾಪಿಸುವವನಾಗು. ಎಂದು ಮನ್ಮಥನು ಕೇಳಲು,

೩೫. ಪೂಜ್ಯನಾದ ಇಂದ್ರನು ಮನ್ಮಥನನ್ನು ಕುರಿತು ಪಾರ್ವತಿಗೂ ಈಶ್ವರನಿಗೂ ಸಂಬಂಧವನ್ನು ಏರ್ಪಡಿಸುವಂತೆ ಹೇಳಿದನು.

೩೬. ಯಾವಯುಕ್ತಿಯನ್ನು ಉಪಯೋಗಿಸಿದರೆ ಈಶ್ವರನು ಪಾರ್ವತಿಯೊಂದಿಗೆ ರತಿಸುಖವನ್ನು ಅನುಭವಿಸುವನೋ ಆ ಯುಕ್ತಿಯನ್ನು ರತಿಯೊಂದಿಗೆ ಕೂಡಿರುವ ನೀನು ಮಾಡು.

೩೭. ಪಾರ್ವತಿಯ ವಿರಹದಿಂದ ಕೂಡಿದ ಈಶ್ವರನೂಕೂಡ ಅವಳನ್ನು ಪಡೆದು ಸಂತೋಷಗೊಂಡು ನಿನಗೆ ಸದ್ಗತಿಯನ್ನುಂಟು ಮಾಡುತ್ತಾನೆ.

ಏವಮುಕ್ತೋ ನಮಸ್ಕೃತ್ಯ ದೇವದೇವಂ ಶಚೀಪತಿಂ ।
ದೇವದೇವಾಶ್ರಮಂ ಗಂತುಂ ಮತಿಂ ಚಕ್ರೇ ತಯಾ ಸಹ ॥೩೮॥

ಗತ್ವಾ ತದಾಶ್ರಮೇ ಶಂಭೋಃ ಸಹ ರತ್ಯಾ ಮಹಾಬಲಃ ।
ವಸಂತೇನ ಸಹಾಯೇನ ದೇವಂ ಯೋಕ್ತುಂ ಮನಾ ಭವತ್ ॥೩೯॥

ತತಃ ಸಂಪ್ರೇಕ್ಷ್ಯ ಮದನಂ ಹಸನ್ ದೇವಸ್ತ್ರಿಯಂಬಕಃ ।
ನಯನೇನ ತೃತೀಯೇನ ಸಾವಜ್ಞಂ ತಮವೈಕ್ಷತ ॥೪೦॥

ತತೋಽಸ್ಯ ನೇತ್ರಜೋ ವಹ್ನಿಃ ಮದನಂ ಪಾರ್ಶ್ವತಃ ಸ್ಥಿತಂ ।
ಅದಹತ್ತತ್ ಕ್ಷಣಾದೇವ ಲಲಾಪ ಕರುಣಂ ರತಿಃ ॥೪೧॥

ರತ್ಯಾಃ ಪ್ರಲಾಪ ಮಾಕರ್ಣ್ಯ ದೇವದೇವೋ ವೃಷಧ್ವಜಃ ।
ಕೃಪಯಾ ಪರಯಾ ಪ್ರಾಹ ಕಾಮಪತ್ನೀಂ ನಿರೀಕ್ಷ್ಯ ಚ ॥೪೨॥

---

೩೮. ಇಂದ್ರನು ಹೀಗೆಂದು ಹೇಳಲಾಗಿ ಮನ್ಮಥನು ಇಂದ್ರನನ್ನು ನಮಸ್ಕರಿಸಿ ಪತ್ನಿಯಾದ ರತಿದೇವಿಯೊಂದಿಗೆ ಈಶ್ವರನ ತಪಸ್ಸಿನ ಆಶ್ರಮವನ್ನು ಕುರಿತು ಹೋಗಲು ಸಿದ್ಧನಾದನು.

೩೯. ಅನಂತರದಲ್ಲಿ ರತಿಯೊಂದಿಗೆ ಈಶ್ವರನ ಆಶ್ರಮವನ್ನು ಪಡೆದು ವಸಂತಋತುವಿನ ಸಹಾಯದಿಂದ ಈಶ್ವರನನ್ನು ಪಾರ್ವತಿಯೊಂದಿಗೆ ಸೇರಿಸಲು ಪ್ರಯತ್ನಪಟ್ಟನು.

೪೦. ತರುವಾಯದಲ್ಲಿ ತ್ರಿನೇತ್ರನಾದ ಈಶ್ವರನು ಮನ್ಮಥನನ್ನು ನೋಡಿ ಮಂದಹಾಸದಿಂದ ಕೂಡಿದವನಾಗಿ ತಿರಸ್ಕಾರಭಾವನೆಯನ್ನಿಟ್ಟು ತನ್ನ ಮೂರನೆಯ ಕಣ್ಣಿನಿಂದ ನೋಡಿದನು.

೪೧. ಆ ಮೇಲೆ ಈಶ್ವರನ ನೇತ್ರಾಗ್ನಿಯು ಪಕ್ಕದಲ್ಲಿ ನಿಂತಿದ್ದ ಮನ್ಮಥನನ್ನು ಸುಡಲು, ರತಿಯು ದುಃಖಿತಳಾಗಿ ಕನಿಕರವಾಗುವಂತೆ ರೋದಿಸಿದಳು.

೪೨. ಈ ರೀತಿಯಾಗಿ ರತಿಯ ಆರ್ತನಾದವನ್ನು ಕೇಳಿ ವೃಷಭಾರೂಢನಾದ ಪರಮೇಶ್ವರನು ದಯಾವಂತನಾಗಿ ಕಾಮನಹೆಂಡಿತಿಯಾದ ಆವಳನ್ನು ಕುರಿತು ಹೀಗೆಂತೆಂದನು.

ಅಮೂರ್ತೋಽಪಿ ಧ್ರುವಂ ಭದ್ರೇ ಕಾರ್ಯಂ ಸರ್ವಂ ಪತಿಸ್ತ್ವವ ।
ರತಿಕಾಲೇ ಧ್ರುವಂ ಭದ್ರೇ ಕರಿಷ್ಯತಿ ನ ಸಂಶಯಃ ॥೪೩॥

ಯದಾ ವಿಷ್ಣುಶ್ಚ ಭವಿತಾ ವಾಸುದೇವೋ ಮಹಾಯಶಾಃ ।
ಶಾಪಾದ್ಭೃಗೋಃ ಮಹಾತೇಜಾಃ ಸರ್ವಲೋಕಹಿತಾಯ ವೈ ॥

ತದಾ ತಸ್ಯ ಸುತೋ ಯಶ್ಚ ಪತಿಸ್ತೇ ಸ ಭವಿಷ್ಯತಿ ॥
ಸಾ ಪ್ರಣಮ್ಯ ತದಾ ರುದ್ರಂ ಕಾಮಪತ್ನೀ ಶುಚಿಸ್ಮಿತಾ ।
ಜಗಾಮ ಮದನಂ ಲಬ್ಧ್ವಾ ವಸಂತೇನ ಸಮಾಯುತಾ ॥೪೫॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಮದನದಾಹೋ ನಾಮ
ಏಕಾಧಿಕ ಶತತಮೋಽಧ್ಯಾಯಃ

---

೪೩. ಎಲೌ ಮಂಗಳಕರಳೇ, ನಿನ್ನ ಪತಿಯು ದೇಹವನ್ನು ಧರಿಸಿರುವವನಲ್ಲವಾದರೂ ರತಿಕ್ರೀಡೆಯ ಕಾಲದಲ್ಲಿ ಮಾತ್ರ ಕ್ರೀಡೆಗೆ ಸಂಬಂಧಿಸಿರುವಎಲ್ಲಾ ಕಾರ್ಯಗಳನ್ನೂ ಖಂಡಿತವಾಗಿಯೂ ನೆರವೇರಿಸುವನು.

೪೪. ಯಾವಾಗ ಮಹಾವಿಷ್ಣುವು ಭೃಗುಮಹರ್ಷಿಯ ಶಾಪದಿಂದ ಲೋಕಸಂರಕ್ಷಣಾರ್ಥವಾಗಿ ವಸುದೇವನ ಪುತ್ರನಾಗಿ ಅವತರಿಸುವನೋ ಆವಾಗ ಆ ವಾಸುದೇವನ ಮಗನು ನಿನ್ನ ಪತಿಯಾಗುವನು. ಹೀಗೆಂದು ಹೇಳಲು

೪೫. ರತಿಯು ಹರ್ಷಗೊಂಡು ಪರಮೇಶ್ವರನನ್ನು ನಮಸ್ಕರಿಸಿ ಮನ್ಮಥನನ್ನು ಪುನಃ ಪಡೆದು ವಸಂತನಿಂದಸಮೇತಳಾಗಿ ಹಿಂತಿರುಗಿದಳು.

ಇಲ್ಲಿಗೆ ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮದನದಾಹವೆಂಬ
ನೂರೊಂದನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ದ್ವಿಶತತಮೋಽಧ್ಯಾಯಃ

**॥ ಸೂತ ಉವಾಚ ॥**

**ತಪಸಾ ಚ ಮಹಾದೇವ್ಯಾಃ ಪಾರ್ವತ್ಯಾ ವೃಷಭಧ್ವಜಃ ।**
**ಪ್ರೀತಶ್ಚ ಭಗವಾನ್ ಶರ್ವೋ ವಚನಾದ್ಬ್ರಹ್ಮಣ ಸ್ತದಾ॥ ೧ ॥**
**ಹಿತಾಯ ಚಾಶ್ರಮಾಣಾಂ ಚ ಕ್ರೀಡಾಽರ್ಥಂ ಭಗವಾನ್ ಭವಃ ।**
**ತದಾ ಹೈಮ ವತೀಂ ದೇವೀ ಮುಪಯೇಮೇ ಯಥಾ ವಿಧಿ ॥ ೨ ॥**
**ಜಗಾಮ ಚ ಸ್ವಯಂ ಬ್ರಹ್ಮಾ ಮರೀಚಾದ್ಯೈರ್ಮಹರ್ಷಿಭಿಃ ।**
**ತಪೋವನಂ ಮಹಾದೇವ್ಯಾಃ ಪಾರ್ವತ್ಯಾಃ ಪದ್ಮಸಂಭವಃ ॥ ೩ ॥**
**ಪ್ರದಕ್ಷಿಣೀ ಕೃತ್ಯ ಚ ತಾಂ ದೇವೀಂ ಸ ಜಗತೋಽರಣೀಂ ।**
**ಕಿಮರ್ಥಂ ತಪಸಾ ಲೋಕಾನ್ ಸಂತಾಪಯಸಿ ಶೈಲಜೇ ॥ ೪ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರೆರಡನೆಯ ಅಧ್ಯಾಯವು.

೧–೨. ಸೂತನು ಹೇಳಿದನು:—ಈಶ್ವರನೂಕೂಡ ತೇಜೋವತಿಯಾದ ಪಾರ್ವತಿಯ ತಪಸ್ಸಿನಿಂದ ಪ್ರೀತನಾಗಿ ಬ್ರಹ್ಮಚರ್ಯಗಾರ್ಹಸ್ಥ್ಯ ಮುಂತಾದ ಆಶ್ರಮಗಳ ರಕ್ಷಣೆಗೋಸ್ಕರ ಹಿಮವಂತನ ಮಗಳಾದ ಪಾರ್ವತಿಯನ್ನು ಬ್ರಹ್ಮನಕೋರಿಕೆಯನ್ನು ಸಲ್ಲಿಸಲು ವಿಧಿವತ್ತಾಗಿ ವಿವಾಹ ಮಾಡಿಕೊಂಡನು.

೩. ಕಮಲಾಸನನಾದ ಬ್ರಹ್ಮನು ಮರೀಚಿ ಮುಂತಾದ ಋಷಿಗಳಿಂದ ಯುಕ್ತನಾಗಿ ಪಾರ್ವತಿಯ ತಪೋವನವನ್ನು ಪಡೆದು ಅವಳೊಡನೆ ಹೀಗೆಂದು ಹೇಳಿದನು.

೪. ಜಗತ್ತಿಗೆ ಪ್ರಧಾನ ಕಾರಣಭೂತಳಾದ ಆ ದೇವಿಯನ್ನು ಪ್ರದಕ್ಷಿಣೆಯಾಗಿಸುತ್ತಿ ಅವಳನ್ನು ಕುರಿತು, ಯಾವ ಕಾರಣದಿಂದ ನಿನ್ನ ತಪಸ್ಸಿನ ದೆಸೆಯಿಂದ ಲೋಕಗಳನ್ನೆಲ್ಲವನ್ನೂ ದಹಿಸುವವಳಾಗಿರುತ್ತೀಯೆ?

ತ್ವಯಾ ಸೃಷ್ಟಂ ಜಗತ್ಸರ್ವಂ ಮಾತಸ್ತ್ವಂ ಮಾ ವಿನಾಶಯ ।
ತ್ವಂ ಹಿ ಸಂಧಾರಯೇ ಲೋಕಾನ್ ಇಮಾನ್ ಸರ್ವಾನ್‌ಸ್ವತೇಜಸಾ॥
ಸರ್ವದೇವೇಶ್ವರಃ ಶ್ರೀಮಾನ್ ಸರ್ವಲೋಕ ಪತಿರ್ಭವಃ ।
ಯಸ್ಯ ವೈ ದೇವದೇವಸ್ಯ ವಯಂ ಕಿಂಕರವಾದಿನಃ ॥ ೬ ॥
ಸಏವಂ ಪರಮೇಶಾನಃ ಸ್ವಯಂ ಚ ವರ ಯಿಷ್ಯತಿ ।
ವರದೇ ಯೇನ ಸೃಷ್ಟಾನಿ ನ ವಿನಾ ಯಸ್ತ್ವಯಾಂಬಿಕೇ ॥ ೭ ॥
ವರ್ತತೇ ನಾತ್ರ ಸಂದೇಹ ಸ್ತ್ವವ ಭರ್ತಾ ಭವಿಷ್ಯತಿ ।
ಇತ್ಯುಕ್ತ್ವಾ ತಾಂ ನಮಸ್ಕೃತ್ಯ ಮುಹುಃ ಸಂಪ್ರೇಕ್ಷ್ಯ ಪಾರ್ವತೀಂ ॥
ಗತೇ ಪಿತಾ ಮಹೇ ದೇವೋ ಭಗವಾನ್ಪರಮೇಶ್ವರಃ ।
ಜಗಾಮಾನುಗ್ರಹಂ ಕರ್ತುಂ ದ್ವಿಜರೂಪೇಣ ಚಾಶ್ರಮಂ ॥ ೯ ॥

---

೫. ಓ ಪಾರ್ವತೀದೇವಿಯೇ ಈ ಜಗತ್ತನ್ನು ಸೃಷ್ಟಿಮಾಡಿದ ನೀನೇ ಅದರ ವಿನಾಶಕ್ಕೂ ಕಾರಣಳಾಗಬೇಡ. ಏಕೆಂದರೆ ನೀನು ನಿನ್ನ ತಪಃ ಪ್ರಭಾವದಿಂದಲೇ ಜ್ವಲಿಸುತ್ತಿರುವ ಈ ಲೋಕಗಳನ್ನು ಪುನರುಜ್ಜೀವನ ಗೊಳಿಸಲು ಸಮರ್ಥಳಾಗಿದ್ದೀಯೆ.

೬–೮. ಯಾವ ಪರಮೇಶ್ವರನು ಸಮಸ್ತದೇವತೆಗಳಿಗೂ ಮತ್ತು ಸಮಸ್ತ ಲೋಕಗಳಿಗೂ ಒಡೆಯನಾಗಿರುವನೋ ಮತ್ತು ನಾವೆಲ್ಲರೂ ಯಾವ ಪರಮೇಶ್ವರನ ದಾಸರಾಗಿರುತ್ತೇವೆಯೋ ಆ ಪರಮೇಶ್ವರನೇ ಸ್ವತಃ ನಿನ್ನೊಂದಿಗೆ ಪಾಣಿಗ್ರಹಣ ಮಾಡುತ್ತಾನೆ. ಯಾವ ಪರಮೇಶ್ವರನು ನೀನಿಲ್ಲದೆ ಸೃಷ್ಟಿಸಲಾರನೋ ಅವನು ನಿನ್ನಿಂದ ವಿಮುಕ್ತನಾಗಿ ಕ್ಷಣ ಕಾಲವೂ ಇರಲಾರನು. ಅವನು ನಿಸ್ಸಂಶಯವಾಗಿಯೂ ನಿನ್ನ ಪತಿ ಯಾಗುವನು. ಎಂದು ಹೇಳಿ ಪಾರ್ವತಿಯನ್ನು ಪುನಃ ಪುನಃ ನಮಸ್ಕರಿಸಿ ಹಿಂತಿರುಗಿದನು.

೯. ಹೀಗೆಂದು ಹೇಳಿ ಬ್ರಹ್ಮನು ಹಿಂತಿರುಗಲು ಪರಮೇಶ್ವರನು ಪಾರ್ವತಿಯನ್ನು ಅನುಗ್ರಹಿಸಲು ಬ್ರಾಹ್ಮಣರೂಪದಿಂದ ಪಾರ್ವತಿಯ ಆಶ್ರಮವನ್ನೂ ಪಡೆದನು.

ಸಾ ಚ ದೃಷ್ಟ್ವಾ ಮಹಾದೇವಂ ದ್ವಿಜರೂಪೇಣ ಸಂಸ್ಥಿತಂ ।
ಪ್ರತಿಭಾಽಽದ್ಯೈಃ ಪ್ರಭುಂ ಜ್ಞಾತ್ವಾ ನನಾಮ ವೃಷಭಧ್ವಜಂ ॥೧೦॥

ಸಂಪೂಜ್ಯ ವರದಂ ದೇವಂ ಬ್ರಾಹ್ಮಣ ಚ್ಛದ್ಮನಾಽಽಗತಂ ।
ತುಷ್ಟಾವ ಪರಮೇಶಾನಂ ಪಾರ್ವತೀ ಪರಮೇಶ್ವರಂ ॥೧೧॥

ಅನುಗೃಹ್ಯ ತದಾ ದೇವೀ ಮುವಾಚ ಪ್ರಹಸನ್ನಿವ ।
ಕುಲಧರ್ಮಾಶ್ರಯಂ ರಕ್ಷನ್ ಭೂಧರಸ್ಯಮಹಾತ್ಮನಃ ॥೧೨॥

ಕ್ರೀಡಾಽರ್ಥಂ ಚ ಸತಾಂಮಧ್ಯೇ ಸರ್ವದೇವಪತಿಃ ಭವಃ ।
ಸ್ವಯಂವರೇ ಮಹಾದೇವಿ ತವ ದಿವ್ಯಸುಶೋಭನೇ ॥೧೩॥

ಆಸ್ಥಾಯ ರೂಪಂ ಯತ್ಸೌಮ್ಯಂ ಸಮೇಷ್ಯೇಽಹಂ ಸಹ ತ್ವಯಾ ।
ಇತ್ಯುಕ್ತ್ವಾತಾಂ ಸಮಾಲೋಕ್ಯ ದೇವೋದಿವ್ಯೇನ ಚಕ್ಷುಷಾ ॥೧೪॥

---

೧೦. ಬ್ರಹ್ಮಚಾರಿಯ ವೇಷವನ್ನುಧರಿಸಿ ತನ್ನ ಮುಂಭಾಗದಲ್ಲಿ ನಿಂತಿರುವ ಪರಮೇಶ್ವರನನ್ನು ನೋಡಿ ಪಾರ್ವತಿಯು ತನ್ನಬುದ್ಧಿ ಶಕ್ತಿಯಿಂದ ಪರಮೇಶ್ವರನೆಂದು ಊಹಿಸಿ ಅವನನ್ನು ನಮಸ್ಕರಿಸಿದಳು.

೧೧. ಬ್ರಾಹ್ಮಣವೇಷದ ವ್ಯಾಜದಿಂದ ಬಂದಿರುವ, ವರಗಳನ್ನು ಕೊಡಲು ಶಕ್ತನಾಗಿರುವ, ಶಿವನನ್ನು ಪೂಜಿಸಿ ಪಾರ್ವತಿಯು ಸಂತೋಷಗೊಳಿಸಿದಳು.

೧೨. ಈ ಪ್ರಕಾರವಾಗಿ ಪೂಜೆಯನ್ನು ಮಾಡಿದ ಆ ದೇವಿಯನ್ನು ಕುರಿತು ಪರ್ವತರಾಜನ ಕುಲವನ್ನು ರಕ್ಷಣೆಮಾಡುವವನಾಗಿ ಈಶ್ವರನು ಹೇಳಿದನು.

೧೩. ಎಲೌ ಪಾರ್ವತಿಯೇ, ವಿವಾಹಕಾಲದಲ್ಲಿ ನಾನು ನನ್ನ ಸೌಮ್ಯರೂಪವನ್ನು ಧರಿಸಿ ನಿನ್ನನ್ನು ವರಿಸುವೆನು.

೧೪. ಹೀಗೆ ಹೇಳಿ ಪರಮೇಶ್ವರನು ತನ್ನ ದಿವ್ಯಚಕ್ಷುಸ್ಸಿನಿಂದ ನೋಡಿ ಅವಳ ಇಷ್ಟಾರ್ಥಗಳನ್ನು ಸಲ್ಲಿಸಿ ಹಿಂತಿರುಗಿದನು. ಪಾರ್ವತಿಯೂ ತನ್ನ ಮನೆಗೆ ಹಿಂತಿರುಗಿದಳು.

ಜಗಾಮೇಷ್ಟಂ ತದಾ ದಿವ್ಯಂ ಸ್ವಪುರಂ ಪ್ರಯಯೌ ಚ ಸಾ ।
ದೃಷ್ಟ್ವಾ ಹೃಷ್ಟಸ್ತದಾ ದೇವೀಂ ಮೇನಯಾ ತುಹಿನಾಚಲಃ ॥೧೫॥
ಆಲಿಂಗ್ಯಾಘ್ರಾಯ ಸಂಪೂಜ್ಯ ಪುತ್ರೀಂ ಸಾಕ್ಷಾತ್ತಪಸ್ವಿನೀಂ ।
ದುಹಿತು ರ್ದೇವದೇವೇನ ನ ಜಾನನ್ನಭಿ ಮಂತ್ರಿತಂ ॥೧೬॥
ಸ್ವಯಂವರಂ ತದಾ ದೇವ್ಯಾಃ ಸರ್ವಲೋಕೇಷ್ವ ಘೋಷಯತ್ ।
ಅಥ ಬ್ರಹ್ಮಾ ಚ ಭಗವಾನ್ ವಿಷ್ಣು ಸ್ಸಾಕ್ಷಾಜ್ಜನಾರ್ದನಃ ॥೧೭॥
ಶಕ್ರ ಶ್ಚ ಭಗವಾನ್ ವಹ್ನಿ ರ್ಭಾಸ್ಕರೋ ಭಗ ಏವಚ ।
ತ್ವಷ್ಟಾರ್ಯಮಾ ವಿವಸ್ವಾಂ ಶ್ಚ ಯಮೋ ವರುಣ ಏವಚ ॥೧೮॥
ವಾಯುಃ ಸೋಮಸ್ತಥೇಶಾನೋ ರುದ್ರಾಶ್ಚಮುನಯಸ್ತಥಾ । ॥
ಅಶ್ವಿನೌ ದ್ವಾದಶಾದಿತ್ಯಾ ಗಂಧರ್ವಾ ಗರುಡ ಸ್ತಥಾ ।
ಯಕ್ಷಾಃ ಸಿದ್ಧಾಃ ತಥಾ ಸಾಧ್ಯಾಃ ದೈತ್ಯಾಃ ಕಿಂಪುರುಷಾ ಸ್ತಥಾ ॥
ನಾಗಾಶ್ಚ ಪರ್ವತಾಃ ಸರ್ವೇ ಯಕ್ಷಾಃ ಸೂರ್ಯಾದಯೋ ಗ್ರಹಾಃ ।
ತ್ರಯಸ್ತ್ರಿಂಶಚ್ಚ ದೇವಾನಾಂ ತ್ರಯಶ್ಚತ್ರಿಶತಂ ತಥಾ ॥೨೦॥

---

೧೫–೧೬. ತಪಸ್ಸನ್ನು ಮಾಡಿ ಹಿಂತಿರುಗಿದ ದೇವಿಯನ್ನು ನೋಡಿ ಮೇನಾದೇವಿಯಿಂದ ಯುಕ್ತನಾದ ಹಿಮವಂತನು ಸಂತೋಷಗೊಂಡವನಾಗಿ ಆಲಿಂಗಿಸಿ ಮತ್ತು ಶಿರಸಿನಲ್ಲಿ ಆಘ್ರಾಣಮಾಡಿ, ಈಶ್ವರನ ಸಂಕೇತವನ್ನು ತಿಳಿಯದವನಾಗಿ ತನ್ನ ಮಗಳ ಸ್ವಯಂವರವನ್ನು ಸಮಸ್ತ ಲೋಕಗಳಲ್ಲಿಯೂ ಉದ್ಘೋಷಿಸಿದನು.

೧೭–೨೨. ಆನಂತರದಲ್ಲಿ ಬ್ರಹ್ಮನೂ, ವಿಷ್ಣುವೂ, ಇಂದ್ರನೂ, ಅಗ್ನಿಯೂ, ಸೂರ್ಯನೂ, ವಾಯುವೂ, ಈಶಾನಾದಿ ದಿಕ್ಪಾಲಕರೂ, ಗಂಧರ್ವರೂ, ದ್ವಾದಶಾದಿತ್ಯರೂ, ಯಕ್ಷರೂ, ಸಿದ್ಧರೂ, ಕಿಂಪುರುಷರೂ, ರಾಕ್ಷಸರೂ, ಮುವ್ವತ್ತುಮೂರು ಕೋಟಿ ದೇವತೆಗಳೂ,

ತ್ರಯಶ್ಚ ತ್ರಿ ಸಹಸ್ರಂ ಚ ತಥಾಽನ್ಯೇ ಬಹವಃ ಸುರಾಃ ।
ಜಗ್ಮುರ್ಗಿರೀಂದ್ರ ಪುತ್ರ್ಯಾಸ್ತು ಸ್ವಯಂವರ ಮನುತ್ತಮಂ ॥೨೨॥
ಅಥ ಶೈಲಸುತಾ ದೇವೀ ಹೈಮಮಾರುಹ್ಯ ಶೋಭನಂ ।
ವಿಮಾನಂ ಸರ್ವತೋ ಭದ್ರಂ ಸರ್ವರತ್ನೈರಲಂ ಕೃತಂ ॥೨೩॥
ಅಪ್ಸರೋಭಿಃ ಪ್ರನೃತ್ತಾಭಿಃ ಸರ್ವಾಭರಣ ಭೂಷಿತೈಃ ।
ಗಂಧರ್ವ ಸಿದ್ಧೈರ್ವಿವಿಧೈಃ ಕಿನ್ನರೈಶ್ಚ ಸುಶೋಭನೈಃ ॥೨೪॥
ವಂದಿಭಿಸ್ತೂಯಮಾನಾ ಚ ಸ್ಥಿತಾ ಶೈಲ ಸುತಾ ತದಾ ।
ಸಿತಾತಪತ್ರಂ ರತ್ನಾಂಶು ಮಿಶ್ರಿತಂ ಚಾವಹತ್ತಥಾ ॥೨೫॥
ಮಾಲಿನೀ ಗಿರಿ ಪುತ್ರ್ಯಾಸ್ತು ಸಂಧ್ಯಾ ಪೂರ್ಣೇಂದುಮಂಡಲಂ ।
ಚಾಮರಾಸಕ್ತ ಹಸ್ತಾಭಿಃ ದಿವ್ಯಸ್ತ್ರೀಭಿಶ್ಚ ಸಂವೃತಾ ॥೨೬॥

---

ನಾಗರೂ, ಮೂವತ್ತುಮೂರು ಸಾವಿರ ಮುಖ್ಯರಾದ ದೇವನಾಯಕರೂ, ಮತ್ತು ಇತರರೂ ಈ ಎಲ್ಲರೂ ಪಾರ್ವತಿಯಸ್ವಯಂವರಮಹೋತ್ಸವಕ್ಕೆ ಬಂದರು.

೨೩–೨೫. ಅನಂತರದಲ್ಲಿ ಪಾರ್ವತಿಯು ರತ್ನಾದಿಗಳಿಂದ ಅಲಂಕರಿಸಲ್ಪಟ್ಟ ವಿಮಾನವನ್ನು ಹತ್ತಿ ಅಲಂಕೃತರಾದ ಅಪ್ಸರಸ್ತ್ರೀಯರಿಂದ ನರ್ತನವಾಗುತ್ತಿರಲು, ಸಿದ್ಧರಿಂದಲೂ ಮತ್ತು ಕಿಂಪುರುಷರಿಂದಲೂ, ವಂದಿಗಳಿಂದಲೂ, (ವಂದಿಗಳೆಂದರೆಹೊಗಳು ಭಟರೆಂದರ್ಥವು) ಹೊಗಳಲ್ಪಡತಕ್ಕವಳಾಗಿದ್ದಳು. ಮತ್ತು ಶ್ವೇತ ಚ್ಛತ್ರಿಯ ಸೇವೆಯನ್ನೂ ಪಡೆದವಳಾಗಿದ್ದಳು.

೨೬. ಸಂಧ್ಯಾಕಾಲದ ಪ್ರಕಾಶದಿಂದ ಯುಕ್ತವಾದ ಪೂರ್ಣಚಂದ್ರಮಂಡಲದಂತೆ ಕಾಂತಿಯುತವಾದ ಮುಖವುಳ್ಳ ಪಾರ್ವತಿಯ ಮಾಲಿನಿಯೆಂಬ ಸಖಿಯಿಂದಲೂ, ಚಾಮರವನ್ನು ಹಿಡಿದುಕೊಂಡಿರತಕ್ಕ ದಿವ್ಯಸ್ತ್ರೀಯರಿಂದಲೂ, ಸುತ್ತುವರಿಯಲ್ಪಟ್ಟಳು.

ಮಾಲಾಂ ಗೃಹ್ಯ ಜಯಾ ತಸ್ಥೌ ಸುರದ್ರುಮಸಮುದ್ಭವಾಂ।
ವಿಜಯಾ ವ್ಯಜನಂ ಗೃಹ್ಯ ಸ್ಥಿತಾ ದೇವ್ಯಾಃ ಸಮೀಪಗಾ ॥೨೭॥

ಮಾಲಾಂ ಪ್ರಗೃಹ್ಯ ದೇವ್ಯಾಂ ತು ಸ್ಥಿತಾಯಾಂ ದೇವಸಂಸದಿ।
ಶಿಶುರ್ಭೂತ್ವಾ ಮಹಾದೇವಃ ಕ್ರೀಡಾಽರ್ಥಂ ವೃಷಭಧ್ವಜಃ ॥೨೮॥

ಉತ್ಸಂಗ ತಲ ಸಂಸುಪ್ತೋ ಬಭೂವ ಭಗವಾನ್ ಭವಃ।
ಅಥ ದೃಷ್ಟ್ವಾ ಶಿವಂ ದೇವ್ಯಾ ಸ್ತಸ್ಯಾ ಉತ್ಸಂಗವರ್ತಿನಂ ॥೨೯॥

ಕೋಽಯಮತ್ರೇತಿ ಸಂಮಂತ್ರ್ಯ ಚುಕ್ಷುಭು ಶ್ಚ ಸಮಾಗತಾಃ।
ವಜ್ರಮಾಹಾರಯತ್ತಸ್ಯ ಬಾಹುಮುದ್ಯಮ್ಯ ವೃತ್ರಹಾ ॥೩೦॥

---

೨೭. ಜಯಾ ಎಂಬ ಸಖಿಯು ಕಲ್ಪವೃಕ್ಷದಹೂಗಳಿಂದ ರಚಿಸಿದ ಮಾಲಿಕೆಯನ್ನು ಹಿಡಿದುಕೊಂಡು ನಿಂತಳು. ವಿಜಯಾ ಎಂಬುವಳು ಚಾಮರವನ್ನು ಹಿಡಿದುಕೊಂಡು ಪಾರ್ವತಿಯ ಸಮೀಪದಲ್ಲಿ ನಿಂತಳು.

೨೮. ಪಾರ್ವತಿಯು ದೇವಸಭೆಯಲ್ಲಿ ವರಣ ಮಾಲಿಕೆಯನ್ನು ಹಿಡಿದು ನಿಂತಿರಲು ವೃಷಭಾ ರೂಢನಾದ ಪರಮೇಶ್ವರನು ವಿನೋದ ಕ್ಕೋಸ್ಕರ ಶಿಶುರೂಪವನ್ನು ಧರಿಸಿ, ಪಾರ್ವತಿಯ ತೊಡೆಯಮೇಲೆ ಮಲಗಿದನು.

೨೯. ಅನಂತರದಲ್ಲಿ ದೇವಿಯ ತೊಡೆಯಮೇಲೆ ಮಲಗಿರತಕ್ಕ ಆ ಶಿಶುವನ್ನು ನೋಡಿ ಈ ಸಭೆಯಲ್ಲಿ ಅಕಸ್ಮಾತ್ತಾಗಿ ಕಾಣಿಸಿಕೊಂಡ ಈ ಶಿಶುವು ಯಾರೆಂದು ಉದ್ಗಾರ ತೆಗೆದವರಾಗಿ ದೇವತೆಗಳು ಕೋಪಗೊಂಡರು.

೩೦-೩೧. ಇಂದ್ರನು ತನ್ನ ತೋಳುಗಳನ್ನು ಮೇಲಕ್ಕೆತ್ತಿ ವಜ್ರಾಯುಧವನ್ನು ಶಿಶುವಿನಕಡೆಗೆ ತಿರುಗಿಸಿದನು. ಆದರೆ ವಜ್ರಾಯುಧವನ್ನು ಎತ್ತಿರತಕ್ಕ ಅವನ ಬಾಹುವು ಹಾಗೆಯೇ ನಿಂತಿತು ಮತ್ತು ಅವನೂ

ಸಬಾಹು ರುದ್ಯಮಸ್ತಸ್ಯ ತಥೈವ ಸಮುಪಸ್ಥಿತಃ ।
ಸ್ತಂಭಿತಃ ಶಿಶುರೂಪೇಣ ದೇವದೇವೇನ ಲೀಲಯಾ ॥೩೧॥

ವಜ್ರಂ ಕ್ಷೇಪ್ತುಂ ನ ಶಶಾಕ ಬಾಹುಂ ಚಾಲಯಿತುಂ ತಥಾ ।
ವಹ್ನಿಃ ಶಕ್ತಿಂ ತಥಾ ಕ್ಷೇಪ್ತುಂ ನ ಶಶಾಕ ತಥಾ ಸ್ಥಿತಃ ॥೩೨॥

ಯಮೋಽಪಿ ದಂಡಂ ಖಡ್ಗಂ ಚ ನಿರ್ಋತಿಃ ಮುನಿಪುಂಗವಾಃ ।
ವರುಣೋ ನಾಗಪಾಶಂ ಚ ಧ್ವಜಯಷ್ಟಿಂ ಸಮೀರಣಃ ॥೩೩॥

ಸೋಮೋ ಗದಾಂ ಧನೇಶಶ್ಚ ದಂಡಂ ದಂಡ ಭೃತಾಂ ವರಃ ।
ಈಶಾನಶ್ಚ ತಥಾ ಶೂಲಂ ತೀವ್ರಮುದ್ಯಮ್ಯ ಸಂಸ್ಥಿತಃ ॥೩೪॥

ರುದ್ರಾಶ್ಚ ಶೂಲಮಾದಿತ್ಯಾ ಮುಸಲಂ ವಸವ ಸ್ತಥಾ ।
ಮುದ್ಗರಂ ಸ್ತಂಭಿತಾಃ ಸರ್ವೇ ದೇವೇನಾಶು ದಿವೌಕಸಃ ॥೩೫॥

ಸ್ತಂಭಿತಃ ದೇವದೇವೇನ ತಥಾಽನ್ಯೇ ಚ ದಿವೌಕಸಃ ।
ಶಿರಃ ಪ್ರಕಂಪಯನ್ ವಿಷ್ಣು ಶ್ಚಕ್ರಮುದ್ಯಮ್ಯ ಸಂಸ್ಥಿತಃ ॥೩೬॥

---

ಶಿಶುವಾದ ಪರಮೇಶ್ವರನ ಮಹಿಮೆಯ ಲೀಲೆಯಿಂದ ಸ್ತಂಭಿತನಾಗಿ ಅಲ್ಲಿಯೇ ನಿಂತನು.

೩೨. ಆ ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಲು ಅಸಮರ್ಥನಾದನಲ್ಲದೇ ಚಲಿಸುವುದಕ್ಕೂ ಶಕ್ತನಾಗಲಿಲ್ಲ.

೩೩–೩೬. ಓ ಮುನಿಶ್ರೇಷ್ಠರೇ, ಅಗ್ನಿಯು ತನ್ನ ಶಕ್ತಿಯನ್ನು ಪ್ರಯೋಗಿಸಲು ಅಸಮರ್ಥನಾಗಿ ಹಾಗೆಯೇ ನಿಂತು ಬಿಟ್ಟನು. ಯಮನು ದಂಡವನ್ನೂ, ನಿಋುತಿಯು ಖಡ್ಗವನ್ನೂ, ವರುಣನು ನಾಗಪಾಶವನ್ನೂ, ವಾಯುವು ಧ್ವಜದಂಡವನ್ನೂ, ಚಂದ್ರನು ಗದೆಯನ್ನೂ, ಕುಬೇರನು ದಂಡವನ್ನೂ ಈಶಾನನು ತ್ರಿಶೂಲವನ್ನೂ ರುದ್ರನು ತ್ರಿಶೂಲವನ್ನೂ, ದ್ವಾದಶಾದಿತ್ಯರು ವನಕೆಯನ್ನೂ, ವಸುಗಳು ಮುದ್ಗರವನ್ನೂ, ಮೇಲಕ್ಕೆತ್ತಿದರೂ ಪರಮೇಶ್ವರನ ಮಾಯೆಯಿಂದ ಹಾಗೆಯೇ ಸ್ತಂಭಿತರಾಗಿ ನಿಂತರು ! ಬೇರೆದೇವತೆಗಳೂ ತಮ್ಮ ತಮ್ಮ ಖಡ್ಗಗಳನ್ನು ಮೇಲಕ್ಕೆತ್ತಿ

ತಸ್ಯಾಪಿ ಶಿರಸೋ ಬಾಲಃ ಸ್ಥಿರತ್ವಂ ಪ್ರಚಕಾರ ಹ।
ಚಕ್ರಂ ಕ್ಷೇಪ್ತುಂ ನ ಶಶಾಕ ಬಾಹೂಂಶ್ಚಾಲಯಿತುಂ ನ ಚ ॥೩೭॥
ಪೂಷಾ ದಂತಾನ್ ದಂಶನ್ ದಂತ್ಯೈ ರ್ಬಾಲ ಮ್ವೈಕ್ಷತ ಮೋಹಿತಃ।
ತಸ್ಯಾಪಿ ದಶನಾಃ ಪೇತು ರ್ದೃಷ್ಟಮಾತ್ರಸ್ಯ ಶಂಭುನಾ ॥೩೮॥
ಅಥ ತೇಷು ಸ್ಥಿತೇಷ್ವೇವ ಮನ್ಯು ಮತ್ಸು ಸುರೇಷ್ವಪಿ ॥೩೯॥
ಬ್ರಹ್ಮಾ ಪರಮ ಸಂವಿಗ್ನೋ ಧ್ಯಾನಮಾಸ್ಥಾಯ ಶಂಕರಂ।
ಬುಬುಧೇ ದೇವಮೀಶಾನಂ ಉಮೋತ್ಸಂಗೇ ತಮಾಸ್ಥಿತಂ ॥೪೦॥
ಸಬುದ್ಧ್ವಾ ದೇವಮೀಶಾನಂ ಶೀಘ್ರಮುತ್ಥಾಯ ವಿಸ್ಮಿತಃ।
ವವಂದೇ ಚರಣೌ ಶಂಭೋ ರಸ್ತುವ ಚ್ಚ ಪಿತಾಮಹಃ ॥೪೧॥

---

ದವರಾಗಿ ಹಾಗೆಯೇ ನಿಂತರು! ವಿಷ್ಣುವು ತಲೆಯನ್ನು ಅಲ್ಲಾಡಿಸುತ್ತಾ ಚಕ್ರವನ್ನು ಕೈಯಲ್ಲಿ ಹಿಡಿದು ನಿಂತಿರಲು, ಅವನ ತಲೆಯನ್ನೂ ಅಲ್ಲಾಡಿಸದಂತೆ ಮಾಡಿದನು! ಹೀಗೆ ಸ್ತಂಭಿತನಾದ ವಿಷ್ಣುವು ಚಕ್ರವನ್ನೂ ಪ್ರಯೋಗಿಸಲೂ ತೋಳನ್ನು ಅಲ್ಲಾಡಿಸುವುದಕ್ಕೂ ಆಗಲಿಲ್ಲ.

೩೮. ಸೂರ್ಯನು ಹಲ್ಲುಗಳನ್ನು ಕಡಿಯುತ್ತಾ ಕೋಪದಿಂದಮುಗ್ಧನಾಗಿ ಶಿಶುವನ್ನು ನೋಡಲು, ಶಿಶುರೂಪಿಯಾದ ಪರಮೇಶ್ವರನದೃಷ್ಟಿಮಾತ್ರದಿಂದಲೇ ಅವನ ಹಲ್ಲುಗಳೆಲ್ಲವೂ ಕೆಳಕ್ಕೆ ಉದುರಿದವು. ಈ ರೀತಿಯಾಗಿ ಬಲವೂ, ಪರಾಕ್ರಮವೂ ಮತ್ತು ಯೋಗಶಕ್ತಿಯೂ ಇವೆಲ್ಲವನ್ನೂ ಕೂಡ ಭಗವಂತನು ಸ್ತಂಭಿತವಾಗುವಂತೆ ಮಾಡಿದನು.

೩೯–೪೦. ಈ ರೀತಿ ದೇವತೆಗಳೆಲ್ಲರೂ ಕೋಪಗೊಂಡರೂ ಅಸಮರ್ಥರಾಗಿರಲು, ಬ್ರಹ್ಮನು ಆಶ್ಚರ್ಯಗೊಂಡವನಾಗಿ ಸ್ವಾಮಿಯಾದ ರುದ್ರನನ್ನು ಧ್ಯಾನಮಾಡಿ ಪಾರ್ವತಿಯ ತೊಡೆಯಮೇಲೆ ಮಲಗಿರುವ ಶಿಶುವನ್ನು ನೋಡಿ ಈಶ್ವರನೆಂಬುದನ್ನು ಮನಗಂಡನು.

೪೧. ಹೀಗೆ ಶಿಶುವನ್ನು ಪರಮೇಶ್ವರನೆಂದು ತಿಳಿದ ಬ್ರಹ್ಮನು

ಪುರಾಣೈಃ ಸಾಮ ಸಂಗೀತೈಃ ಪುಣ್ಯಾಖ್ಯೈರ್ಗುಹ್ಯ ನಾಮಭಿಃ ।
ಸೃಷ್ಟ್ವಾ ತ್ವಂ ಸರ್ವಲೋಕಾನಾಂ ಪ್ರಕೃತೇಶ್ಚ ಪ್ರವರ್ತಕಃ ॥೪೨॥
ಬುದ್ಧಿಸ್ತ್ವಂ ಸರ್ವಲೋಕಾನಾಂ ಅಹಂಕಾರಸ್ತ್ವಮೀಶ್ವರಃ ।
ಭೂತಾನಾ ಮಿಂದ್ರಿಯಾಣಾಂ ಚ ತ್ವಮೇವೇಶ ಪ್ರವರ್ತಕಃ ॥೪೩॥
ತವಾಹಂ ದಕ್ಷಿಣಾತ್ ಹಸ್ತಾತ್ ಸೃಷ್ಟಃ ಪೂರ್ವಂ ಪುರಾತನಃ ।
ವಾಮಸ್ತಾ ನ್ಮಹಾಬಾಹೋ ದೇವೋ ನಾರಾಯಣಃ ಪ್ರಭುಃ ॥೪೪॥
ಇಯಂ ಚ ಪ್ರಕೃತಿರ್ದೇವೀ ಸದಾ ತೇ ಸೃಷ್ಟಿಕಾರಣಾ (ಣ) ।
ಪತ್ನೀರೂಪಂ ಸಮಾಸ್ಥಾಯ ಜಗತ್ಕಾರಣ ಮಾಗತಾ ॥೪೫॥
ನಮಸ್ತುಭ್ಯಂ ಮಹಾದೇವ ಮಹಾದೇವ್ಯೈ ನಮೋ ನಮಃ ।
ಪ್ರಸಾದಾತ್ತವ ದೇವೇಶ ನಿಯೋಗಾಚ್ಚಮಯಾ ಪ್ರಜಾಃ ॥೪೬॥

---

ಜಾಗ್ರತೆಯಾಗಿ ಮೇಲಕ್ಕೆದ್ದು ಈಶ್ವರನನ್ನು ನಮಸ್ಕರಿಸಿ ಮುಂದೆ ಹೇಳುವ ರೀತಿಯಲ್ಲಿ ಸಾಮಗಾನದಿಂದ ಸ್ತೋತ್ರಮಾಡಿದನು.

೪೨–೪೫. ಓ ಪರಮೇಶ್ವರನೇ, ನೀನು ಸಮಸ್ತಲೋಕಗಳನ್ನೂ ಸೃಷ್ಟಿಮಾಡತಕ್ಕವನು. ನಿನ್ನ ಅಧೀನದಲ್ಲಿರುವ ಮಾಯೆಯನ್ನು ಪ್ರಪಂಚದಸ್ಥಿತಿಗೋಸ್ಕರ ಪ್ರವರ್ತಿಸುವಂತೆ ಮಾಡತಕ್ಕವನೂ, ಜ್ಞಾನ ಸ್ವರೂಪನೂ ಆಗಿ, ಅಹಂಕಾರ ತತ್ವಸ್ವರೂಪನಾಗಿಯೂ ಮತ್ತು ಸಕಲ ಲೋಕಗಳಿಗೆ ಒಡೆಯನಾಗಿಯೂ ಇರುತ್ತೀಯೆ ಸಮಸ್ತಜೀವಗಳಿಗೂ ಮತ್ತು ಇಂದ್ರಿಯಗಳಿಗೂ ನೀನೇ ಪ್ರವೃತ್ತಿಯನ್ನುಂಟುಮಾಡುವವನೂ, ಆಗಿರುತ್ತೀಯೆ. ಹಿಂದೆ ನಿನ್ನ ಬಲಗಡೆಯ ಕೈಯಿಂದ ನಾನೂ ಎಡ ಕೈಯಿಂದ ಮಹಾವಿಷ್ಣುವಾದ ಶ್ರೀಮನ್ನಾರಾಯಣನೂ ಸೃಷ್ಟಿಸಲ್ಪಟ್ಟೆವು. ಜಗತ್ತುಗಳಿಗೆಲ್ಲಕ್ಕೂ ಕಾರಣಭೂತಳಾದ ಮತ್ತು ಮಾಯಾರೂಪಿಯಾದ ಈ ದೇವಿಯೇ ನಿನ್ನ ಪತ್ನಿಯಾಗಿದ್ದು ಜಗತ್ತಿಗೆಲ್ಲಕ್ಕೂ ಕಾರಣಳಾಗಿರುತ್ತಾಳೆ.

೪೬–೫೭. ದೇವದೇವೋತ್ತಮನಾದ ಪರಮೇಶ್ವರನೇ, ನಿನ್ನನ್ನೂ ಮತ್ತು ಮಹಾದೇವಿಯಾದ ಪಾರ್ವತಿಯನ್ನೂ ನಮಸ್ಕರಿಸುತ್ತೇವೆ. ನಿನ್ನ ಅನುಗ್ರಹದಿಂದಲೂ, ಮತ್ತು ಆಜ್ಞೆಯಿಂದಲೂ ದೇವತೆಗಳೇ ಮೊದ

ದೇವಾದ್ಯಾಸ್ತು ಇಮಾಃ ಸೃಷ್ಟಾಃ ಮೂಢಾಸ್ತ್ವದ್ಯೋಗ ಮೋಹಿತಾಃ
ಕುರು ಪ್ರಸಾದ ಮೇತೇಷಾಂ ಯಥಾ ಪೂರ್ವಂ ಭವಂತ್ವಿಮೇ ॥೪೭॥

॥ ಸೂತ ಉವಾಚ ॥

ವಿಜ್ಞಾಪ್ಯೈವಂ ತದಾ ಬ್ರಹ್ಮಾ ದೇವದೇವಂ ಮಹೇಶ್ವರಂ ।
ಸಂಸ್ತಂಭಿತಾನ್ ತದಾ ತೇನ ಭಗವಾನಾಹ ಪದ್ಮಜಃ ॥೪೮॥

ಮೂಢಾಃ ಸ್ಥ ದೇವತಾಃ ಸರ್ವಾಃ ನೈವ ಬುಧ್ಯತ ಶಂಕರಂ ।
ದೇವದೇವ ಮಿಹಾಯಾಂತಂ ಸರ್ವದೇವ ನಮಸ್ಕೃತಂ ॥೪೯॥

ಗಚ್ಛಧ್ವಂ ಶರಣಂ ಶೀಘ್ರಂ ದೇವಾಃ ಶುಕ ಪುರೋಗಮಾಃ ।
ಸನಾರಾಯಣಕಾಃ ಸರ್ವೇ ಮುನಿಭಿಃ ಶಂಕರಂ ಪ್ರಭುಂ ॥೫೦॥

ಸಾರ್ಧಂ ಮಯ್ಯೈವ ದೇವೇಶಂ ಪರಮಾತ್ಮಾನಮೀಶ್ವರಂ ।
ಅನಯಾ ಹೈಮವತ್ಯಾ ಚ ಪ್ರಕೃತ್ಯಾ ಸಹ ಸತ್ತಮಂ ॥೫೧॥

---

ಲಾದ ಸಮಸ್ತಪ್ರಜೆಗಳನ್ನೂ ಸೃಷ್ಟಿಸಿರುವೆನು. ಈ ಪ್ರಜೆಗಳಾದರೋ ನಿನ್ನ ಯೋಗಮಾಯೆಯಿಂದ ಆವರಿಸಲ್ಪಟ್ಟವರಾಗಿ ನಿನ್ನ ಪರಮಾರ್ಥ ಸ್ವರೂಪವನ್ನು ತಿಳಿಯದವರಾಗಿದ್ದಾರೆ. ಆದ್ದರಿಂದ ಇವರುಗಳನ್ನು ಪೂರ್ವಾವಸ್ಥೆಗೆ ತಂದು ಅನುಗ್ರಹಿಸು.

೪೮. ಸೂತನು ಹೇಳಿದನು:–ಮೇಲೆ ಹೇಳಿದ ಪ್ರಕಾರವಾಗಿ ಬ್ರಹ್ಮನು ದೇವದೇವನಾದ ಪರಮೇಶ್ವರನನ್ನು ಪ್ರಾರ್ಥನೆಮಾಡಿ ಪರಮೇಶ್ವರನಿಂದ ಸ್ತಂಭಿತರಾಗಿ ನಿಂತಿರುವ ಆ ದೇವತೆಗಳನ್ನು ಕುರಿತು ಹೀಗೆಂದನು.

೪೯–೫೧. ಎಲೈ ದೇವತೆಗಳಿರಾ, ಸಕಲದೇವರಿಂದಲೂ ನಮಸ್ಕರಿಸಲ್ಪಡತಕ್ಕ, ನಮ್ಮ ಮುಂಭಾಗದಲ್ಲಿ ಬರುತ್ತಿರುವ, ದೇವದೇವನಾದ ಪರಮೇಶ್ವರನನ್ನು ತಿಳಿಯದೇ ಇರುವ ನೀವು ಮೂಢರಾಗಿದೀರಿ ಆದ್ದರಿಂದ ನನ್ನಿಂದಕೂಡಿದವರಾಗಿ ಶುಕಮಹರ್ಷಿಯನ್ನು ಅಗ್ರೇಸರನನ್ನಾಗಿ ಮಾಡಿ ವಿಷ್ಣುವಿನೊಡಗೂಡಿರುವ ನೀವು ಮಾಯಾಸ್ವರೂಪಳಾದ ಪಾರ್ವತಿಯಿಂದ ಯುಕ್ತನಾದ ಆ ಪರಮೇಶ್ವರನ ಸಮೀಪವನ್ನು ಜಾಗ್ರತೆಯಾಗಿ ಪಡೆಯಿರಿ.

ತತ್ರ ತೇ ಸ್ತಂಭಿತಾಸ್ತೇನ ತಥೈವ ಸುರಸತ್ತಮಾಃ ।
ಪ್ರಣೇಮು ರ್ಮನಸಾ ಸರ್ವೇ ಸನಾರಾಯಣಕಾಃ ಪ್ರಭುಂ ॥೫೨॥
ಅಥ ತೇಷಾಂ ಪ್ರಸನ್ನೋಽಭೂ ದ್ದೇವದೇವಸ್ತ್ರಿಯಂಬಕಃ ।
ಯಥಾ ಪೂರ್ವಂ ಚಕಾರಾಶು ವಚನಾದ್ಬ್ರಹ್ಮಣಃ ಪ್ರಭುಃ ॥೫೩॥
ತತ ಏವಂ ಪ್ರಸನ್ನೇ ತು ಸರ್ವದೇವನಿವಾರಣಂ ।
ವಪು ಶ್ಚಕಾರ ದೇವೇಶೋ ತ್ರ್ಯಕ್ಷಂ (ದಿವ್ಯಂ) ಪರಮ ಮದ್ಭುತಂ ॥
ತೇಜಸಾ ತಸ್ಯ ದೇವಾಸ್ತೇ ಸೇಂದ್ರ ಚಂದ್ರದಿವಾಕರಾಃ ।
ಸಬ್ರಹ್ಮಕಾಃ ಸಸಾಧ್ಯಾಶ್ಚ ಸನಾರಾಯಣಕಾಃ ಸ್ತಥಾ ॥೫೫॥
ಸಯಮಾಶ್ಚ ಸರುದ್ರಾಶ್ಚ ಚಕ್ಷುರಪ್ರಾರ್ಥಯನ್ ವಿಭುಂ ।
ತೇಭ್ಯಶ್ಚ ಪರಮಂ ಚಕ್ಷುಃ ಸರ್ವದೃಷ್ಟೌ ಚ ಶಕ್ತಿಮತ್ ॥೫೬॥

---

೫೨. ಹೀಗೆಂದು ಹೇಳಿದ ಬ್ರಹ್ಮನ ಮಾತಿಗನುಸಾರವಾಗಿ ವಿಷ್ಣುವಿನಿಂದ ಯುಕ್ತರಾದ ಆ ದೇವತೆಗಳು ಮನಸ್ಸಿನಲ್ಲಿಯೂ ಪ್ರಭುವಾದ ಈಶ್ವರನನ್ನು ನಮಸ್ಕರಿಸಿದರು.

೫೩. ಅನಂತರದಲ್ಲಿ ತ್ರಿನೇತ್ರನಾದ ಆ ಪ್ರಭುವು ಆ ದೇವತೆಗಳ ನಮಸ್ಕಾರಗಳಿಂದ ಸಂತುಷ್ಟನಾಗಿ ಬ್ರಹ್ಮನ ಕೋರಿಕೆಗನುಸಾರವಾಗಿ ಆ ದೇವತೆಗಳಿಗೆ ಹಿಂದಿನಂತೆಯೇ ಶಕ್ತಿಗಳನ್ನು ದಯಪಾಲಿಸಿದನು.

೫೪. ಈ ಪ್ರಕಾರವಾಗಿ ಸಂತೋಷಗೊಂಡ ಆ ಶಿವನು ತನ್ನ ಶಿಶುಸ್ವರೂಪವನ್ನು ಮರೆಮಾಚಿ, ದೇವತೆಗಳಿಗೂ ನೋಡಲಸಾಧ್ಯವಾದ ತ್ರಿನೇತ್ರನ ರೂಪವನ್ನು ಧರಿಸಿದವನಾದನು.

೫೫-೫೬. ಆ ಪರಮೇಶ್ವರನ ತೇಜಸ್ಸಿನಿಂದ ಇಂದ್ರನೇನು ಚಂದ್ರನೇನು ಸೂರ್ಯನೇನು ಇವರೇ ಮೊದಲಾದ ದೇವತೆಗಳ ಕಣ್ಣುಗಳು ತೇಜಸ್ಸಿಲ್ಲದವುಗಳಾಗಿ, ಪರಮೇಶ್ವರನನ್ನು ನೋಡಲಶಕ್ತರಾಗಿ, ಶಕ್ತಿಯುಳ್ಳ ಕಣ್ಣನ್ನು ದಯಪಾಲಿಸೆಂದು ಈಶ್ವರನನ್ನು ಪ್ರಾರ್ಥಿಸಲು. ಅವರೆಲ್ಲರಿಗೂ ತೇಜೋಯುಕ್ತವಾದ, ಎಲ್ಲವನ್ನೂ ನೋಡಬಲ್ಲ ಕಣ್ಣುಗಳನ್ನು ಕೊಟ್ಟನು. ಮತ್ತು ಪಾರ್ವತಿಗೂ ಹಿಮವಂತನಿಗೂ ಕಣ್ಣನ್ನು ಕೊಟ್ಟನು.

ದದಾವಾಂಬಾಪತಿಃ ಶರ್ವೋಭವಾನ್ಯಾಶ್ಚ (ಶ್ಚಾ) ಚಲಸ್ಯ ಚ ।
ಲಬ್ಧ್ವಾ ಚಕ್ಷುಸ್ತದಾ ದೇವಾ ಇಂದ್ರ ವಿಷ್ಣು ಪುರೋಗಮಾಃ ॥೫೭॥
ಸಬ್ರಹ್ಮಕಾಃ ಸಶಕ್ರಾಶ್ಚ ತಮುಪಶ್ಯನ್ ಮಹೇಶ್ವರಂ ।
ಬ್ರಹ್ಮಾದ್ಯಾ ನೇಮಿರೇ ತೂರ್ಣಂ ಭವಾನೀ ಚ ಗಿರೀಶ್ವರಃ ॥೫೮॥
ಮನಯಶ್ಚ ಮಹಾದೇವಂ ಗಣೇಶಾಃ ಶಿವಸಂಮತಾಃ ।
ಸಸರ್ಜುಃ ಪುಷ್ಪ ವೃಷ್ಟಿಂ ಚ ಖೇಚರಾಃ ಸಿದ್ಧಚಾರಣಾಃ ॥೫೯॥
ದೇವದುಂದುಭಯೋ ನೇದುಃ ತುಷ್ಟುವುಃ ಮುನಯಃ ಪ್ರಭುಂ ।
ಜಗು ರ್ಗಂಧರ್ವಮುಖ್ಯಾಶ್ಚ ನನೃತು ಶ್ಚಾಪ್ಸರೋಗಣಾಃ ॥೬೦॥
ಮುಮುಹು ರ್ಗಣಪಾಃ ಸರ್ವೇ ಮುಮೋದಾಂಬಾ ಚ ಪಾರ್ವತೀ ।
ತಸ್ಯ ದೇವೀ ತದಾ ಹೃಷ್ಟಾ ಸಮಕ್ಷಂ ತ್ರಿದಿ ವೌಕಸಾಂ ॥೬೧॥
ಪಾದಯೋಃ ಸ್ಥಾಪಯಾಮಾಸ ಮಾಲಾಂ ದಿವ್ಯಾಂ ಸುಗಂಧಿನೀಂ ।
ಸಾಧು ಸಾಧ್ವಿತಿ ಸಂಪ್ರೋಚ್ಯ ತಯಾ ತತ್ರೈವ ಚಾರ್ಚಿತಂ ॥೬೨॥

---

೫೭–೫೮. ಇಂದ್ರ ಮತ್ತು ವಿಷ್ಣುವೇ ಅಗ್ರೇಸರರಾಗಿಉಳ್ಳ ಮತ್ತು ಬ್ರಹ್ಮನಿಂದ ಯುಕ್ತರಾದ ದೇವತೆಗಳು ಜಾಗ್ರತೆಯಾಗಿ ಈಶ್ವರ ನನ್ನು ನಮಸ್ಕರಿಸಿದರು. ಪಾರ್ವತಿಯೂ ನಮಸ್ಕಾರಮಾಡಿದಳು.

೫೯–೬೨. ಶಿವನಿಂದ ಅನುಗ್ರಹಿಸಲ್ಪಟ್ಟ ಮುನಿಗಳೂ ಮತ್ತು ಗಣಗಳೂ ಪುಷ್ಪವೃಷ್ಟಿಗಳನ್ನು ಸುರಿಸಿದರು. ದೇವದುದುಂಭಿಗಳು ಮೊಳ ಗಿದುವು. ಗಂಧರ್ವಪ್ರಮುಖರು ಗಾನಮಾಡಿದರು. ಅಪ್ಸರಸ್ತ್ರೀಯರು ನರ್ತನಮಾಡಿದರು. ಪ್ರಮಥಗಣಗಳೆಲ್ಲವೂ ಮೋಹಗೊಂಡವು. ಪಾರ್ವ ತಿಯೂ ಸಂತೋಷಗೊಂಡಳು. ದೇವತೆಗಳು ನೋಡುತ್ತಿರಲಾಗಿ ಪಾರ್ವತಿಯು ಸುಗಂಧಯುಕ್ತವಾದ ವರಣ ಮಾಲಿಕೆಯನ್ನು ಶಿವನಪಾದ ಗಳಲ್ಲಿ ಅರ್ಪಿಸಿದಳು, ಮತ್ತು ಅವನನ್ನು ಸ್ತುತಿಸಿ ಯಥಾವಿಧಿಯಾಗಿ ಪೂಜಿಸಿದಳು.

**ಸಹ ದೇವ್ಯಾ ನಮಶ್ಚಕ್ರುಃ ಶಿರೋಭಿರ್ಭೂತಲಾಶ್ರಿತೈಃ ।**
**ಸರ್ವೇ ಸ ಬ್ರಹ್ಮಕಾ ದೇವಾಃ ಸಯಕ್ಷೋರಗ ರಾಕ್ಷಸಾಃ ॥೬೩॥**

**ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಉಮಾಸ್ವಯಂವರೋ ನಾಮ ದ್ವಿಶತತಮೋಽಧ್ಯಾಯಃ**

---

೬೩. ಬ್ರಹ್ಮನೂ, ಯಕ್ಷರೂ, ಕಿನ್ನರರೂ, ನಾಗರೂ ಮತ್ತು ರಾಕ್ಷಸರೂ, ಇನ್ನಿತರ ದೇವತೆಗಳೂ ಪಾರ್ವತಿಯೊಡನೆ ಕೂಡಿರುವ ಶಿವನನ್ನು ಕುರಿತು ತಲೆಬಾಗಿಸಿ ನಮಸ್ಕಾರವನ್ನು ಮಾಡಿದರು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಉಮಾಸ್ವಯಂವರವೆಂಬ ನೂರೆರಡನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ತ್ರ್ಯಧಿಕ ಶತತಮೋಽಧ್ಯಾಯಃ

॥ ಸೂತ ಉವಾಚ ॥

**ಅಥ ಬ್ರಹ್ಮಾ ಮಹಾದೇವ ಮಭಿವಂದ್ಯ ಕೃತಾಂಜಲಿಃ ।**
**ಉದ್ವಾಹಃ ಕ್ರಿಯತಾಂ ದೇವ ಇತ್ಯುವಾಚ ಮಹೇಶ್ವರಂ ॥ ೧ ॥**

**ತಸ್ಯ ತದ್ವಚನಂ ಶ್ರುತ್ವಾ ಬ್ರಹ್ಮಣಃ ಪರಮೇಷ್ಠಿನಃ ।**
**ಯಥೇಷ್ಟಮಿತಿ ಲೋಕೇಶಂ ಪ್ರಾಹ ಭೂತಪತಿಃ ಪ್ರಭುಃ ॥ ೨ ॥**

**ಉದ್ವಾಹಾರ್ಥಂ ಮಹೇಶಸ್ಯ ತತ್ಕ್ಷಣಾದೇವ ಸುವ್ರತಾಃ ।**
**ಬ್ರಹ್ಮಣಾ ಕಲ್ಪಿತಂ ದಿವ್ಯಂ ಪುರಂ ರತ್ನಮಯಂ ಶುಭಂ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರು ಮೂರನೆಯ ಅಧ್ಯಾಯವು

೧. ಸೂತಮಹರ್ಷಿಯು ಹೇಳಿದನು:—ಅನಂತರದಲ್ಲಿ ಬ್ರಹ್ಮನು ಶಿವನನ್ನು ನಮಸ್ಕರಿಸಿ ಪಾರ್ವತಿಯ ಪಾಣಿಗ್ರಹಣವನ್ನು ಮಾಡಲು ಪ್ರಾರ್ಥಿಸಿ ಹೇಳಿದನು.

೨. ಹೀಗೆ ಪ್ರಾರ್ಥಿಸಿದ ಆ ಬ್ರಹ್ಮನ ಮಾತುಗಳನ್ನು ಪರಮೇಶ್ವರನು ಕೇಳಿ,ಬ್ರಹ್ಮನನ್ನು ಕುರಿತು,ನಿನ್ನ ಇಷ್ಟದಂತೆಯೇ ಆಗಲಿ. ಎಂದು ಹೇಳಿ, ಅಂಗೀಕರಿಸಿದನು.

೩. ಎಲೈ ಶೌನಕ ಮಹರ್ಷಿಗಳೇ, ಕೇಳುವವರಾಗಿರಿ. ಆಕ್ಷಣದಲ್ಲಿಯೇ ಪರಮೇಶ್ವರನ ವಿವಾಹಕ್ಕೋಸ್ಕರ ಬ್ರಹ್ಮನು ರತ್ನಖಚಿತವಾದ ದಿವ್ಯ ಮಂಗಳಕರವಾದ ಪಟ್ಟಣವನ್ನು ಸೃಷ್ಟಿಮಾಡಿದನು.

ಅಥಾದಿತಿರ್ದಿತಿಃ ಸಾಕ್ಷಾತ್ ದನುಃ ಕದ್ರುಃ ಸುಕಾಲಿಕಾ ।
ಪುಲೋಮಾ ಸುರಸಾ ಚೈವ ಸಿಂಹಿಕಾ ವಿನತಾ ತಥಾ ॥ ೪ ॥

ಸಿದ್ಧಿ ರ್ಮಾಯಾ ಕ್ರಿಯಾ ದುರ್ಗಾ ದೇವೀ ಸಾಕ್ಷಾತ್ಸುಧಾ ಸ್ವಧಾ ।
ಸಾವಿತ್ರೀ ವೇದಮಾತಾ ಚ ರಜನೀ ದಕ್ಷಿಣಾ ದ್ಯುತಿಃ ॥ ೫ ॥

ಸ್ವಾಹಾ ಸ್ವಧಾ ಮತಿ ರ್ವೃದ್ಧಿಃ ಋದ್ಧಿ ರ್ಬುದ್ಧಿಃ ಸರಸ್ವತೀ ।
ರಾಕಾ ಕುಹೂಃ ಸಿನೀವಾಲೀ ದೇವೀ ಅನುಮತೀ ತಥಾ ॥ ೬ ॥

ಧರಣೀ ಧಾರಣೀ ಚೇಲಾ ಶಚೀ ನಾರಾಯಣೀ ತಥಾ ।
ಏತಾಶ್ಚಾನ್ಯಾಶ್ಚ ದೇವಾನಾಂ ಮಾತರಃ ಪತ್ನಯ ಸ್ತಥಾ ॥ ೭ ॥

ಉದ್ವಾಹಃ ಶಂಕರಸ್ಯೇತಿ ಜಗ್ಮುಃ ಸರ್ವಾ ಮುದಾಽನ್ವಿತಾಃ ।
ಉರಗಾ ಗರುಡಾ ಯಕ್ಷಾ ಗಂಧರ್ವಾಃ ಕಿನ್ನರಾಃ ಗಣಾಃ ॥ ೮ ॥

---

೪-೭. ಅನಂತರದಲ್ಲಿ ಆದಿತಿಯೂ, ದಿತಿಯೂ, ಕದ್ರುವೂ, ದನುವೂ, ಪುಲೋಮೆಯೂ, ಸುರಸೆಯೂ, ಸಿಂಹಿಕೆಯೂ, ವಿನತೆಯೂ, ಸಿದ್ಧಿಯೂ, ಮಾಯೆಯೂ, ದುರ್ಗಾದೇವಿಯೂ, ಸುಧಾದೇವಿಯೂ, ಸಾವಿತ್ರಿದೇವಿಯೂ, ಗಾಯಿತ್ರಿಯೂ, ರಜನಿಯೂ, ಸ್ವಾಹಾ ದೇವಿಯೂ, ಸ್ವಧಾದೇವಿಯೂ, ನಿಋುತಿದೇವಿಯೂ, ಸರಸ್ವತಿಯೂ, ರಾಕಾದೇವಿಯೂ, ಕುಹೂದೇವಿಯೂ, ಧರಣಿಯೂ, ಧಾರಣಿಯೂ, ಲಕ್ಷ್ಮಿಯೂ. ದೇವಮಾತೆಯರೂ, ಮತ್ತು ದೇವಪತ್ನಿಯರೂ, ಇವರೇ ಮೊದಲಾದ ಸ್ತ್ರೀಯರು ಪರಮೇಶ್ವರನ ವಿವಾಹಕ್ಕೋಸ್ಕರ ಸಂತೋಷದಿಂದ ತೆರಳಿದರು.

೮-೧೨. ಇದಲ್ಲದೇ ಸರ್ಪಗಳೂ, ಗರುಡರೂ, ಯಕ್ಷರೂ, ಗಂಧರ್ವರೂ, ಕಿನ್ನರರೂ, ಸಾಗರಾಭಿಮಾನಿ ದೇವತೆಗಳೂ, ನದಿಗಳೂ, ಪರ್ವತಗಳೂ, ಮೇಘಗಳೂ, ಮಾಸಗಳೂ, ಸಂವತ್ಸರಗಳೂ, ವೇದ ಗಳೂ, ಮಂತ್ರಗಳೂ, ಸ್ತೋಮಗಳೂ, ಧರ್ಮಗಳೂ, ಹುಂಕಾರವೂ, ಓಂಕಾರವೂ, ಇವೇ ಮುಂತಾದುವುಗಳ ಅಭಿಮಾನಿದೇವತೆಗಳೂ, ಸಾವಿರದ್ವಾರಪಾಲಕರೂ, ಕೋಟಿಸಂಖ್ಯಾತರಾದ ಅಪ್ಸರಸ್ತ್ರೀಯರೂ,

ಸಾಗರಾ ಗಿರಯೋ ಮೇಘಾಃ ಮಾಸಾಃ ಸಂವತ್ಸರಾ ಸ್ತಥಾ ।
ವೇದಾ ಮಂತ್ರಾ ಸ್ತಥಾ಼ಯಜ್ಞಾಃ ಸೋಮಾ ಧರ್ಮಾಶ್ಚ ಸರ್ವಶಃ॥
ಹುಂಕಾರಃ ಪ್ರಣವ ಶ್ಚೈವ ಪ್ರತಿಹಾರಾಃ ಸಹಸ್ರಶಃ ।
ಕೋಟಿ ರಪ್ಸರಸೋ ದಿವ್ಯಾ ಸ್ತಾಸಾಂ ಚ ಪರಿಚಾರಿಕಾಃ ॥೧೦॥
ಯಾಶ್ಚ ಸರ್ವೇಷು ದ್ವೀಪೇಷು ದೇವಲೋಕೇಷು ನಿಮ್ನಗಾಃ ।
ತಾಶ್ಚ ಸ್ತ್ರೀವಿಗ್ರಹಾಃ ಸರ್ವಾಃ ಸಂಜಗ್ಮುಃ ಹೃಷ್ಟಮಾನಸಾಃ ॥೧೧॥
ಗಣಪಾಶ್ಚ ಮಹಾಭಾಗಾಃ ಸರ್ವಲೋಕ ನಮಸ್ಕೃತಾಃ ।
ಉದ್ವಾಹಃ ಶಂಕರಸ್ಯೇತಿ ತತ್ರಾಜಗ್ಮು ರ್ಮುದಾಽನ್ವಿತಾಃ ॥೧೨॥
ಅಭ್ಯಯುಃ ಶಂಖವರ್ಣಾಶ್ಚ ಗಣಕೋಟ್ಯೋ ಗಣೇಶ್ವರಾಃ ।
ದಶಭಿಃ ಕೇಕರಾಕ್ಷಶ್ಚ ವಿದ್ಯುತೋಽಷ್ಟಾಭಿರೇವ ಚ ॥೧೩॥
ಚತುಷ್ಷಷ್ಟ್ಯಾ ವಿಶಾಖಶ್ಚ ನವಭಿಃ ಪಾರಯಾತ್ರಿಕಃ ।
ಷಡ್ಭಿಃ ಸರ್ವಾಂತಕಃ ಶ್ರೀಮಾನ್ ತಥೈವ ವಿಕೃತಾನನಃ ॥೧೪॥
ಜ್ವಾಲಾಕೇಶೋ ದ್ವಾದಶಭಿಃ ಕೋಟಿ ಭಿ ರ್ಗಣಪುಂಗವಃ ।
ಸಪ್ತಭಿಃ ಸಮದಃ ಶ್ರೀಮಾನ್ ದುಂದುಭೋಽಷ್ಟಾಭಿ ರೇವ ಚ ॥

---

ಅವರಪರಿಚಾರಿಕೆಯರೂ, ದ್ವೀಪಾಂತರದಲ್ಲಿಯೂ, ಲೋಕಾಂತರಗಳಲ್ಲಿಯೂ, ಇರುವ ಎಲ್ಲಾ ಸ್ತ್ರೀವ್ಯಕ್ತಿಗಳೂ, ಪ್ರಮಥಗಣಗಳೂ, ಪರಮೇಶ್ವರನ ವಿವಾಹಕ್ಕೋಸ್ಕರ ಸಂತೋಷದಿಂದ ತೆರಳಿದರು.

೧೩–೧೫. ಶುಭ್ರವರ್ಣವುಳ್ಳ ಕೋಟ್ಯಾಂತರ ಪ್ರಮಥಗಣಗಳು ಈ ಕೆಳಗೆ ಕಂಡಂತೆ ತಮ್ಮತಮ್ಮ ಪರಿವಾರದೊಂದಿಗೆ ಕೂಡಿದವರಾಗಿ ಶಂಕರನ ವಿವಾಹಕ್ಕೋಸ್ಕರ ಬಂದರು. ಕೇಕರಾಕ್ಷನೆಂಬ ಪ್ರಮಥ ಗಣೇಶ್ವರನು ಹತ್ತುಗಣಗಳಿಂದ ಕೂಡಿದವನಾಗಿಯೂ, ವಿದ್ಯುತನು ಎಂಟು ಗಣಜನರಿಂದಲೂ, ವಿಶಾಖನು ಅರವತ್ತುನಾಲ್ಕು ಗಣಗಳೊಂದಿಗೂ, ಪಾರಯಾತ್ರಿಕನು ಒಂಬತ್ತರಿಂದಲೂ, ಸರ್ವಾಂತಕನು ಆರರಿಂದಲೂ, ಜ್ವಾಲಾಕೇಶನು ಹನ್ನೆರಡುಕೋಟಿ ಗಣಗಳೊಡನೆಯೂ, ಸಮದನು ಏಳು ಗಣಗಳಿಂದಲೂ, ದುಂದುಭನು ಎಂಟರಿಂದಲೂ.

ಪಂಚಭಿಶ್ಚ ಕಪಾಲೀಶಃ ಷಡ್ಭಿಃ ಸಂದಾರಕಃ ಶುಭಃ ।
ಕೋಟಿಕೋಟಿಭಿ ರೇವೇಹ ಗಂಡಕಃ ಕುಂಭಕ ಸ್ತಥಾ ॥೧೬॥

ವಿಷ್ಟಂಭೋಽಷ್ಟಾಭಿ ರೇವೇಹ ಗಣಪಃ ಸರ್ವಸತ್ತಮಃ ।
ಪಿಪ್ಪಲಶ್ಚ ಸಹಸ್ರೇಣ ಸನ್ನಾದಶ್ಚ ತಥಾ ದ್ವಿಜಾಃ ॥೧೭॥

ಆವೇಷ್ಟನಸ್ತಥಾಽಷ್ಟಾಭಿಃ ಸಪ್ತಭಿಶ್ಚಂದ್ರತಾಪನಃ ।
ಮಹಾಕೇಶಃ ಸಹಸ್ರೇಣ ಕೋಟೀನಾಂ ಗಣಪೋ ವೃತಃ ॥೧೮॥

ಕುಂಡೀ ದ್ವಾದಶಭಿ ರ್ವೀರ ಸ್ತಥಾ ಪರ್ವತಕಃ ಶುಭಃ ।
ಕಾಲಶ್ಚ ಕಾಲಕ ಶ್ಚೈವ ಮಹಾಕಾಲಃ ಶತೇನ ವೈ ॥೧೯॥

ಅಗ್ನಿಕಃ ಶತಕೋಟ್ಯಾ ವೈ ಕೋಟ್ಯಾಽಗ್ನಿಮುಖ ಏವ ಚ ।
ಆದಿತ್ಯಮೂರ್ಧಾ ಕೋಟ್ಯಾ ಚ ತಥಾ ಚೈವ ಧನಾವಹಃ ॥೨೦॥

---

೧೬. ಕಪಾಲೀಶನು ಐವರಿಂದ ಯುಕ್ತನಾಗಿಯೂ, ಸಂದಾರಕನು ಆರುಗಣಗಳೊಡನೆಯೂ, ಗಂಡಕ ಮತ್ತು ಕುಂಭಕರು ಕೋಟ್ಯಾಂತರ ಗಣಗಳೊಂದಿಗೂ,

೧೭–೧೯. ಸರ್ವೋತ್ತಮನಾದ ವಿಷ್ಟಂಭನು ಎಂಟುಗಣಗಳೊಂದಿಗೂ, ಪಿಪ್ಪಲನು ಮತ್ತು ಸನ್ನಾದನು ಸಹಸ್ರಗಣಗಳೊಂದಿಗೂ, ಆವೇಷ್ಟನನು ಮತ್ತು ಚಂದ್ರತಾಪನನೂ ಕ್ರಮವಾಗಿ ಹತ್ತುಜನ ಗಣಗಳೊಡನೆಯೂ ಮತ್ತು ಏಳುಗಣಗಳೊಡನೆಯೂ, ಮಹಾಕೇಶನು ಸಹಸ್ರ ಕೋಟಿಯಿಂದಲೂ, ಕುಂಡಿಯು ಹನ್ನೆರಡು ಕೋಟಿಯಿಂದಲೂ, ಪರ್ವತನೂ ಮಹಾಕಾಲನೂ ಇವರೇ ಮೊದಲಾದ ಗಣಾಧಿಪರು ನೂರು ಗಣಗಳೊಡನೆಯೂ ಬಂದರು.

೨೦–೨೧. ಕೋಟ್ಯಾಂತರ ಸಂಖ್ಯಾಕರಾದ ಇವರ ಹಾಗೆಯೇ ಅಗ್ನಿಕ, ಅಗ್ನಿಮುಖ, ಆದಿತ್ಯಮೂರ್ಧಾ, ಧನಾವಹ, ಇವರು ಕೋಟಿಗಣಗಳೊಡನೆಯೂ, ಸನ್ನಾಮ, ಕುಮುದ, ಅಮೋಘ, ಕೋಕಿಲ, ಇವರೂ

ಸನ್ನಾಮಶ್ಚ ಶತೇನೈವ ಕುಮುದಃ ಕೋಟಿಭಿ ಸ್ತಥಾ ।
ಅಮೋಘಃ ಕೋಕಿಲಶ್ಚೈವ ಕೋಟಿಕೋಟ್ಯಾ ಸುಮಂತ್ರಕಃ ॥೨೧॥
ಕಾಕಪಾದೋಽಪರಃ ಷಷ್ಟ್ಯಾ ಷಷ್ಟ್ಯಾ ಸಂತಾನಕಃ ಪ್ರಭುಃ ।
ಮಹಾಚಲಶ್ಚ ನವಭಿಃ ಮಧುಪಿಂಗಶ್ಚ ಪಿಂಗಲಃ ॥೨೨॥
ನೀಲೋ ನವತ್ಯಾ ದೇವೇಶಃ ಪೂರ್ಣಭದ್ರ ಸ್ತಥೈವ ಚ ।
ಕೋಟೀ ನಾಂ ಚೈವ ಸಪ್ತತ್ಯಾ ಚತುರ್ವಕ್ತ್ರೋ ಮಹಾಬಲಃ ॥೨೩॥
ಕೋಟಿ ಕೋಟಿ ಸಹಸ್ರಾಣಾಂ ಶತೈರ್ವಿಂಶತಿಭಿಃ ವೃತಾಃ ।
ತತ್ರಾಜಗ್ಮು ಸ್ತಥಾ ದೇವಾಃ ತೇ ಸರ್ವೇ ಶಂಕರಂ (ಪ್ರಭುಂ)ಭವಂ ॥
ಭೂತ ಕೋಟಿ ಸಹಸ್ರೇಣ ಪ್ರಮಥಃ ಕೋಟಿಭಿ ಮಥಃ ಸ್ತ್ರಿಭಿಃ ।
ವೀರಭದ್ರಃ ಚ ತುಷ್ಷಷ್ಟ್ಯಾ ರೋಮಜಾ (ಜೈ) ಶ್ಚೈವ ಕೋಟಿಭಿಃ ॥

---

ಕೋಟಿಗಟ್ಟಲೆಯಲ್ಲಿ ಗಣಗಳೊಡನೆಯೂ,

೨೨–೨೩. ಕಾಕಪಾದನೂ, ಸಂತಾನಕನೂ, ಮಹಾಬಲ, ಮಧು ಪಿಂಗ, ಪಿಂಗಲ, ನೀಲ, ಪೂರ್ಣಭದ್ರ, ಚತುರ್ವಕ್ತ್ರ ಇವರು ನೂರು ಕೋಟಿಗಣಗಳೊಡನೆಯೂ,

೨೪. ಇವರೇ ಮುಂತಾದವರು ಇಪ್ಪತ್ತು, ನೂರು, ಸಾವಿರ, ಕೋಟಿ, ಹೀಗೆ ತಮ್ಮತಮ್ಮ ಪರಿವಾರದಿಂದೊಡಗೂಡಿದವರಾಗಿ ಪರಮೇಶ್ವರನ ವಿವಾಹಕ್ಕೋಸ್ಕರ ಬಂದರು.

೨೫–೩೫. ಕೆಲವರು ಸಹಸ್ರಕೋಟಿ ಭೂತಗಣಗಳಿಂದ ಕೂಡಿದವರಾಗಿಯೂ, ಇನ್ನು ಕೆಲವರು ಮೂರುಕೋಟಿ ಪ್ರಥಗಣಗಳಿಂದ ಕೂಡಿದವರಾಗಿಯೂ, ವೈವಾಹಿಕ ಮಂಟಪದ ಪ್ರದೇಶವನ್ನು ಪಡೆದವರಾದರು. ವೀರಭದ್ರನು ತನ್ನ ರೋಮಗಳಿಂದ ಹುಟ್ಟಿರತಕ್ಕ ಅರವತ್ತು ನಾಲ್ಕು ಕೋಟಿಗಣಗಳಿಂದ ಯುಕ್ತನಾಗಿಯೂ, ಕರಣನು ಇಪ್ಪತ್ತು ಗಣಗಳಿಂದ ಕೂಡಿದವನಾಯೂ, ಶುಭನು ತೊಂಬತ್ತು ಗಣಗಳಿಂದೊಡಗೂಡಿದವನಾಗಿಯೂ, ಈಶ್ವರನ ಸಮೀಪವನ್ನು ಐದಿದರು. ಇದೇ ರೀತಿಯಲ್ಲಿ ಪಂಚಾಕ್ಷನೂ ಶತಮನ್ಯುವೂ, ಮೇಘಮನ್ಯುವೂ, ಕಾಷ್ಠಕೂಟ,

ಕರಣಶ್ಚೈವ ವಿಂಶತ್ಯಾ ನವತ್ಯಾ ಕೇವಲಃ ಶುಭಃ ।
ಪಂಚಾಕ್ಷಃ ಶತಮನ್ಯುಶ್ಚ ಮೇಘಮನ್ಯು ಸ್ತಥೈವ ಚ ॥೨೬॥

ಕಾಷ್ಠಕೂಟಿ ಶ್ಚತುಷ್ಷಷ್ಟ್ಯಾ ಸುಕೇಶೋ ವೃಷಭಸ್ತಥಾ ।
ವಿರೂಪಾಕ್ಷಶ್ಚ ಭಗವಾನ್ ಚತುಷ್ಷಷ್ಟ್ಯಾ ಸನಾತನಃ ॥೨೭॥

ಸಂವರ್ತಕ ಸ್ತಥಾ ಚೈತ್ರೋ ಲಕುಲೀಶಃ ಸ್ವಯಂ ಪ್ರಭುಃ ।
ಲೋಕಾಂತಕಶ್ಚ ದೀಪ್ತಾಸ್ಯೋ ತಥಾ ದೈತ್ಯಾಂತಕಃ ಪ್ರಭುಃ ॥೨೮॥

ಮೃತ್ಯುಹೃತ್ಕಾಲಹಾ ಕಾಲೋ ಮೃತ್ಯುಂಜಯಕರಸ್ತಥಾ ।
ವಿಷಾದೋ ವಿಷದಶ್ಚೈವ ವಿದ್ಯುತಃ ಕಾಂತಕಃ ಪ್ರಭುಃ ॥೨೯॥

ದೇವೋ ಭೃಂಗೀ ರಿಟಿಃ ಶ್ರೀಮಾನ್ ದೇವದೇವಪ್ರಿಯಸ್ತಥಾ ।
ಅಶನಿ ರ್ಭಾಸಕ ಶ್ಚೈವ ಚತುಷ್ಷಷ್ಟ್ಯಾ ಸಹಸ್ರಪಾತ್ ॥೩೦॥

ಏತೇ ಚಾನ್ಯೇ ಚ ಗಣಪಾಃ ಅಸಂಖ್ಯಾತಾಃ ಮಹಾಬಲಾಃ ॥೩೧॥

ಸರ್ವೇ ಸಹಸ್ರಹಸ್ತಾಶ್ಚ ಜಟಾಮುಕುಟಧಾರಿಣಃ ।
ಚಂದ್ರರೇಖಾವ ತಂಸಾಶ್ಚ ನೀಲಕಂಠಾ ಸ್ತ್ರಿಲೋಚನಾಃ ॥೩೨॥

---

ಸುಕೇಶನೂ, ವೃಷಭನೂ, ವಿರೂಪಾಕ್ಷನೂ, ಕಾಲಕೇತುವೂ,ಷಡಾಸ್ಯ, ಪಂಚಾಸ್ಯ, ಸನಾತನ, ಸಂವರ್ತಕ, ಚೈತ್ರ, ಲಕುಲೀಶ,ಲೋಕಾಂತಕ, ದೀಪ್ತಾಸ್ಯ, ದೈತ್ಯಾಂತಕ, ಮೃತ್ಯುಹರ, ಕಾಲಹಾ, ಕಾಲ, ಮೃತ್ಯು, ಜಯ, ವಿಷಾದ, ವಿಷದ, ವಿದ್ಯುತ, ಕಾಂತಕ, ಶಿವನಪ್ರಿಯಭಕ್ತರಾದ ಭೃಂಗೀ, ರಿಟಿ, ಅಶನಿ, ಭಾಸಕ, ಇವರೇ ಮೊದಲಾದ ದೇವನಾಯಕರೂ ಅನೇಕ ಕೋಟಿ ಸಂಖ್ಯಾಕರಾದ ಗಣೇಶ್ವರರೂ, ಜಡೆ, ಹಾರ, ಕುಂಡಲ, ಬಾಹುಪುರಿ, ಕಿರೀಟ, ಇವೇ, ಮೊದಲಾದುವುಗಳಿಂದ ಅಲಂಕೃತರಾಗಿ ಶಿವನ ಸನ್ನಿಧಿಯನ್ನು ಪಡೆದರು. ಕೋಟಿಸೂರ್ಯರ ಪ್ರಕಾಶವುಳ್ಳ ಅಣಿಮಾದಿ ಅಷ್ಟಸಿದ್ಧಿಗಳನ್ನೂ ಪಡೆದಿರುವ, ದೇವ ಪ್ರಮುಖರೂ, ಪಾತಾಳ ಲೋಕಗಳಲ್ಲಿರುವ ಮಹಾಪುರುಷರೂ, ಎಲ್ಲ ಲೋಕಗಳ ಮಹನೀಯರೂ, ತುಂಬುರು, ನಾರದ, ಹಾಹಾ, ಹೂಹೂ, ಮುಂತಾದ ಗಾಯಕರೂಕೀರ್ತನಕಾರರೂ, ಉಪಹಾರದ

ಹಾರಕುಂಡಲಕೇಯೂರ ಮುಕುಟಾದ್ಯೈರಲಂ ಕೃತಾಃ ।
ಬ್ರಹ್ಮೇಂದ್ರ ವಿಷ್ಣು ಸಂಕಾಶಾ ಅಣಿಮಾದಿ ಗುಣೈಃ ವೃತಾಃ ॥೩೩॥

ಸೂರ್ಯಕೋಟಿ ಪ್ರತೀಕಾಶಾ ಸ್ತತ್ರಾ ಜಗ್ಮುರ್ಗಣೇಶ್ವರಾಃ ।
ಪಾತಾಳ ಚಾರಿಣಶ್ಚೈವ ಸರ್ವಲೋಕ ನಿವಾಸಿನಃ ॥೩೪॥

ತುಂಬುರು ರ್ನಾರದೋ ಹಾಹಾ ಹೂಹೂ ಶ್ಚೈವ ತು ಸಾಮಗಾಃ ।
ರತ್ನಾನ್ಯಾದಾಯ ವಾದ್ಯಾಂಶ್ಚ ಸ್ತತ್ರಾಜಗ್ಮು ಸ್ತದಾ ಪುರಂ ॥೩೫॥

ಋಷಯಃ ಕೃತ್ಸ್ನಶ ಸ್ತತ್ರ ದೇವಗೀತಾಸ್ತಪೋಧನಾಃ ।
ಪುಣ್ಯಾನ್ ವೈವಾಹಿಕಾನ್ ಮಂತ್ರಾನ್ ಅಜಪುಃ ಹೃಷ್ಟಮಾನಸಾಃ ॥

ತತ ಏವಂ ಪ್ರವೃತ್ತೇ ತು ಸರ್ವತಶ್ಚ ಸಮಾಗಮೇ ।
ಗಿರಿಜಾಂ ತಾ ಮಲಂಕೃತ್ಯ ಸ್ವಯಮೇವ ಶುಚಿಸ್ಮಿತಾಂ ॥೩೭॥

ಪುರಂ ಪ್ರವೇಶಯಾಮಾಸ ಸ್ವಯಮಾದಾಯ ಕೇಶವಃ ।
ಸದಸ್ಯಾಹ ಚ ದೇವೇಶಂ ನಾರಾಯಣಮಜೋ ಹರಿಂ ॥೩೮॥

---

(ಕಾಣಿಕೆ) ರತ್ನಗಳನ್ನು ತೆಗೆದುಕೊಂಡು ವಾದ್ಯಸಮೇತರಾಗಿ ವಿವಾಹ ಮಂಟಪಕ್ಕೆ ಬಂದು ಸೇರಿದರು.

೩೬. ದೇವತೆಗಳಿಂದಲೂ ಶ್ಲಾಘಿಸಲ್ಪಟ್ಟ ಸಮಸ್ತ ಋಷಿಗಳೂ ಸಂತೋಷಗೊಂಡವರಾಗಿ ವಿವಾಹಕ್ಕೆ ಸಂಬಂಧಿಸಿರುವ ಪುಣ್ಯಕರವಾದ ಮಂತ್ರಗಳನ್ನು ಉಚ್ಚರಿಸಿದರು.

೩೭. ಈ ಪ್ರಕಾರವಾಗಿ ಸರ್ವರೂ ಶಿವನ ವಿವಾಹಕ್ಕೋಸ್ಕರ ಆ ಕಲ್ಯಾಣಪುರಕ್ಕೆ ಸಮಾಗಮಿಸಲು, ವಿಷ್ಣುವು ಸರ್ವಾಭರಣಗಳಿಂದ ಪಾರ್ವತಿಯನ್ನು ಅಲಂಕರಿಸಿ ಕರೆದುಕೊಂಡು ಬರುತ್ತಾ, ಬ್ರಹ್ಮನಿಂದ ನಿರ್ಮಿಸಲ್ಪಟ್ಟ ಆ ಕಲ್ಯಾಣದ ಪಟ್ಟಣಕ್ಕೆ ಪ್ರವೇಶಮಾಡಿಸಿದನು.

೩೮. ಆ ಸಭೆಯಲ್ಲಿ ಬ್ರಹ್ಮನು ವಿಷ್ಣುವನ್ನು ಕುರಿತು ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.

ಭವಾನಗ್ರೇ ಸಮುತ್ಪನ್ನೋ ಭವಾನ್ಯಾ ಸಹ ದೈವತೈಃ ।
ವಾಮಾಂಗಾದಸ್ಯ ರುದ್ರಸ್ಯ ದಕ್ಷಿಣಾಂಗಾದಹಂ ಪ್ರಭೋಃ ॥೩೯॥
ಮನ್ಮೂರ್ತಿ ಸ್ತುಹಿನಾದ್ರೀಶೋ ಯಜ್ಞಾರ್ಥಂ ಸೃಷ್ಟ ಏವ ಹಿ ।
ಏಷಾ ಹೈಮವತೀ ಜಜ್ಞೇ ಮಾಯಯಾ ಪರಮೇಷ್ಠಿನಃ ॥೪೦॥
ಶ್ರೌತ ಸ್ಮಾರ್ತ ಪ್ರವೃತ್ತ್ಯರ್ಥ ಮುದ್ವಾಹಾರ್ಥಮಿಹಾಗತಃ ।
ಅತೋಽಸೌ ಜಗತಾಂ ಧಾತ್ರೀ ಧಾತಾ ತವ ಮಮಾಪಿ ಚ ॥೪೧॥
ಅಸ್ಯ ದೇವಸ್ಯ ರುದ್ರಸ್ಯ ಮೂರ್ತಿಭಿ ರ್ವಿಹಿತಂ ಜಗತ್ ।
ಕ್ಷ್ಮಾಬಗ್ನಿ ಖೇಂದು ಸೂರ್ಯಾತ್ಮ ಪವನಾತ್ಮಾ ಯತೋ ಭವಃ ॥೪೨॥

---

೩೯—೪೧. ಓ ಪೂಜ್ಯನಾದ ವಿಷ್ಣುವೇ, ನೀನೂ, ಈ ಭವಾನೀ ದೇವಿಯೂ, ಮತ್ತು ದೇವಪ್ರಮುಖರೊಡನೆ ಮೊದಲು ಕಲ್ಪಾದಿಯಲ್ಲಿ ಪ್ರಭುವಾದ ರುದ್ರನ ಎಡಗಡೆಯಿಂದಲೂ, ನಾನು ಬಲಭಾಗದಿಂದಲೂ ಹುಟ್ಟಿದೆವು! ನನ್ನ ಅಂಶದಿಂದ ಸಂಭೂತನಾದ ಈ ಪರ್ವತೇಶ್ವರನಾದ ಹಿಮವಂತನು, ಶಿವನೊಡನೆ ಪಾರ್ವತಿಯನ್ನು ಸಂಘಟಿಸಲು, ಸೃಷ್ಟಿಸಲ್ಪಟ್ಟನು. ಈ ದೇವಿಯು ಆ ಪರಬ್ರಹ್ಮನಮಾಯೆಯಿಂದ ಹಿಮವಂತನ ಮಗಳಾಗಿ ಹುಟ್ಟಿದಳು. ಆ ಕಾರಣದಿಂದ ಇವಳು ಜಗತ್ಕರ್ತ್ರಿಯಾಗಿಧಾತ್ರಿಯಾಗಿ ಇರುತ್ತಾಳೆ. ಗೃಹಸ್ಥರ ಧರ್ಮಗಳಾದ ಶ್ರೌತಸ್ಮಾರ್ತಕರ್ಮಗಳಿಗೆಲ್ಲಕ್ಕೂ ಪ್ರವರ್ತಕನಾಗಿರುವ, ಪಾರ್ವತಿಯ ವಿವಾಹಕ್ಕೋಸ್ಕರ ಆಗಮಿಸಿರುವ, ಈ ರುದ್ರನೂ ಈ ಪಾರ್ವತಿಯೂ ನನಗೂ ಮತ್ತು ನಿನಗೂ ಹಾಗೆಯೇ ಈ ಎಲ್ಲ ಪ್ರಪಂಚಕ್ಕೂ ಜನನೀ ಜನಕರಾಗಿರುವರು.

೪೨. ಯಾವಕಾರಣದಿಂದ ರುದ್ರನು ಪೃಥಿವೀ, ಜಲ, ತೇಜಸ್ಸು, ಆಕಾಶ, ಚಂದ್ರ, ಸೂರ್ಯ, ಯಜಮಾನ, ಮತ್ತು ವಾಯು, ಎಂಬ ಅಷ್ಟಮೂರ್ತಿ ಸ್ವರೂಪನಾಗಿರುವನೋ ಆ ಕಾರಣದಿಂದ ಈ ರುದ್ರನ ದೆಸೆಯಿಂದಲೇ ಜಗತ್ತಿನ ಸೃಷ್ಟಿಯಾಗಿರುತ್ತದೆ.

ತಥಾಽಪಿ ತಸ್ಮೈ ದಾತವ್ಯಾ ವಚನಾಚ್ಚ ಗಿರೇರ್ಮಮ ।
ಏಷಾ ಹ್ಯಜಾ ಶುಕ್ಲ ಕೃಷ್ಣಾ ಲೋಹಿತಾ ಪ್ರಕೃತಿ ರ್ಭವಾನ್ ॥೪೩॥
ಶ್ರೇಯೋಽಪಿ ಶೈಲರಾಜೇನ ಸಂಬಂಧೋಽಯಂ ತವಾಪಿ ಚ ।
ತವ ಪಾದ್ಮೇ ಸಮುದ್ಭೂತಃ ಕಲ್ಪೇ ನಾಭ್ಯಂಬುಜಾದಹಂ ।
ಮದಂಶಸ್ಯಾಸ್ಯ ಶೈಲಸ್ಯ ಮಮಾಪಿ ಚ ಗುರುರ್ಭವಾನ್ ॥೪೪॥

॥ ಸೂತ ಉವಾಚ ॥

ಬಾಢಮಿತ್ಯಜಮಾಹಾಸೌ ದೇವದೇವೋ ಜನಾರ್ದನಃ ॥೪೫॥
ದೇವಾಶ್ಚ ಮುನಯಃ ಸರ್ವೇ ದೇವದೇವಶ್ಚ ಶಂಕರಃ ।
ತತಶ್ಚೋತ್ಥಾಯ ವಿದ್ವಾಂಸಃ ಪದ್ಮನಾಭಃ ಪ್ರಣಮ್ಯ ತಾಂ ॥೪೬॥

---

೪೩. ನೀನು ಸತ್ವ (ಶುಕ್ಲ) ರಜಸ್ (ಲೋಹಿತ) ತಮಸ್ (ಕೃಷ್ಣ) ರೂಪವಾದ ಗುಣಗಳ ಸಾಮ್ಯಾವಸ್ಥೆಯಿಂದೊಡಗೂಡಿರುವ ಮಾಯೆಯ ಸ್ವರೂಪನಾಗಿರುವೆಯಾದ ಕಾರಣದಿಂದ ನಿನಗೂ ಶಿವನಾದ ರುದ್ರನಿಗೂ, ಸಂಬಂಧವು ನಿತ್ಯವಾಗಿರುವುದೇ ಆಗಿರುತ್ತದೆ. ಆದರೂ ಈ ಪಾರ್ವತಿಯು ನನ್ನ ಮತ್ತು ಹಿಮವಂತನ ಕೋರಿಕೆಗನುಗುಣವಾಗಿ ಈಶ್ವರನಿಗೆ ಕೊಡಲ್ಪಡತಕ್ಕವಳಾಗಿದಾಳೆ.

೪೪. ಹಿಂದೆಪದ್ಮಕಲ್ಪದಲ್ಲಿ ನಿನ್ನ ನಾಭಿಕಮಲದಲ್ಲಿರುವ ಪದ್ಮದಿಂದ ನಾನು ಹುಟ್ಟಿದೆನು. ಆದ್ದರಿಂದ ನನ್ನ ಅಂಶದಿಂದ ಸಂಭೂತನಾದ ಈ ಹಿಮವಂತನಿಗೂ ನನಗೂ ನೀನು ಗುರುವಾಗಿದ್ದೀಯೆ.

೪೫. ಸೂತನು ಹೇಳಿದನು: ಬ್ರಹ್ಮನು ಹೇಳಿದ ಈ ಮಾತನ್ನು ವಿಷ್ಣುವೂ ಮತ್ತು ಈಶ್ವರನೂ, ಋಷಿಗಳೂ, ದೇವತೆಗಳೂ ಈ ಎಲ್ಲರೂ ಅಂಗೀಕರಿಸಿದರು.

೪೬–೪೮. ಅನಂತರದಲ್ಲಿ ಜ್ಞಾನಿಯಾದ ವಿಷ್ಣುವು ಪಾರ್ವತಿಯನ್ನು ನಮಸ್ಕರಿಸಿ, ಪರಮೇಶ್ವರನ ಕಾಲುಗಳನ್ನು ತೊಳೆದು ಆ ಪಾದೋದಕವನ್ನು ತನ್ನ ಮತ್ತು ಹಿಮವಂತನ ಶಿರಸ್ಸಿನಲ್ಲಿ ಪ್ರೋಕ್ಷಣೆಮಾಡಿದನು.

ಪಾದೌ ಪ್ರಕ್ಷಾಲ್ಯ ದೇವಸ್ಯ ಕರಾಭ್ಯಾಂ ಕಮಲೇಕ್ಷಣಃ ।
ಅಭ್ಯುಕ್ಷ್ಯ ದಾತ್ಮನೋ ಮೂರ್ಧ್ನಿ ಬ್ರಹ್ಮಣಶ್ಚ ಗಿರೇಸ್ತಥಾ ॥೪೭॥
ತ್ವ(ತ)ದೀಯೈಷಾ ವಿವಾಹಾರ್ಥಂ ಮೇನಜಾ ಹ್ಯನುಜಾ ಮಮ ।
ಇತ್ಯುಕ್ತ್ವಾ ಸೋದಕಂ ದತ್ವಾ ದೇವೀಂ ದೇವೇಶ್ವರಾಯ ತಾಂ ॥
ಸ್ವಾತ್ಮಾನಮಪಿ ದೇವಾಯ ಸೋದಕಂ ಪ್ರದದೌ ಹರಿಃ ।
ಅಥ ಸರ್ವೇ ಮುನಿಶ್ರೇಷ್ಠಾಃ ಸರ್ವವೇದಾರ್ಥಪಾರಗಾಃ ॥೪೯॥
ಊಚುಃ ದಾತಾ ಗೃಹೀತಾ ಚ ಫಲಂ ದ್ರವ್ಯಂ ವಿಚಾರತಃ ।
ಏಷ ದೇವೋ ಹರೋ ನೂನಂ ಮಾಯಯಾ ಹಿ ತತೋ ಜಗತ್ ॥
ಇತ್ಯುಕ್ತ್ವಾ ತಂ ಪ್ರಣೇಮುಶ್ಚ ಪ್ರೀತಿಕಂಟಕಿತ ತ್ವಚಃ ।
ಸಸೃಜುಃ ಪುಷ್ಪವರ್ಷಾಣಿ ಖೇಚರಾಃ ಸಿದ್ಧಚಾರಣಾಃ ॥೫೧॥

---

ಆಮೇಲೆ ಶಂಕರನನ್ನು ಕುರಿತು, ಓ ಪರಮೇಶ್ವರನೇ, ಮೇನಾದೇವಿಯ ಮಗಳಾಗಿಯೂ ಮತ್ತು ನನ್ನ ತಂಗಿಯಾಗಿಯೂ, ಇರುವ ಈ ಪಾರ್ವತಿಯು ನಿನ್ನ ಅರ್ಧಾಂಗಸ್ವರೂಪಳಾಗಿ ಧರ್ಮಪತ್ನಿಯಾಗಿ ಇರುತ್ತಾಳೆ. ಹೀಗೆಂದು ಹೇಳಿ ಉದಕದೊಂದಿಗೆ ಪಾರ್ವತಿಯನ್ನು ಶಿವನಿಗೆ ಸಮರ್ಪಿಸಿದನು. ಮತ್ತು ತನ್ನನ್ನೂ ಸಮರ್ಪಿಸಿದನು.

೪೯-೫೨. ಅನಂತರದಲ್ಲಿ ಎಲ್ಲ ವೇದಾರ್ಥಗಳನ್ನೂ ಸಂಪೂರ್ಣವಾಗಿ ತಿಳಿದಿರುವ ಉತ್ತಮರಾದ ಮುನಿಗಳು ಎಲ್ಲರೂ ಹೀಗೆ ಹೇಳಿದರು. ಈ ಮಹಾದೇವನು ಈ ಮಂಗಳಕಾರ್ಯದಲ್ಲೂ ದಾನವನ್ನು ಕೊಡುವವನೂ, ಸ್ವೀಕರಿಸುವವನೂ, ಕೊಡಲ್ಪಡುವ ವಸ್ತುವೂ, ಈ ಕನ್ಯಾದಾನದ ಫಲವೂ, ಇವೆಲ್ಲವುಗಳ ಸ್ವರೂಪವಾಗಿರುವನು. ಈ ದೇವನ ಮಾಯಾಶಕ್ತಿಯಿಂದಲೇ ಈ ಪ್ರಪಂಚವೆಲ್ಲವೂ ಉಂಟಾಗಿ ಮುಂದುವರಿಯುತ್ತಿದೆ. ಹೀಗೆ ಎಲ್ಲರ ಎಲ್ಲ ಬಗೆಯ ಶ್ರೇಯಸ್ಸುಗಳಿಗೂ ಅನುಗ್ರಾಹಕಕಾರಣನಾದ ದೇವನಾದ ನಿನಗೆ ನಮಸ್ಕಾರವು. ಎಂದು ಹೇಳಿ ಎಲ್ಲರೂ ಭಕ್ತಿಯಿಂದ ಪರಮೇಶ್ವರನನ್ನು ನಮಸ್ಕರಿಸಿದರು ಆಗ ಖೇಚರರೂ ಮತ್ತು ಸಿದ್ಧರೂ, ಚಾರಣರೂ, ಪುಷ್ಪವೃಷ್ಟಿಯನ್ನು ಸುರಿಸಿದರು! ದೇವದುಂದುಭಿಗಳು

ದೇವ ದುಂದುಭಯೋ ನೇದುಃ ನನೃತುಶ್ಚಾಪ್ಸರೋಗಣಾಃ ।
ವೇದಾಶ್ಚ ಮೂರ್ತಿಮಂತಸ್ತೇ ಪ್ರಣೇಮುಸ್ತಂ ಮಹೇಶ್ವರಂ ॥೫೨॥
ಬ್ರಹ್ಮಣಾ ಮುನಿಭಿಃ ಸಾರ್ಧಂ ದೇವದೇವ ಮುಮಾಪತಿಂ ।
ದೇವೋಽಪಿ ದೇವೀ ಮಾಲೋಕ್ಯ ಸಲಜ್ಜಾಂ ಹಿಮಶೈಲಜಾಂ ॥೫೩॥
ನ ತೃಪ್ಯತ್ಯನವದ್ಯಾಂಗೀಂ ಸಾ ಚ ದೇವಂ ವೃಷಧ್ವಜಂ ।
ವರದೋಽಸ್ಮೀತಿ ತಂ ಪ್ರಾಹ ಹರಿಂ ಸೋಽಪ್ಯಾಹ ಶಂಕರಂ ॥೫೪॥
ತ್ವಯಿ ಭಕ್ತಿಃ ಪ್ರಸೀದೇತಿ ಬ್ರಹ್ಮಾಖ್ಯಾಂ ಚ ದದೌ ತು ಸಃ ।
ತತಸ್ತು ಪುನರೇವಾಹ ಬ್ರಹ್ಮಾ ವಿಜ್ಞಾಪಯನ್ ಪ್ರಭುಂ ॥೫೫॥

---

ಮೊಳಗಿದವು. ಅಪ್ಸರಸ್ತ್ರೀಯರು ನರ್ತನಮಾಡಿದರು, ವೇದಾಭಿಮಾನಿಗಳಾದ ದೇವತೆಗಳೂ ಪರಮೇಶ್ವರನನ್ನು ನಮಸ್ಕರಿಸಿದರು.

೫೩. ಆಗ ದೇವನಾದ ಪರಮೇಶ್ವರನೂ, ಲಜ್ಜಾಶೀಲಳೂ, ದೋಷಲೇಶವೂ ಇಲ್ಲದೆ ಸರ್ವಾಂಗ ಸುಂದರಿಯೂ, ಆದ ಹಿಮವಂತನ ಮಗಳಾದ ಪಾರ್ವತಿಯನ್ನು ಪ್ರೀತಿಯಿಂದ ನೋಡಿದನು. ಆ ಗಿರಿಜೆಯೂ ಧರ್ಮರೂಪದ ವೃಷಭವೇ ಧ್ವಜದಲ್ಲಿ ಗುರುತಾಗಿ ಪಡೆದಿರುವ ಮಹಾದೇವನನ್ನು ಪ್ರೇಮಪೂರ್ವಕವಾಗಿ ನೋಡಿದಳು. ಈ ದರ್ಶನದಿಂದ ಉಂಟಾದ ಆನಂದವೂ ಇಬ್ಬರಿಗೂ ಸಾಕೆನ್ನಿಸದೆ ಹೆಚ್ಚುತ್ತಲೇ ಇದ್ದಿತು !

೫೪. ಅನಂತರದಲ್ಲಿ ಈಶ್ವರನು ವಿಷ್ಣುವನ್ನು ಕುರಿತು ನಿನಗೆ ಇಷ್ಟವಾದ ವರವನ್ನು ದಯಪಾಲಿಸುತ್ತೇನೆಂದು ಹೇಳಲು, ವಿಷ್ಣುವು ನಿನ್ನಲ್ಲಿ ಯಾವಾಗಲೂ ಭಕ್ತಿಯುಳ್ಳವನಾಗಿರುವಂತೆ ಮಾಡಿ ನನ್ನನ್ನು ಅನುಗ್ರಹಿಸೆಂದು ಕೇಳಿದನು. ಆಮೇಲೆ ಶಿವನು ಹಾಗೆಯೇ ಆಗಲೆಂದು ಅನುಗ್ರಹಿಸಿ, ವಿಷ್ಣುವಿಗೆ ಬ್ರಹ್ಮನೆಂಬ ಹೆಸರನ್ನೂ ಕೊಟ್ಟನು. ಆದುದರಿಂದ ಇದೇ ರೀತಿಯಲ್ಲಿ ವಿಷ್ಣು ಪುರಾಣದಲ್ಲಿಯೂ, ವಿಷ್ಣುವನ್ನು ಬ್ರಹ್ಮನೆಂದು ವ್ಯವಹಾರ ಮಾಡಿರುವುದೂ ಸಂಗತವಾಗಿರುತ್ತದೆ.

೫೫. ಅನಂತರದಲ್ಲಿ ಬ್ರಹ್ಮನು ಈಶ್ವರನನ್ನು ಕುರಿತು ಲೋಕವಲ್ಲೀಲಾಕೈವಲ್ಯಂ ಎಂಬ ತತ್ವನಿಯಮವನ್ನು ಅನುಸರಿಸಿ ಮತ್ತೊಮ್ಮೆ ವಿಜ್ಞಾಪನೆ ಮಾಡುವವನಾಗಿ ಹೀಗೆಂದು ಹೇಳಿದನು.

ಹವಿರ್ಜುಹೋಮಿ ವಹ್ನೌ ತು ಉಪಾಧ್ಯಾಯಪದೇ ಸ್ಥಿತಃ ।
ದದಾಸಿ ಮಮ ಯದ್ಯಾಜ್ಞಾಂ ಕರ್ತವ್ಯೋ ಹ್ಯಕೃತೋ ವಿಧಿಃ ॥೫೬॥
ತಮಾಹ ಶಂಕರೋ ದೇವಂ ದೇವದೇವೋ ಜಗತ್ಪತಿಃ ।
ಯದ್ಯದಿಷ್ಟಂ ಸುರಶ್ರೇಷ್ಠ ತತ್ಕುರುಷ್ವ ಯಥೇಪ್ಸಿತಂ ॥೫೭॥
ಕರ್ತಾಽಸ್ಮಿ ವಚನಂ ಸರ್ವಂ ದೇವದೇವ ಪಿತಾಮಹ ।
ತತಃ ಪ್ರಣಮ್ಯ ಹೃಷ್ಟಾತ್ಮಾ ಬ್ರಹ್ಮಾ ಲೋಕಪಿತಾಮಹಃ ॥೫೮॥
ಹಸ್ತಂ ದೇವಸ್ಯ ದೇವ್ಯಾಶ್ಚ ಯುಯೋಜ ಪರಮಂ ಪ್ರಭುಃ ।
ಜ್ವಲನಶ್ಚ ಸ್ವಯಂ ತತ್ರ ಕೃತಾಂಜಲಿರುಪಸ್ಥಿತಃ ॥೫೯॥
ಶ್ರೌತ್ರೈರೇತೈರ್ಮಹಾಮಂತ್ರೈಃ ಮೂರ್ತಿಮದ್ಭಿರುಪಸ್ಥಿತೈಃ ।
ಯಥೋಕ್ತವಿಧಿನಾ ಹುತ್ವಾ ಲಾಜಾನಪಿ ಯಥಾಕ್ರಮಂ ॥೬೦॥

---

೫೬. ಓ ಪರಮೇಶ್ವರನೇ, ಮುಂದಿನ ಕಾರ್ಯವಾದ ಈ ವೈವಾಹಿಕ ಹೋಮವನ್ನೂ ನಿರ್ವಹಿಸಬೇಕಾದುದರಿಂದ ನನ್ನನ್ನು ಪುರೋಹಿತನಾದ ಹೋತೃವಿನ ಸ್ಥಾನದಲ್ಲಿ ಇರಿಸಿ ಹೋಮವನ್ನು ನಿರ್ವಾಹಮಾಡುವುದಕ್ಕೆ ಆಜ್ಞೆಯನ್ನು ದಯಪಾಲಿಸಬೇಕು.

೫೭. ಹೀಗೆಂದು ವಿಜ್ಞಾಪಿಸಿಕೊಂಡ ಬ್ರಹ್ಮನ ಕೋರಿಕೆಯನ್ನು ನೆರವೇರಿಸಲು, ಲೋಕಗಳ ಒಡೆಯನಾದ ಪರಮೇಶ್ವರನು ಬ್ರಹ್ಮನನ್ನು ಕುರಿತು, ದೇವ ಶ್ರೇಷ್ಠನಾದ ಪಿತಾಮಹನೇ, ನಿನಗೂ ಶಾಸ್ತ್ರಕ್ಕೂ ಸಮ್ಮತವಾದುದೆಲ್ಲವನ್ನೂ ನೆರವೇರಿಸು. ನಿನ್ನ ಮಾತಿನಂತೆಯೇ ನಡೆಯುವೆನು, ಎಂದು ವಚನವನ್ನಿತ್ತನು.

೫೮. ಅನಂತರದಲ್ಲಿ ಎಲ್ಲಕ್ಕೂ ಪಿತಾಮಹನಾದ ಬ್ರಹ್ಮನು ಸಂತುಷ್ಟವಾದ ಮನಸ್ಸುಳ್ಳವನಾಗಿ ಈಶ್ವರನಿಂದ ಪಾರ್ವತಿಯ ಪಾಣಿ ಗ್ರಹಣವನ್ನು ಮಾಡಿಸಿದನು.

೫೯—೬೨. ಸಾಕ್ಷಾತ್ ಯಜ್ಞೇಶ್ವರನೂ ಆ ವಿವಾಹ ಮಂಟಪದಲ್ಲಿ ಬಂದು ಸನ್ನಿಹಿತನಾದನು. ಅನಂತರದಲ್ಲಿ ಮೂರ್ತಿ ಮತ್ತಾಗಿರುವ ವೈವಾಹಿಕಮಂತ್ರಗಳಿಂದ ವಿಧಿವತ್ತಾಗಿ ಶ್ರೌತಾಗ್ನಿಯಲ್ಲಿ ಹೋಮವನ್ನು

ಆನೀತಾನ್ ವಿಷ್ಣುನಾ ವಿಪ್ರಾನ್ ಸಂಪೂಜ್ಯ ವಿವಿಧೈರ್ವರೈಃ ।
ತ್ರಿಶ್ಚ ತಂ ಜ್ವಲನಂ ದೇವಂ ಕಾರಯಿತ್ವಾ ಪ್ರದಕ್ಷಿಣಂ ॥೬೧॥
ಮುಕ್ತ್ವಾ ಹಸ್ತ ಸಮಾಯೋಗಂ ಸಹಿತೈಃ ಸರ್ವ ದೇವತೈಃ ।
ಸುರೈಶ್ಚ ಮಾನವೈಃ ಸರ್ವೈಃ ಪ್ರಹೃಷ್ಟೇನಾಂತರಾತ್ಮನಾ ॥೬೨॥
ನನಾಮ ಭಗವಾನ್ ಬ್ರಹ್ಮಾ ದೇವದೇವ ಮುಮಾಪತಿಂ ।
ತತಃ ಪಾದ್ಯಂ ತಯೋರ್ದತ್ವಾ ಶಂಭೋ ರಾಚಮನಂ ತಥಾ ॥೬೩॥
ಮಧುಪರ್ಕಂ ತಥಾ ಗಾಂ ಚ ಪ್ರಣಮ್ಯ ಚ ಪುನಃ ಶಿವಂ ।
ಅತಿಷ್ಠದ್ಭಗವಾನ್ ಬ್ರಹ್ಮಾ ದೇವೈರಿಂದ್ರಪುರೋಗಮೈಃ ॥೬೪॥
ಭೃಗ್ವಾದ್ಯಾಃ ಮುನಯಃ ಸರ್ವೇ ಚಾಕ್ಷತೈ ಸ್ತಿಲ ತಂಡುಲೈಃ ।
ಸೂರ್ಯಾದಯಃ ಸಮಭ್ಯರ್ಚ್ಯ ತುಷ್ಟುವುಃ ವೃಷಭಧ್ವಜಂ ॥೬೫॥
ಶಿವಃ ಸಮಾಪ್ಯ ದೇವೋಕ್ತಂ ವಹ್ನಿಮಾರೋಪ್ಯ ಚಾತ್ಮನಿ ।
ತಯಾ ಸಮಾಗತೋ ರುದ್ರಃ ಸರ್ವಲೋಕ ಹಿತಾಯ ವೈ ॥೬೬॥

---

ನೆರವೇರಿಸಿ, ವಿಷ್ಣುವಿನಿಂದ ತರಲ್ಪಟ್ಟ ಅರಳುಗಳನ್ನೂ ಹೋಮಮಾಡಿಸಿ, ಬ್ರಾಹ್ಮಣರನ್ನು ನಾನಾವಿಧವಾದ ವರಗಳಿಂದ ಸಂತೋಷಪಡಿಸಿ, ವಧೂವರರಿಂದ ಮೂರಾವೃತ್ತಿ ಯಜ್ಞೇಶ್ವರನನ್ನು ಪ್ರದಕ್ಷಿಣೆಮಾಡಿಸಿ, ಅವರಿಬ್ಬರ ಕೈಗಳನ್ನು ಬೇರೆಯಾಗಿಸಿದ ಅನಂತರದಲ್ಲಿ ಬ್ರಹ್ಮನು ದೇವದೇವನಾದ ಪರಮೇಶ್ವರನನ್ನು ನಮಸ್ಕರಿಸಿದನು.

೬೨–೬೪. ಹೋಮವಾದ ಅನಂತರದಲ್ಲಿ ಬ್ರಹ್ಮನು ವಧೂವರರಿಗೆ ಪಾದ್ಯವನ್ನು ಕೊಟ್ಟು, ಈಶ್ವರನಿಗೆ ಆಚಮನವನ್ನೂ ಮಾಡಿಸಿ, ಮಧುಪರ್ಕವನ್ನೂ ಮತ್ತು ಗೋವನ್ನೂ ಕೊಟ್ಟು, ನಮಸ್ಕರಿಸಿ ಇಂದ್ರಾದಿ ದೇವತೆಗಳೊಂದಿಗೆ ಮೇಲಕ್ಕೆದ್ದು ನಿಂತನು.

೬೫. ಆಗ ಭೃಗುವೇ ಮೊದಲಾದ ಮಹರ್ಷಿಗಳು, ಸೂರ್ಯಾದಿಗ್ರಹಗಳೂ, ಅಕ್ಷತೆಗಳಿಂದಲೂ, ತಿಲತಂಡುಲಗಳಿಂದಲೂ, ಶಿವನನ್ನು ಪೂಜಿಸಿ ಸ್ತೋತ್ರಮಾಡಿದರು.

೬೬. ಶಿವನು ಬ್ರಹ್ಮನ ಕೋರಿಕೆಗನುಗುಣವಾಗಿ, ಔಪಾಸನಾಗ್ನಿಯನ್ನು ಆತ್ಮಸಮಾರೋಪಣೆಯಿಂದ ಧರಿಸಿ ಜಗತ್ತಿನ ಹಿತಕ್ಕೋಸ್ಕರ ಪಾರ್ವತಿಯಿಂದ ಯುಕ್ತನಾಗಿ ತನ್ನ ಸ್ಥಾನವನ್ನು ಕುರಿತು ತೆರಳಿದನು.

ಯಃ ಪಠೇಚ್ಛೃಣುಯಾದ್ವಾಽಪಿ ಭವೋದ್ವಾಹಂ ಶುಚಿಸ್ಮಿತಃ ।
ಶ್ರಾವಯೇದ್ವಾ ದ್ವಿಜಾನ್ ಶುದ್ಧಾನ್ ವೇದವೇದಾಂಗಪಾರಗಾನ್ ॥
ಸ ಲಬ್ಧ್ವಾ ಗಾಣಪತ್ಯಂ ಚ ಭವೇನ ಸಹ ಮೋದತೇ ।
ಯತ್ರಾಯಂ ಕೀರ್ತ್ಯತೇ ವಿಪ್ರೈ ಸ್ತತ್ರಾವದಾಸ್ತೇ ತದಾ ಭವಃ ।
ತಸ್ಮಾತ್ಸಂಪೂಜ್ಯ ವಿಧಿವತ್ ಕೀರ್ತಯೇನ್ನಾನ್ಯಥಾ ದ್ವಿಜಾಃ ॥೬೮॥
ಉದ್ವಾಹೇ ಚ ದ್ವಿಜೇಂದ್ರಾಣಾಂ ಕ್ಷತ್ರಿಯಾಣಾಂ ದ್ವಿಜೋತ್ತಮಾಃ
ಕೀರ್ತನೀಯಮಿದಂ ಸರ್ವಂ ಭವೋದ್ವಾಹ ಮನುತ್ತಮಂ ॥೬೯॥
ಕೃತೋದ್ವಾಹಸ್ತದಾ ದೇವ್ಯಾ ಹೈಮವತ್ಯಾ ವೃಷಧ್ವಜಃ ॥೭೦॥
ಸಗಣೋ ನಂದಿನಾ ಸಾರ್ಧಂ ಸರ್ವದೇವಗಣೈರ್ವೃತಃ ।
ಪುರೀಂ ವಾರಾಣಸೀಂ ದಿವ್ಯಾ ಮಾಜಗಾಮ ಮಹಾದ್ಯುತಿಃ ॥೭೧॥

---

೬೭. ಇದುವರೆಗೆ ವರ್ಣಿಸಿ ಹೇಳಿದ ಈಶ್ವರನ ಕಲ್ಯಾಣ ಕ್ರಮವನ್ನು ಯಾರು ಕೇಳುವರೋ ಮತ್ತು ವೇದವೇದಾಂಗ ಪಾರಂಗತರಾದ ಬ್ರಾಹ್ಮಣರಿಗೆ ಹೇಳುವರೋ, ಅವರು ಪ್ರಮಥ ಗಣಗಳ ಆಧಿಪತ್ಯವನ್ನು ಪಡೆದು, ಭಗವಂತನಾದ ಶಿವನೊಂದಿಗೆ ಇದ್ದು ಆನಂದಪಡುವವ ರಾಗುತ್ತಾರೆ.

೬೮–೬೯. ಬ್ರಾಹ್ಮಣರು ಶಿವನ ಈ ಕಲ್ಯಾಣದ ಕ್ರಮವನ್ನು ಯಾವ ಸ್ಥಳದಲ್ಲಿ ಪಠಿಸುತ್ತಾರೆಯೋ ಆ ಸ್ಥಳಗಳಲ್ಲಿ ನಿಶ್ಚಯವಾಗಿಯೂ ಶಿವನು ಸಾಕ್ಷಾತ್ತಾಗಿರುತ್ತಾನೆ. ಅದ್ದರಿಂದ ಎಲೈ ಬ್ರಾಹ್ಮಣೋತ್ತ ಮರೇ, ವಿಧಿವತ್ತಾಗಿ ಶಿವನನ್ನು ಪೂಜೆಮಾಡಿ ಇದನ್ನು ಪಠನ ಮಾಡ ಬೇಕು. ಇದಲ್ಲದೇ ಬೇರೆಯ ವಿಧದಿಂದ ಎಂದೂಪಠಿಸಬಾರದು. ಬ್ರಾಹ್ಮಣರ ಮತ್ತು ಕ್ಷತ್ರಿಯರ ವಿವಾಹ ಸಮಯದಲ್ಲಿ ಇದನ್ನು ಪಠಿಸಿ ದರೆ ಶ್ರೇಯಸ್ಸುಂಟಾಗುವುದು.

೭೦–೭೧. ವಿವಾಹವಾದ ಅನಂತರದಲ್ಲಿ ಪಾರ್ವತಿಯಿಂದ ಯುಕ್ತ ನಾದ ಶಿವನು ತನ್ನ ವಾಹನವಾದ ನಂದಿಯನ್ನೇರಿದವನಾಗಿ ಗಣ ಗಳೊಂದಿಗೂ ಮತ್ತು ದೇವತೆಗಳೊಂದಿಗೂ ಕೂಡಿದವನಾಗಿ ವಾರಾಣಸಿ ಯನ್ನು ಬಂದು ಸೇರಿದನು. ( ವಾರಾಣಸಿ ಎಂದರೆ ಈಗಿನ ಕಾಶಿಯೆಂದು ತಿಳಿದವರಿಂದ ವ್ಯವಹರಿಸಲ್ಪಡುತ್ತದೆ. )

ಅವಿಮುಕ್ತೇ ಸುಖಾಸೀನಂ ಪ್ರಣಮ್ಯ ವೃಷಭಧ್ವಜಂ ।
ಅಪೃಚ್ಛತ್ ಕ್ಷೇತ್ರಮಾಹಾತ್ಮ್ಯಂ ಭವಾನೀ ಹರ್ಷಿತಾನನಾ ॥೭೨॥
ಅಥಾ ಹಾರ್ಧೇಂದುತಿಲಕಃ ಕ್ಷೇತ್ರಮಾಹಾತ್ಮ್ಯಮುತ್ತಮಂ ।
ಅವಿಮುಕ್ತಸ್ಯ ಮಾಹಾತ್ಮ್ಯಂ ವಿಸ್ತರಾಚ್ಚಕ್ಯತೇ ನ ಹಿ ॥೭೩॥
ವಕ್ತುಂ ಮಯಾ ಸುರೇಶಾನಿ ಋಷಿಸಂಘಾತಪೂಜಿತಂ ।
ಕಿಂ ಮಯಾ ವರ್ಣ್ಯತೇ ದೇವಿ ಹ್ಯವಿಮುಕ್ತಫಲೋದಯಃ ॥೭೪॥
ಪಾಪಿನಾಂ ಯತ್ರ ಮುಕ್ತಿಃ ಸ್ಯಾತ್ ಮೃತಾನಾ ಮೇಕಜನ್ಮನಾ ।
ಅನ್ಯತ್ರ ತು ಕೃತಂ ಪಾಪಂ ವಾರಾಣಸ್ಯಾಂ ವ್ಯಪೋಹತಿ ॥೭೫॥

---

೭೨. ಹೀಗೆ ಶಿವನು ವಾರಣಸೀಕ್ಷೇತ್ರವನ್ನು ಪಡೆದು ಅಲ್ಲಿ ನೆಲಸಿದ ತರುವಾಯ ಒಂದಾನೊಂದು ಕಾಲದಲ್ಲಿ ಸುಖಾಸೀನನಾದ ಪರಮೇಶ್ವರನನ್ನು ಕುರಿತು ಪಾರ್ವತಿಯು ವಾರಾಣಸೀಕ್ಷೇತ್ರದಮಹಿಮೆಯನ್ನು ವಿವರಿಸಿ ಹೇಳಬೇಕೆಂದು ಪತಿಯನ್ನು ಕುರಿತು ಬಿನ್ನವಿಸಿದಳು.

೭೩. ತರುವಾಯ ಚಂದ್ರಶೇಖರನಾದ ಶಿವನು ವಾರಾಣಸೀ ಕ್ಷೇತ್ರದ ಮಾಹಾತ್ಮ್ಯವನ್ನು ಈ ಪ್ರಕಾರವಾಗಿ ಪಾರ್ವತೀದೇವಿಗೆ ತಿಳಿಯಹೇಳಿದನು.

೭೪. ಎಲೌ ದೇವಿಯೇ, ಋಷಿಗಳಿಂದಲೂ ಸೇವಿಸಲ್ಪಡತಕ್ಕ ಈ ವಾರಾಣಸೀಕ್ಷೇತ್ರದ ಮಾಹಾತ್ಮ್ಯೆಯನ್ನು ನಾನು ಏನೆಂದು ವರ್ಣಿಸಲಿ! ಇದರ ಸೇವೆಯಿಂದಾಗುವ ಫಲವು ಇಷ್ಟೆಂದು ವರ್ಣಿಸಲು ಅಸಾಧ್ಯವಾದದ್ದಾಗಿರುತ್ತದೆ.

೭೫. ಯಾವ ಕಾಶೀಕ್ಷೇತ್ರದಲ್ಲಿ ಮರಣವನ್ನುಹೊಂದಿದ ಪಾಪಿಗಳೂ ಕೂಡ ಒಂದೇ ಜನ್ಮದಲ್ಲಿ ಮುಕ್ತಿಯನ್ನು ಹೊಂದುತ್ತಾರೆ. ಬೇರೆ ಕಡೆಯಲ್ಲಿ ಮಾಡಿರುವ ಪಾಪವೆಲ್ಲವೂ ಈ ವಾರಾಣಸೀಕ್ಷೇತ್ರದ ದರ್ಶನ, ವಾಸ, ಸ್ನಾನ, ಈ ಮುಂತಾದ ರೀತಿಯಲ್ಲಿ ಸೇವಿಸುವದರಿಂದ ನಾಶವನ್ನು ಹೊಂದುತ್ತದೆ.

ವಾರಾಣಸ್ಯಾಂ ಕೃತಂ ಪಾಪಂ ಪೈಶಾಚ್ಯನರಕಾವಹಂ ।
ಕೃತ್ವಾ ಪಾಪಸಹಸ್ರಾಣಿ ಪಿಶಾಚತ್ವಂ ವರಂ ನೃಣಾಂ ॥೭೬॥

ನ ತು ಶಕ್ರಸಹಸ್ರತ್ವಂ ಸ್ವರ್ಗೇ ಕಾಶೀಪುರೀಂ ವಿನಾ ।
ಯತ್ರ ತ್ರಿವಿಷ್ಟಪೋ ದೇವೋ ಯತ್ರ ವಿಶ್ವೇಶ್ವರೋ ವಿಭುಃ ॥೭೭॥

ಓಂಕಾರೇಶಃ ಕೃತ್ತಿವಾಸಾಃ ಮೃತಾನಾಂ ನ ಪುನರ್ಭವಃ ।
ಉಕ್ತ್ವಾ ಕ್ಷೇತ್ರಸ್ಯ ಮಾಹಾತ್ಮ್ಯಂ ಸಂಕ್ಷೇಪಾತ್ ಶಶಿಶೇಖರಃ ॥

ದರ್ಶಯಾಮಾಸ ಚೋದ್ಯಾನಂ ಪರಿತ್ಯಜ್ಯ ಗಣೇಶ್ವರಾನ್ ।
ತತ್ರೈವ ಭಗವಾನ್ ಜಾತೋ ಗಜವಕ್ತ್ರೋ ವಿನಾಯಕಃ ॥೭೯॥

---

೭೬. ವಾರಾಣಸಿಯಲ್ಲಿ ಪಾಪಕರ್ಮವನ್ನು ಆಚರಿಸತಕ್ಕವರು ಪಿಶಾಚಿಭಾವವನ್ನು ಹೊಂದತಕ್ಕವರಾಗುತ್ತಾರೆ. ಅಲ್ಲಿ ಮರಣವನ್ನು ಪಡೆಯುವ ಅವರಿಗೂ ಪುನರ್ಜನ್ಮವು ಇರುವುದಿಲ್ಲ. ಆದಕಾರಣದ ದೆಸೆಯಿಂದ ಸ್ವರ್ಗದಲ್ಲಿ ಸಹಸ್ರ ಇಂದ್ರಪದವಿಯನ್ನು ಹೊಂದುವುದಕ್ಕಿಂತಲೂ ಕಾಶಿಯಲ್ಲಿ ಸಹಸ್ರಪಾಪ ಕರ್ಮಗಳನ್ನಾಚರಿಸಿ ಪಿಶಾಚಿ ಭಾವವನ್ನು ಹೊಂದುವುದಾದರೂ ಭಕ್ತಜನರಿಗೆ ಲೇಸಾಗಿರುತ್ತದೆ.

೭೭. ಯಾವ ಸ್ಥಳದಲ್ಲಿ ತ್ರಿವಿಷ್ಟಪನೂ, ವಿಶ್ವೇಶ್ವರನೂ, ಓಂಕಾರೇಶ್ವರನೂ ನೆಲಸಿರುವರೋ ಆ ದಿವ್ಯ ಕ್ಷೇತ್ರದ ಸ್ಥಳದಲ್ಲಿ ಮರಣ ಹೊಂದಿದವರು ಸಂಸಾರವೆಂಬ ಬಂಧನಕ್ಕೆ ಒಳಗಾಗುವುದಿಲ್ಲವು.

೭೮. ಶಿವನು ಕ್ಷೇತ್ರಮಾಹಾತ್ಮ್ಯೆಯನ್ನು ಮೇಲೆಹೇಳಿದಂತೆ ಸಂಕ್ಷೇಪವಾಗಿ ಹೇಳಿ, ಗಣೇಶ್ವರರನ್ನು ಅಲ್ಲಿಯೇ ಬಿಟ್ಟು, ಪಾರ್ವತಿಗೆ ಉದ್ಯಾನವನವನ್ನು ತೋರಿಸಿದನು. (ಉದ್ಯಾನವನವೆಂದರೆ ಇಲ್ಲಿ ಕ್ರೀಡಾಗೃಹವೆಂದು ಅರ್ಥವು.)

೭೯. ಅದೇ ಉದ್ಯಾನವನದಲ್ಲಿ ಎಲ್ಲಬಗೆಯ ಕಾರ್ಯದ ಆದಿಯಲ್ಲಿ ತನ್ನನ್ನು ಪೂಜಿಸುವ ದೇವತೆಗಳಿಗೆ ವಿಘ್ನವನ್ನು ಯಾವನು ನಾಶಮಾಡತಕ್ಕವನಾಗಿರುವನೋ, ಮತ್ತು ಹಾಗೆ ಪೂಜಿಸದ ಅಸುರರಿಗೆ ವಿಘ್ನವನ್ನು ಕೊಡತಕ್ಕವನಾಗಿರುವನೋ, ಅಂಥಾ ಗಣಪತಿಯು ಜನ್ಮವನ್ನು ತಾಳಿದನು.

ದೈತ್ಯಾನಾಂ ವಿಷ್ಣುರೂಪಾರ್ಥ ಮುನಿಘ್ನಾಯ ದಿವೌಕಸಾಂ ।
ಏತದ್ವಃ ಕಥಿತಂ ಸರ್ವಂ ಕಥಾಸರ್ವಸ್ವ ಮುತ್ತಮಂ ॥೮೦॥
ಯಥಾ ಶ್ರುತಂ ಮಯಾ ಸರ್ವಂ ಪ್ರಸಾದಾದ್ವಃ ಸುಶೋಭನಂ ॥೮೧॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಪಾರ್ವತೀವಿವಾಹವರ್ಣನಂ ನಾಮ ದ್ವ್ಯಧಿಕ ಶತತಮೋಽಧ್ಯಾಯಃ

---

೮೦–೮೧. ಈ ಪುಣ್ಯತಮವಾದ ಕಥೆಯನ್ನೂ ವ್ಯಾಸರ ಅನುಗ್ರಹದಿಂದ ನಾನು ಕೇಳಿದ್ದರೀತಿಯಲ್ಲಿಯೇ ನಿಮಗೂ ಎಲ್ಲವನ್ನೂ ಹೇಳಿರುತ್ತೇನೆ.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಪಾರ್ವತೀವಿವಾಹವರ್ಣನವೆಂಬ ನೂರುಮೂರನೆಯ ಅಧ್ಯಾಯವು ಮುಗಿದುದು.

अथ लिंगमहापुराणे पूर्वभागे
चतुरधिक शततमोऽध्यायः

ಋಷಯ ಊಚುಃ
ಕಥಂ ವಿನಾಯಕೋ ಜಾತೋ ಗಜವಕ್ತ್ರೋ ಗಣೇಶ್ವರಃ ।
ಕಥಂ ಪ್ರಭಾವಸ್ತಸ್ಯೈವಂ ಸೂತ ವಕ್ತುಮಿಹಾರ್ಹಸಿ ॥ ೧ ॥
ಏತಸ್ಮಿನ್ನಂತರೇ ದೇವಾಃ ಸೇಂದ್ರೋಪೇಂದ್ರಾಃ ಸಮೇತ್ಯ ತೇ ।
ಧರ್ಮವಿಘ್ನಂ ತದಾ ಕರ್ತುಂ ದೈತ್ಯಾನಾಮಭವನ್ ದ್ವಿಜಾಃ ॥ ೨ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರುನಾಲ್ಕನೆಯ
ಅಧ್ಯಾಯವು.

೧. ಋಷಿಗಳು ಹೇಳಿದರು :—ಓ ಸೂತಮಹರ್ಷಿಯೇ, ಪ್ರಮಥ ಗಣಗಳಿಗೆ ಪತಿಯಾಗಿಯೂ, ಗಜದಮುಖದಂತೆ ಮುಖವುಳ್ಳವನಾಗಿಯೂ, ಇರುವ ವಿನಾಯಕನು ಯಾವ ಪ್ರಕಾರದಿಂದ ಜನ್ಮವನ್ನು ತಾಳಿದನು ? ಮತ್ತು ಅವನು ಹಿಂದೆ ಹೇಳಿದರೀತಿಯಿಂದ ಯಾವರೀತಿಯಲ್ಲಿ ಲೋಕಾತಿಶಯವಾದ ಪ್ರಭಾವದಿಂದ ಕೂಡಿರುವವನಾದನು? ಎಂಬ ವಿಷಯವನ್ನು ನಮ್ಮಗಳಿಗೆ ತಿಳಿಸುವವನಾಗು ಎಂದು ಮೇಲೆ ಹೇಳಿದರೀತಿಯಲ್ಲಿ ಸೂತನನ್ನು ಪ್ರಾರ್ಥಿಸಲು,

೨. ಸೂತನು ಹೇಳಿದನು :—ಎಲೈ ಬ್ರಾಹ್ಮಣರೇ, ಶಿವನ ಮತ್ತು ಪಾರ್ವತೀದೇವಿಯ ವಿಹಾರವು ಮುಗಿಯುವ ವೇಳೆಯಲ್ಲಿ ದೇವತೆಗಳು ಇಂದ್ರನಿಂದಲೂ, ವಿಷ್ಣುವಿನಿಂದಲೂ, ಕೂಡಿದವರಾಗಿ ರಾಕ್ಷಸರಿಗೆ ಧರ್ಮ ವಿಘ್ನವನ್ನುಂಟುಮಾಡಲು ಉದ್ಯುಕ್ತರಾದರು. ತಮ್ಮತಮ್ಮೊಳಗೇ ರಾಕ್ಷಸರ ಪ್ರಭಾವಕಾರಣವನ್ನು ಚರ್ಚಿಸತೊಡಗಿದರೆಂದರ್ಥವು.

ಅಸುರಾ ಯಾತುಧಾನಾಶ್ಚ ರಾಕ್ಷಸಾಃ ಕ್ರೂರಕರ್ಮಿಣಃ ।
ತಾಮಸಾಶ್ಚ ತಥಾ ಚಾನ್ಯೇ ರಾಜಸಾಶ್ಚ ತಥಾ ಭುವಿ ॥ ೩ ॥

ಅವಿಘ್ನ ಯಜ್ಞದಾನಾದ್ಯೈಃ ಸಮಭ್ಯರ್ಚ್ಯ ಮಹೇಶ್ವರಂ ।
ಬ್ರಹ್ಮಾಣಂ ಚ ಹರಿಂ ವಿಪ್ರಾಃ ಲಬ್ಧೇಪ್ಸಿತವರಾಃ ಯತಃ ॥ ೪ ॥

ತತೋಽಸ್ಮಾಕಂ ಸುರಶ್ರೇಷ್ಠಾಃ ಸದಾಽವಿಜಯ ಸಂಭವಃ ।
ತೇಷಾಂ ತತಸ್ತು ವಿಘ್ನಾರ್ಥಂ ಅವಿಘ್ನಾಯ ದಿವೌಕಸಾಂ ॥ ೫ ॥

ಪುತ್ರಾರ್ಥಂ ಚೈವ ನಾರೀಣಾಂ ನರಾಣಾಂ ಕರ್ಮಸಿದ್ಧಿದಂ ।
ವಿಘ್ನೇಶಂ ಶಂಕರಂ ದ್ರಷ್ಟುಂ ಗಣಪಂ ಸ್ತೋತುಮರ್ಹಥ ॥ ೬ ॥

ಇತ್ಯುಕ್ತ್ವಾಽನ್ಯೋಽನ್ಯಮನಘಂ ತುಷ್ಟುವುಃ ಶಿವಮೀಶ್ವರಂ ।
ನಮಃ ಸರ್ವಾತ್ಮನೇ ತುಭ್ಯಂ ಸರ್ವಜ್ಞಾಯ ಪಿನಾಕಿನೇ ॥ ೭ ॥

---

೩–೪. ಎಲೈ ದೇವತೆಗಳಿಗೆಲ್ಲರಿಗೂ ಶ್ರೇಷ್ಠರಾದವರೇ, ಕೇಳಿರಿ. ಅಸುರರೂ, ಯಾತುಧಾನರೂ ಕ್ರೂರಕರ್ಮತತ್ಪರರಾದ ರಾಕ್ಷಸರೂ, ಮತ್ತು ರಾಜಸ, ತಾಮಸ ಗುಣಗಳಿಂದ ಯುಕ್ತರಾದಕೆಲವರೂ, ಭೂಲೋಕಗಳಲ್ಲಿ ಯಜ್ಞಗಳಿಂದಲೂ ಮತ್ತು ನಾನಾವಿಧವಾದ ದಾನಗಳಿಂದಲೂ, ಈಶ್ವರನನ್ನೂ ಬ್ರಹ್ಮನನ್ನೂ ಮತ್ತು ವಿಷ್ಣುವನ್ನೂ ನಿರ್ವಿಘ್ನವಾಗಿ ಪೂಜಿಸಿ, ಅವರಿಂದ ವರಗಳನ್ನೂ ಯಾವಕಾರಣದಿಂದ ಇಷ್ಟಾರ್ಥಗಳನ್ನೂ ಪಡೆದರೋ, ಆ ಕಾರಣದ ದೆಸೆಯಿಂದ ನಮಗೆ ಯಾವಾಗಲೂ ಅವರೊಂದಿಗೆ ಯುದ್ಧದಲ್ಲಿ ಪರಾಜಯವಾಗುತ್ತಿರುವುದು.

೫–೬. ಆದ್ದರಿಂದ ಆ ರಾಕ್ಷಸರ ಈ ಧರ್ಮಾಚರಣೆಗೆ ವಿಘ್ನಕ್ಕೋಸ್ಕರವೂ, ದೇವತೆಗಳ ಕಲ್ಯಾಣಕ್ಕೋಸ್ಕರವೂ, ಸ್ತ್ರೀಯರು ಪುತ್ರವತಿಯರಾಗುವುದಕ್ಕೂ, ಮನುಷ್ಯರ ಯಜ್ಞಾದಿಕರ್ಮಗಳ ಸಿದ್ಧಿಯಾಗುವುದಕ್ಕೂ, ವಿಘ್ನೇಶ್ವರನಾದ ಗಣೇಶ್ವರನನ್ನು ಸೃಷ್ಟಿಮಾಡಲು ಈಶ್ವರನನ್ನು ಕುರಿತು ಪ್ರಾರ್ಥಿಸುವವರಾಗಿರಿ.

೭. ಹೀಗೆಂಬುದಾಗಿ ದೇವತೆಗಳು ಅನ್ಯೋನ್ಯವಾಗಿ ವಿಚಾರ ಮಾಡಿ, ಪಾಪರಹಿತನಾದ ಈಶ್ವರನನ್ನು ಮುಂದೆಹೇಳುವ ರೀತಿಯಲ್ಲಿ ಸ್ತೋತ್ರಮಾಡಿದರು.

ಅನಘಾಯ ವಿರಿಂಚಾಯ ದೇವ್ಯಾಃ ಕಾರ್ಯಾರ್ಥದಾಯಿನೇ ।
ಅಕಾಯಯಾರ್ಥಕಾಯಾಯ ಹರೇಃ ಕಾಯಾಪಹಾರಿಣೇ ॥ ೮ ॥

ಕಾಯಾಂತಸ್ಥಾ ಮೃತಾಧಾರ ಮಂಡಲಾವಸ್ಥಿತಾಯ ತೇ ।
ಕೃತಾದಿಭೇದಕಾಲಾಯ ಕಾಲವೇಗಾಯ ತೇ ನಮಃ ॥ ೯ ॥

ಕಾಲಾಗ್ನಿರುದ್ರರೂಪಾಯ ಧರ್ಮಾದ್ಯಷ್ಟಪದಾಯ ಚ ।
ಕಾಲೀವಿಶುದ್ಧದೇಹಾಯ ಕಾಲಿಕಾಕಾರಣಾಯ ತೇ ॥೧೦॥

ಕಾಲ ಕಂಠಾಯ ಮುಖ್ಯಾಯ ವಾಹನಾಯ ವರಾಯ ತೇ ।
ಅಂಬಿಕಾಪತಯೇ ತುಭ್ಯಂ ಹಿರಣ್ಯಪತಯೇ ನಮಃ ॥೧೧॥

---

೮. ಓ ಶಂಕರನೇ, ಸರ್ವಪ್ರಪಂಚ ಸ್ವರೂಪನೂ, ಪಿನಾಕವೆಂಬ ಧನುಸ್ಸನ್ನು ಧರಿಸಿರುವವನೂ, ಸರ್ವವನ್ನೂ ತಿಳಿದಿರುವವನೂ, ಶುದ್ಧನೂ ಬ್ರಹ್ಮಾಂಡವನ್ನು ವಿಶೇಷರೀತಿಯಲ್ಲಿ ರಚಿಸುತ್ತಾ ಅದಕ್ಕೆ ಉತ್ಪಾದಕನೂ, ಪಾರ್ವತಿಯ ತಪಸ್ಸಿನ ಫಲವನ್ನು ಕೊಡುವವನೂ, ವಸ್ತುತಃ ಸ್ಥೂಲವಾದ ಸಗುಣಸಾಕಾರವಾದ ಸ್ವರೂಪವಿಲ್ಲದಿರುವವನೂ, ಧರ್ಮಸಂಸ್ಥಾಪನರೂಪವಾದ ಪ್ರಯೋಜನವನ್ನುದ್ದೇಶಿಸಿ ದೇಹಧಾರಣವನ್ನು ಮಾಡುವವನೂ, ವಿಷ್ಣುವಿನದೇಹವನ್ನೂ ಪ್ರಳಯಕಾಲದಲ್ಲಿ ಅಪಹಾರಮಾಡುವವನೂ, ಆದ ನಿನಗೆ ನಮಸ್ಕಾರಗಳು.

೯. ಓ ಶಿವನೇ, ದೇಹದಲ್ಲಿರುವ ಅಮೃತಬಿಂದುಗಳಿಗೆ ಆಧಾರವಾದ ಮಂಡಲದಲ್ಲಿರುವವನೂ, ಕೃತಾದಿಯುಗಗಳ ಕಾಲಭೇದಕ್ಕೆ ಕಾರಣಭೂತನೂ, ಕಾಲವೇ ವೇಗವಾಗಿ ಉಳ್ಳವನೂ, ಆದ ನಿನಗೆ ನಮಸ್ಕಾರವು.

೧೦-೧೧. ಯಮನೇ ಮೊದಲಾದ ಅಷ್ಟದಿಕ್ಪಾಲಕರಿಗೆ ಎಂಟು ಸ್ಥಾನಗಳನ್ನು ಕಲ್ಪಿಸಿಕೊಟ್ಟವನೂ, ಪ್ರಲಯ ಕಾಲಾಗ್ನಿಯೆಂಬ ರುದ್ರಸ್ವರೂಪನೂ, ಮಹಾಕಾಲನಿಗೆ ಗೌರವರ್ಣಯುಕ್ತವಾದ ದೇಹವನ್ನು ದಯಪಾಲಿಸಿದವನೂ, ಮಹಾ ಕಾಲಿಕಾದೇವಿಗೂ ಉತ್ಪಾದಕನೂ, ಕಂಠದಲ್ಲಿ ಕಾಲಕೂಟ ವಿಷವನ್ನು ಧರಿಸಿದವನೂ, ಎಲ್ಲಕ್ಕಿಂತಲೂ

ಹಿರಣ್ಯ ರೇತಸೇ ಚೈವ ನಮಃ ಶರ್ವಾಯ ಶೂಲಿನೇ ।
ಕಪಾಲದಂಡ ಪಾಶಾಸಿ ಚರ್ಮಾಂಕುಶ ಧರಾಯ ಚ ॥೧೨॥

ಪತಯೇ ಹೈಮವತ್ಯಾಶ್ಚ ಹೇಮಶುಕ್ಲಾಯ ತೇ ನಮಃ ।
ಪೀತಶುಕ್ಲಾಯ ರಕ್ಷಾಽರ್ಥಂ ಸುರಾಣಾಂ ಕೃಷ್ಣವರ್ತ್ಮನೇ ॥೧೩॥

ಪಂಚವರ್ಣಾಯ ಮಹಾಪಂಚ ಯಜ್ಞಾನಾಂ ಫಲದಾಯ ಚ ।
ಪಂಚಾಸ್ಯ ಫಣಿಹಾರಾಯ ಪಂಚಾಕ್ಷರಮಯಾಯ ತೇ ॥೧೪॥

ಪಂಚಧಾ ಪಂಚಕೈವಲ್ಯ ದೇವೈರರ್ಚಿತಮೂರ್ತಯೇ ।
ಪಂಚಾಕ್ಷರದೃಶೇ ತುಭ್ಯಂ ಪರಾತ್ಪರತರಾಯ ಚ ॥೧೫॥

---

ಪ್ರಧಾನನೂ, ಕರ್ಮಫಲವನ್ನು ಕೊಡುವವನೂ, ಸರ್ವಶ್ರೇಷ್ಠನೂ, ಪಾರ್ವತೀಪತಿಯೂ, ಸುವರ್ಣದ ಜನಕನೂ ಐಶ್ವರ್ಯಕ್ಕೆ ಅಧಿಪತಿಯೂ ಆದ ನಿನಗೆ ನಮಸ್ಕಾರವು.

೧೨. ಸುವರ್ಣವೇ ರೇತಸ್ಸಾಗಿ ಉಳ್ಳವನೂ, ಜಗನ್ನಾಶಕನೂ, ಶೂಲವೆಂಬ ಆಯುಧವನ್ನು ಧರಿಸಿರುವವನೂ, ಕಪಾಲ, ದಂಡ, ಕತ್ತಿ, ಗುರಾಣಿ, ಅಂಕುಶ ಪಾಶವೇ ಮೊದಲಾದ ಆಯುಧಗಳನ್ನು ಧರಿಸಿರುವವನೂ, ಪಾರ್ವತೀಪತಿಯೂ, ಸುವರ್ಣದಂತೆ ಪರಿಶುದ್ಧನೂ, ಆಗಿರುವ ನಿನಗೆ ನಮಸ್ಕಾರಗಳು.

೧೩-೧೬. ಅರ್ಧನಾರೀಶ್ವರ ಸ್ವರೂಪನೂ, ದೇವತೆಗಳ ರಕ್ಷಣೆಗೋಸ್ಕರ ಅಗ್ನಿರೂಪವನ್ನು ಧರಿಸಿರುವವನೂ, ವರ್ಣಾಶ್ರಮಧರ್ಮಗಳಿಂದ ಬಹಿರ್ಭೂತನೂ, ಪಂಚಮಹಾಯಜ್ಞಗಳನ್ನೂ ಅನುಷ್ಠಾನ ಮಾಡುವವರಿಗೆ ಫಲವನ್ನು ಕೊಡುವವನೂ, ಐದುಮುಖವುಳ್ಳ ಸರ್ಪಗಳನ್ನು ಹಾರವನ್ನಾಗಿ ಮಾಡಿಕೊಂಡಿರುವವನೂ, ಪಂಚಾಕ್ಷರೀಮಂತ್ರದ ಸ್ವರೂಪನೂ, ರುದ್ರಾದಿದೇವತೆಗಳಿಂದ ಐದುವಿಧವಾಗಿ ಪೂಜಿಸಲ್ಪಡುವವನೂ, ಪಂಚಾಕ್ಷರ ಮಂತ್ರವೇ ಕಣ್ಣಾಗಿ ಉಳ್ಳವನೂ, ಇಂದ್ರಿಯಗಳಿಗಿಂತ ವ್ಯತಿರಕ್ತನಾದವನೂ ಜೀವೇಶ್ವರರಿಬ್ಬರಿಗಿಂತಲೂ ಶ್ರೇಷ್ಠನೂ

ಷೋಡಶಸ್ವರವಕ್ತ್ರಾಂಗ ವಕ್ತ್ರಾಯಾಕ್ಷಾಯ ರೂಪಿಣೇ ।
ಕಾದಿಪಂಚಕ ಹಸ್ತಾಯ ಚಾದಿ ಹಸ್ತಾಯ ತೇ ನಮಃ ॥೧೬॥

ಟಾದಿಪಾದಾಯ ರುದ್ರಾಯ ತಾದಿಪಾದಾಯ ತೇ ನಮಃ ।
ಪಾದಿಮೇಢ್ರಾಯ ಯಾದ್ಯಂಗ ಧಾತು ಸಪ್ತಕ ಧಾರಿಣೇ ॥೧೭॥

ಶಾ(ಸಾ)ಂತಾತ್ಮ ರೂಪಿಣೇ ಸಾಕ್ಷಾತ್ ಕ್ಷದಂತ ಕ್ರೋಧಿನೇ ನಮಃ ।
ಲವರೇಫ ಹಳಾಂಗಾಯ ನಿರಂಗಾಯ ಚ ತೇ ನಮಃ ॥೧೮॥
ಸರ್ವೇಷಾಮೇವ ಭೂತಾನಾಂ ಹೃದಿ ನಿಸ್ಸ್ವನಕಾರಿಣೇ ।
ಭ್ರುವೋರಂತೇ ಸದಾ ಸದ್ಭಿಃ ದೃಷ್ಟಾಯಾತ್ಯಂತಭಾನವೇ ॥೧೯॥

---

ನಾಗಿರುವವನೂ, ವಜ್ರಾಯುಧದೋಪಾದಿಯಲ್ಲಿ ಷೋಡಶಸ್ವರಗಳೇ ಮುಖವಾಗಿ ಉಳ್ಳವನಾಗಿರುವ, (ಅಕಾರಾದಿ ಹದಿನಾರು ಸ್ವರಗಳಲ್ಲಿ ಒಂದೊಂದು ಸ್ವರವೂ ಒಂದೊಂದು ಅವಯವರೂಪದಲ್ಲಿ ವ್ಯವಸ್ಥೆಯನ್ನು ಹೊಂದಿ ಮುಖದ ಸಮಷ್ಟಿರೂಪವಾಗಿರುವುದೆಂದು ತಿಳಿಯತಕ್ಕದ್ದು. ಈ ಅಂಶವನ್ನು ಹಿಂದೆ ಹದಿನೇಳನೆಯ ಅಧ್ಯಾಯದಲ್ಲಿ ವಿವರಿಸಿದೆ.) ಕವರ್ಗ ಚವರ್ಗಗಳೆಂಬ ಎರಡು ವರ್ಣ ವರ್ಗಗಳನ್ನು ಕೈಗಳರೂಪದಲ್ಲಿ ಧರಿಸಿರುವವನೂ, ಆದ ನಿನಗೆ ನಮಸ್ಕಾರಗಳು.

೧೭. ಟವರ್ಗವೇ ಒಂದುಕಾಲಾಗಿ ಉಳ್ಳವನೂ, ತವರ್ಗವೇ ಮತ್ತೊಂದುಪಾದವಾಗಿ ಉಳ್ಳವನೂ, ಪವರ್ಗವೇ ಶಿಶ್ನವಾಗಿ ಉಳ್ಳವನೂ, ಯಕಾರವೇ ಆದಿಯಾದ ಏಳು ವರ್ಣಗಳೇ ದೇಹದಲ್ಲಿರುವ ಪಿತ್ತಾದಿ ಸಪ್ತಧಾತುಗಳನ್ನಾಗಿ ಧರಿಸಿದವನೂ, ಆದ ನಿನಗೆ ನಮಸ್ಕಾರವು. ಯಕಾರಾದಿಯಾಗಿ ಸಕಾರಾಂತವಾಗಿರುವ ವರ್ಣಸ್ವರೂಪನಾದ ನಿನಗೆ ನಮಸ್ಕಾರವು.

೧೮. ಶಕಾರಾದಿ ಮೂರುವರ್ಣಗಳೇ ಆತ್ಮಸ್ವರೂಪವಾಗಿಉಳ್ಳವನೂ, ಕ್ಷಕಾರವೇ ಪ್ರಳಯ ರೂಪವಾಗಿ ಪರಿಣಮಿಸುವ ಕ್ರೋಧರೂಪವಾಗಿ ಉಳ್ಳವನೂ, ಲಕಾರಾದಿಪಂಚಾಕ್ಷರಗಳೇ ಹೃದಯವಾಗಿಉಳ್ಳವನೂ, ಸರ್ವಶರೀರಗಳಿಗೂ ಕಾರಣಭೂತನೂ ಆದ ನಿನಗೆ ನಮಸ್ಕಾರವು.

೧೯–೨೦. ಸಮಸ್ತ ಪ್ರಾಣಿಗಳ ಹೃದಯದಲ್ಲಿ ಎಂದರೆ ಅನಾಹತಚಕ್ರವಿರುವ ಸ್ಥಳಗಳಲ್ಲಿ ಧ್ವನಿಯನ್ನುಂಟುಮಾಡುವವನೂ, ಹುಬ್ಬುಗಳ ಮಧ್ಯ

ಭಾನು ಸೋಮಾಗ್ನಿ ನೇತ್ರಾಯ ಪರಮಾತ್ಮ ಸ್ವರೂಪಿಣೇ।
ಗುಣತ್ರಯೋಽಪರಿಸ್ಥಾಯ ತೀರ್ಥಪಾದಾಯ ತೇ ನಮಃ ॥೨೦॥

ತೀರ್ಥತತ್ವಾಯ ಸಾರಾಯ ತಸ್ಮಾದಪಿ ಪರಾಯ ತೇ।
ಋಗ್ಯಜುಃ ಸಾಮವೇದಾಯ ಓಂಕಾರಾಯ ನಮೋನಮಃ ॥೨೧॥

ಓಂಕಾರೇ ತ್ರಿವಿಧಂ ರೂಪಂ ಆಸ್ಥಾಯೋಽಪರಿವಾಸಿನೇ।
ಪೀತಾಯ ಕೃಷ್ಣವರ್ಣಾಯ ರಕ್ತಾಯಾತ್ಯಂತತೇಜಸೇ ॥೨೨॥

ಸ್ಥಾನಪಂಚಕ ಸಂಸ್ಥಾಯ ಪಂಚಧಾಽಂಡಬಹಿಃಕ್ರಮಾತ್।
ಬ್ರಹ್ಮಣೇ ವಿಷ್ಣವೇ ತುಭ್ಯಂ ಕುಮಾರಾಯ ನಮೋನಮಃ ॥೨೩॥

---

ದಲ್ಲಿ ದೃಷ್ಟಿವಿಶೇಷರೂಪವಾದ ತ್ರಾಟಕಮುದ್ರೆಯಿಂದ ಯೋಗಿಗಳಿಗೆ ಗೋಚರನಾಗುವವನೂ, ಅತ್ಯಂತಪ್ರಕಾಶಕನೂ, ಸೂರ್ಯ, ಚಂದ್ರ ಮತ್ತು ಅಗ್ನಿ, ಈ ಮೂವರೂ ಮೂರುಕಣ್ಣಾಗಿಉಳ್ಳವನೂ, ಪರಮಾತ್ಮನಾದ ಜ್ಞಾನಸ್ವರೂಪನೂ, ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥಾಸ್ವರೂಪವಾದ ಮಾಯೆಯನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವವನೂ, ಸಂಸಾರತಾರಕವಾದ ಪಾದಗಳುಳ್ಳವನೂ, ಆದ ನಿನಗೆ ನಮಸ್ಕಾರವು.

೨೧. ಓ ಸದಾಶಿವನೇ, ಆಧ್ಯಾತ್ಮ ಶಾಸ್ತ್ರದಲ್ಲಿ ಪ್ರತಿಪಾದಿಸಲ್ಪಡುವ ಬ್ರಹ್ಮತತ್ವಸ್ವರೂಪನಾಗಿಯೂ, ಮೋಕ್ಷಸ್ವರೂಪನಾಗಿಯೂ, ಮೋಕ್ಷವನ್ನು ಕೊಡುವವನಾಗಿಯೂ, ಋಗ್ವೇದಾದಿ ಮೂರುವೇದಗಳ ಸ್ವರೂಪನಾಗಿಯೂ, ('' ತಸ್ಯಯಜುರೇವಶಿರಃ'' ಋಗ್ದಕ್ಷಿಣಃ ಪಕ್ಷಃ'' ಸಾಮೋತ್ತರಃ ಪಕ್ಷಃ'' ಎಂಬುದಾಗಿಕೃಷ್ಣಯಜುರ್ವೇದದ ತೈತ್ತಿರೀಯೋಪನಿಷತ್ತಿನಲ್ಲಿ ಹೇಳಿರುತ್ತದೆ.) ಓಂಕಾರಸ್ವರೂಪನೂ ಆದ ನಿನಗೆ ನಮಸ್ಕಾರವು.

೨೨–೨೩. ಓಂಕಾರದಲ್ಲಿ ಬ್ರಹ್ಮಾವಿಷ್ಣುಮಹೇಶ್ವರರರೂಪದಲ್ಲಿದ್ದು ಅದರ ನಾದಾಂತದಲ್ಲಿ ವಾಸಿಸುವವನೂ, (ಸಗುಣೋಪಾಸಕರೂ, ಮತ್ತು ನಿರ್ಗುಣೋಪಾಸಕರೂ, ಓಂಕಾರದಲ್ಲಿ ಬ್ರಹ್ಮದೃಷ್ಟಿಯನ್ನಿಟ್ಟು ಉಪಾಸನೆಯನ್ನು ಮಾಡುವರು. ಆ ಓಂಕಾರವನ್ನು ಉಚ್ಚಾರಣೆ ಮಾಡುವಾಗ ಕೊನೆಯಲ್ಲಿ ತುರೀಯ ಮತ್ತು ತುರೀಯಾತೀತನಾಗಿ ಬ್ರಹ್ಮನು ಗೋಚರನಾಗುತ್ತಾನೆಂದು ಆಧ್ಯಾತ್ಮಶಾಸ್ತ್ರದಲ್ಲಿ ಅಲ್ಲಲ್ಲಿ ಹೇಳಿದೆ.) ಶುಭ್ರ

ಅಂಬಾಯಾಃ ಪರಮೇಶಾಯ ಸರ್ವೋಪರಿ ಚರಾಯ ತೇ।
ಮೂಲಸೂಕ್ಷ್ಮಸ್ವರೂಪಾಯ ಸ್ಥೂಲಸೂಕ್ಷ್ಮಾಯ ತೇ ನಮಃ ॥
ಸರ್ವಸಂಕಲ್ಪಶೂನ್ಯಾಯ ಸರ್ವಸ್ಮಾದ್ರಕ್ಷಿತಾಯ ತೇ।
ಆದಿಮಧ್ಯಾಂತಶೂನ್ಯಾಯ ಚಿತ್ ಸಂಸ್ಥಾಯ ನಮೋನಮಃ ॥೨೫॥
ಯಮಾಗ್ನಿವಾಯುರುದ್ರಾಂಬು ಸೋಮಶಕ್ರನಿಶಾಚರೈಃ।
ದಿಙ್ಮುಖೇ ದಿಙ್ಮುಖೇ ನಿತ್ಯಂ ಸಗಣೈಃ ಪೂಜಿತಾಯ ತೇ ॥೨೬॥
ಸರ್ವೇಷು ಸರ್ವದಾ ಸರ್ವಮಾರ್ಗೇ ಸಂಪೂಜಿತಾಯ ತೇ।
ರುದ್ರಾಯ ರುದ್ರ ನೀಲಾಯ ಕದ್ರುದ್ರಾಯ ಪ್ರಚೇತಸೇ ॥೨೭॥

---

ನಾಗಿಯೂ, ಕಪ್ಪುವರ್ಣವುಳ್ಳವನೂ, ಕೆಂಪುವರ್ಣವುಳ್ಳವನೂ, ಅತ್ಯಂತ ಪ್ರಕಾಶಕನೂ, ಬ್ರಂಹ್ಮಾಂಡದ ಬಹಿರ್ಭಾಗದಲ್ಲಿ ಕ್ರಮವಾಗಿ ಪಂಚ ಭೂತಗಳಲ್ಲಿ ಐದುರೀತಿಯಿಂದ ಆವೃತನಾಗಿರುವವನೂ, ಬ್ರಹ್ಮಸ್ವರೂಪನೂ, ವಿಷ್ಣುಸ್ವರೂಪನೂ ಆದ ನಿನಗೆ ನಮಸ್ಕಾರವು.

೨೪. ಲೋಕಮಾತೆಯಾದ ಪಾರ್ವತಿಯ ಸ್ವಾಮಿಯೂ, ಸರ್ವಶ್ರೇಷ್ಠನೂ, ಸಮಸ್ತವಸ್ತುಗಳಿಗೂ ಕಾರಣವಾದ ಸೂಕ್ಷ್ಮಸ್ವರೂಪ ಉಳ್ಳವನೂ, ಸ್ಥೂಲವಾದ ಪಂಚಮಹಾಭೂತಗಳ ಸೂಕ್ಷ್ಮಸ್ವರೂಪನೂ, ಆದ ನಿನಗೆ ನಮಸ್ಕಾರವು.

೨೫. ಕಾಮಕ್ಕೆ ಕಾರಣವಾದ ಸಂಕಲ್ಪವಿಲ್ಲದವನೂ, ಸರ್ವಪ್ರಾಣಿಗಳಿಗಿಂತಲೂ ಗೂಢನಾಗಿರುವವನೂ, ಉತ್ಪತ್ತಿ, ಸ್ಥಿತಿ, ಲಯಗಳೆಂಬ ಮೂರು ವಿಕಾರಗಳ ಅವಸ್ಥೆಗಳಿಲ್ಲದವನೂ, ಜ್ಞಾನಸ್ವರೂಪದಿಂದಿರುವವನೂ, ಆದ ನಿನಗೆ ಪ್ರಣಾಮವು.

೨೬–೨೭. ತಮ್ಮತಮ್ಮ ಪರಿವಾರದಿಂದೊಡಗೂಡಿರುವ ಯಮ, ಅಗ್ನಿ, ವಾಯು. ರುದ್ರ, ವರುಣ, ಚಂದ್ರ, ಶುಕ್ರ, ಮತ್ತು ಕುಬೇರ, ರಾಕ್ಷಸರೇನು, ಇವರುಗಳಿಂದ ಸರ್ವದಿಗಂತಗಳಲ್ಲಿಯೂ, ಪೂಜಿಸಲ್ಪಡುವವನೂ, ಸರ್ವಮಾರ್ಗಗಳಲ್ಲಿ ಸಮಸ್ತಕಾರ್ಯಗಳಲ್ಲಿ, ಸರ್ವರಿಂದಲೂ, ಪೂಜಿಸಲ್ಪಡುವವನೂ, ರೋಗಗಳನ್ನು ನಿವಾರಿಸುವ ರುದ್ರಸ್ವರೂಪಿಯೂ, ಭಯಂಕರನೂ, ಮರಣಕಾಲದ ದುಃಖವನ್ನು ಕೊಡುವ ಕದ್ರುದ್ರಸ್ವರೂಪನೂ, ಸರ್ವೋತ್ತಮ ಜ್ಞಾನಸ್ವರೂಪಿಯೂ, ಸರ್ವಶ್ರೇಷ್ಠನೂ, ಧೈರ್ಯಶಾಲಿಯೂ, ಭಕ್ತರ ದುಃಖನಾಶಕನೂ, ಆದ ನಿನಗೆ ನಮಸ್ಕಾರಗಳು.

ಮಹೇಶ್ವರಾಯ ಧೀರಾಯ ನಮಃ ಸಾಕ್ಷಾತ್ ಶಿವಾಯ ತೇ ।
ಅಥ ಶೃಣು ಭಗವನ್ ಸ್ತವಛಲೇನ ।
ಕಥಿತಮಜೇಂದ್ರ ಮುಖ್ಯೈಃ ಸುರಾಸುರೇಶ್ಯೈಃ ॥
ಮಖಮದನ ಯಮಾಗ್ನಿ ದಕ್ಷಯಜ್ಞ ।
ಕ್ಷಪಣವಿಚಿತ್ರ ವಿಚೇಷ್ಟಿತಂ ಕ್ಷಮಸ್ವ ॥೨೮॥

॥ ಸೂತ ಉವಾಚ ॥

ಯಃ ಪಠೇತ್ತು ಸ್ತವಂ ಭಕ್ತ್ಯಾ ಶಕ್ರಾಗ್ನಿಪ್ರಮುಖೈಃ ಸುರೈಃ ।
ಕೀರ್ತಿತಂ ಶ್ರಾವಯೇದ್ವಿದ್ವಾನ್ ಸ ಯಾತಿ ಪರಮಾಂ ಗತಿಂ ॥೨೯॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ದೇವಸ್ತುತಿರ್ನಾಮ
ಚತುರಧಿಕಶತತಮೋಽಧ್ಯಾಯಃ

---

೨೮. ಓ ಷಡ್ಗುಣೈಶ್ವರ್ಯಸಂಪನ್ನನಾದ ಶಿವನೇ, ನಾವು ಸ್ತೋತ್ರವೆಂಬ ವ್ಯಾಜದಿಂದ ದಕ್ಷಯಜ್ಞನಾಶ ಮದನದಹನ, ಯಮನಿಗ್ರಹ, ಅಗ್ನಿಗರ್ವಭಂಗವೇ ಮೊದಲಾದ ನಿನ್ನ ವಿಚಿತ್ರವಾದ ಲೀಲೆಗಳನ್ನು ಹೇಳಿದೆವು. ಇದನ್ನು ಬ್ರಹ್ಮ. ಇಂದ್ರ ಮುಂತಾದವರೂ, ದೇವದಾನವರನಾಯಕರಾದರೂ ನಾವೂ ಸಮಗ್ರವಾಗಿ ಹೇಳಲಾರೆವು. ಇದರಿಂದ ನಮ್ಮ ಅಪರಾಧವನ್ನು ಕ್ಷಮಿಸುವವನಾಗು. (ದೇವತೆಗಳು ಈ ಪ್ರಕಾರವಾಗಿ ಶಿವನನ್ನು ಸ್ತೋತ್ರ ಮಾಡಿ ಕೊನೆಯಲ್ಲಿ ಪ್ರಾರ್ಥನೆ ಮಾಡಿದರು.)

೨೯. ಸೂತನು ಹೇಳಿದನು:—ಮೇಲೆ ಹೇಳಿದರೀತಿಯಲ್ಲಿ ಇಂದ್ರಾಗ್ನಿಗಳೇ ಪ್ರಮುಖರಾಗಿ ಉಳ್ಳ ದೇವತೆಗಳಿಂದ ಮಾಡಲ್ಪಟ್ಟ ಈ ಸ್ತೋತ್ರಗಳನ್ನು ಯಾವ ಮನುಜನು ಪಠಿಸುವನೋ ಮತ್ತು ಯಾವನು ಇನ್ನೊಬ್ಬರಿಗೆ ಕೇಳುವಂತೆ ಮಾಡುವನೋ ಅವನು ಮುಕ್ತಿಯನ್ನೈದುವನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ದೇವತೆಗಳು ಮಾಡಿದ
ಶಿವನಸ್ತುತಿಯೆಂಬ ನೂರುನಾಲ್ಕನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे पूर्वभागे
पंचाधिक शततमोऽध्यायः

॥ ಸೂತ ಉವಾಚ ॥

**ಯಥಾ ಸ್ಥಿತಾಃ ಸುರೇಶ್ವರಾಃ ಪ್ರಣಮ್ಯ ಚೈವ ಮೀಶ್ವರಂ।**
**ತದಾಽಂಬಿಕಾ ಪತಿರ್ಭವಃ ಪಿನಾಕಧೃಙ್ಮಹೇಶ್ವರಃ ॥ ೧ ॥**
**ದದೌ ನಿರೀಕ್ಷಣಂ ಕ್ಷಣಾ ದ್ಭವಃ ಸ ತಾನ್ ಸುರೋತ್ತಮಾನ್ ।**
**ಪ್ರಣೇಮು ರಾದರಾದ್ಧರಂ ಸುರಾ ಮುದಾಽಽದ್ರ್ರಲೋಚನಾಃ ॥**
**ಭವಃ ಸುಧಾಽಮೃತೋಪಮೈಃ ನಿರೀಕ್ಷಣೈಃ ನಿರೀಕ್ಷಣಾತ್ ।**
**ತದಾಽಽಹ ಭದ್ರಮಸ್ತು ವಃ ಸುರೇಶ್ವರಾನ್ ಮಹೇಶ್ವರಃ ॥ ೩ ॥**
**ವರಾರ್ಥಮೀಶ ವೀಕ್ಷ್ಯತೇ ಸುರಾ ಗೃಹಂ ಗತಾಸ್ತ್ವಮೇ ।**
**ಪ್ರಣಮ್ಯ ಚಾಹ ವಾಕ್ಪತಿಃ ಪತಿಂ ನಿರೀಕ್ಷ್ಯ ನಿರ್ಭಯಃ ॥ ೪ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರೈದನೆಯ ಅಧ್ಯಾಯವು

೧-೨. ಶ್ರೇಷ್ಠರಾದ ದೇವತೆಗಳು ಹೀಗೆ ಈಶ್ವರನನ್ನು ನಮಸ್ಕರಿಸಿ ಯಾವಾಗ ಮೇಲಕ್ಕೆದ್ದರೋ ಆವಾಗ, ಪಾರ್ವತೀಪತಿಯಾದ ಜಗತ್ಕಾರಣನಾದ ಮತ್ತು ಪಿನಾಕಪಾಣಿಯಾದ ಈಶ್ವರನು ಆ ದೇವತೆಗಳಿಗೆ ಕ್ಷಣಮಾತ್ರದಲ್ಲಿಯೇ ದಿವ್ಯಚಕ್ಷುಸ್ಸನ್ನು ದಯಪಾಲಿಸಿದನು. ಈ ರೀತಿಯಲ್ಲಿ ದಿವ್ಯದರ್ಶನವನ್ನು ಪಡೆದ ದೇವತೆಗಳು ಸಂತೋಷಯುಕ್ತರಾಗಿ ಆದರದಿಂದ ಈಶ್ವರನನ್ನು ಪುನಃ ನಮಸ್ಕರಿಸಿದರು.

೩-೪. ಆಗ ಪರಮೇಶ್ವರನು ಅಮೃತಕ್ಕೆ ಸದೃಶವಾದ ತನ್ನ ಕಣ್ಣುಗಳಿಂದ ದೇವತೆಗಳನ್ನು ನೋಡುವವನಾಗಿ, ನಿಮಗೆ ಕಲ್ಯಾಣವಾಗಲೆಂದು ಅವರನ್ನು ಕುರಿತು ಹರಸಿಹೇಳಿದನು. ಅನಂತರದಲ್ಲಿ ಬೃಹಸ್ಪತಿಯು ಈಶ್ವರನನ್ನು ಕುರಿತು ಭಯರಹಿತನಾಗಿ ಹೀಗೆಂದನು. ಓ ಪ್ರಭುವೇ, ಈ ದೇವತೆಗಳು ನಿನ್ನಿಂದ ಇಷ್ಟಾರ್ಥವನ್ನು ಹೊಂದುವುದಕ್ಕೋಸ್ಕರ ನಿನ್ನ ಸನ್ನಿಧಿಯನ್ನು ಪಡೆದವರಾಗಿರುವುರು. ಅದೇನೆಂದರೆ,

ಸುರೇತರಾದಿಭಿಃ ಸದಾ ಹ್ಯವಿಘ್ನಮರ್ಥಿತೋ ಭವಾನ್ ।
ಸಮಸ್ತ ಕರ್ಮಸಿದ್ಧಯೇ ಸುರಾಪಕಾರ ಕಾರಿಭಿಃ ॥ ೫ ॥

ತತಃ ಪ್ರಸೀದತಾ ದ್ಭವಾನ್ ಸುವಿಘ್ನಕರ್ಮಕಾರಣಂ ।
ಸುರಾಪಕಾರಕಾರಿಣಾ ಮಿಹೈಷ ಏವ ನೋ ವರಃ ॥ ೬ ॥

ತತಸ್ತದಾ ನಿಶಮ್ಯ ವೈ ಪಿನಾಕಧೃಕ್ ಸುರೇಶ್ವರಃ ।
ಗಣೇಶ್ವರಂ ಸುರೇಶ್ವರಂ ವಪುರ್ದಧಾರ ಸಃ ಶಿವಃ ॥ ೭ ॥

ಗಣೇಶ್ವರಾಶ್ಚ ತುಷ್ಟುವುಃ ಸುರೇಶ್ವರಾ ಮಹೇಶ್ವರಂ ।
ಸಮಸ್ತಲೋಕಸಂಭವಂ ಭವಾರ್ತಿಹಾರಿಣಂ ಶುಭಂ ॥ ೮ ॥

---

೫–೬. ಓ ಪ್ರಭುವೇ, ದೇವತೆಗಳಿಗೆ ನಿರಂತರವೂ ಅಪಕಾರವನ್ನೆಸಗುವ ದೈತ್ಯರು ತಮ್ಮ ಸಕಲವಾದ ಕಾಮ್ಯಫಲಗಳ ಸಿದ್ಧಿಗೋಸ್ಕರ ನಿರ್ವಿಘ್ನವಾಗಿ ನಿನ್ನನ್ನು ಉಪಾಸಿಸಿ ಪ್ರಾರ್ಥಿಸಿ ಇಷ್ಟಾರ್ಥವನ್ನು ಪಡೆದವರಾದರು. ಆ ಕಾರಣದಿಂದ ಅಸುರರಿಗೆ ಕರ್ಮವಿಘ್ನ ಉಂಟಾಗುವುದನ್ನು ನೀನು ಅನುಗ್ರಹಿಸುವವನಾಗು. ( ಅಸುರರ ಕರ್ಮಗಳಿಗೆ ಇನ್ನುಮುಂದೆ ವಿಘ್ನವನ್ನುಂಟುಮಾಡೆಂದರ್ಥವು. ) ಇದೇ ನಾವು ಕೇಳಿಕೊಳ್ಳತಕ್ಕ ವರವಾಗಿದೆ. ರಾಕ್ಷಸರು ದುಷ್ಕಾಮನೆಗಳಿಂದ ಮಾಡುವ ತಪಸ್ಸು ಪೂಜಾದಿ ಕರ್ಮಗಳು ನಿರ್ವಿಘ್ನವಾಗಿ ನೆರವೇರಿದರೆ ಅವರು ಅದರಿಂದ ದೇವತೆಗಳಿಗೂ ಇತರರಿಗೂ, ಧರ್ಮಾಚರಣೆಗೂ, ಲೋಕಜಯ ಪರಪೀಡೆ ಇವುಗಳಿಂದ ಅಡ್ಡಿಯನ್ನುಂಟುಮಾಡುವರು. ಅಂತಹ ದುಷ್ಕರ್ಮಗಳು ನೆರವೇರದಂತೆ ಅಡ್ಡಿಪಡಿಸುವುದರಿಂದಲೂ, ಧರ್ಮರಕ್ಷಣೆಯಾಗುವುದೆಂದು ಭಾವವು.

೭–೮. ತರುವಾಯ ಆ ದೇವತೆಗಳ ಪ್ರಾರ್ಥನೆಯನ್ನು ಕೇಳಿ ಅಂಗೀಕರಿಸಿ ಶಿವನು ದೇವತೆಗಳಲ್ಲಿ ಶ್ರೇಷ್ಠನಾದ ಗಣೇಶ್ವರನ ಶರೀರವನ್ನು ಧರಿಸಿದನು. ( ಗಣೇಶನ ರೂಪದಿಂದ ಪಾರ್ವತಿಯ ಗರ್ಭವನ್ನು ಪ್ರವೇಶಿಸಿದನೆಂದರ್ಥವು. ) "ಆತ್ಮಾವೈಪುತ್ರನಾಮಾಸಿ" ಎಂದು ವೇದದಲ್ಲಿ ಹೇಳಿರುತ್ತದೆ. ಆಗ ಶೈಲಾದಿ ಮುಂತಾದ ಗಣೇಶ್ವರರೂ, ಬ್ರಹ್ಮಾದಿದೇವತೆಗಳೂ, ಸಮಸ್ತ ಲೋಕಗಳಿಗೆ ಕಾರಣನಾದ, ಸಂಸಾರ ದುಃಖವನ್ನು ನಾಶಮಾಡುವ ಮತ್ತು ಕಲ್ಯಾಣ ಸ್ವರೂಪನಾದ ಶಿವನನ್ನು ಸ್ತೋತ್ರಮಾಡಿದರು.

ಇಭಾನನಾಶ್ರಿತಂ ವರಂ ತ್ರಿಶೂಲ ಪಾಶ ಧಾರಿಣಂ ।
ಸಮಸ್ತಲೋಕಸಂಭವಂ ಗಜಾನನಂ ತದಾಽಂಬಿಕಾ ॥ ೯ ॥

ದದುಃ ಪುಷ್ಪವರ್ಷಂ ಹಿ ಸಿದ್ಧಾಃ ಮುನೀಂದ್ರಾ ।
ಸ್ತಥಾ ಖೇಚರಾಃ ದೇವಸಂಘಾ ಸ್ತದಾನೀಂ ॥

ತದಾ ತುಷ್ಟುವು ಶ್ಚೇಷ್ಟದಂ ತಂ ಸುರೇಶಾಃ ।
ಪ್ರಣೇಮು ರ್ಗಣೇಶಂ ಮಹೇಶಂ ವಿತಂದ್ರಾಃ ॥೧೦॥

ತದಾ ತಯೋ ರ್ವಿನಿರ್ಗತಃ ಸುಭೈರವಃ ಸುಮೂರ್ತಿಮಾನ್ ।
ಸ್ಥಿತೋ ನನರ್ತ ಬಾಲಕಃ ಸಮಸ್ತಮಂಗಲಾಲಯಃ ॥೧೧॥

ವಿಚಿತ್ರ ವಸ್ತ್ರಭೂಷಣೈ ರಲಂಕೃತೋ ಗಜಾನನೋ ।
ಮಹೇಶ್ವರಸ್ಯ ಪುತ್ರಕೋಽಭಿವಂದ್ಯ ತಾತಮಂಬಿಕಾಂ ॥೧೨॥

---

೯. ಅನಂತರದಲ್ಲಿ ಲೋಕಮಾತೆಯಾದ ಪಾರ್ವತಿಯು ತ್ರಿಶೂಲವನ್ನೂ, ಪಾಶವನ್ನೂ, ಮತ್ತು ಆನೆಯ ಮುಖವನ್ನೂ ಧರಿಸಿರುವ ಸಮಸ್ತ ಲೋಕಗಳಿಗೂ ಕಾರಣನಾದ ಗಣೇಶ್ವರನನ್ನು ಪ್ರಸವಿಸಿದಳು.

೧೦. ಗಣೇಶನ ಜನ್ಮಕಾಲದಲ್ಲಿ ಸಿದ್ಧರೂ, ಮುನಿಶ್ರೇಷ್ಠರೂ, ದೇವತೆಗಳೂ ಮತ್ತು ಚಾರಣರೂ ಪುಷ್ಪವೃಷ್ಟಿಯನ್ನು ಕರೆದರು. ದೇವತೆಗಳು ಇಷ್ಟಾರ್ಥಗಳನ್ನು ಕೊಡುವ ಗಣೇಶನನ್ನು ಆಲಸ್ಯವಿಲ್ಲದವರಾಗಿ ಸ್ತೋತ್ರಮಾಡಿ ಸಂತೋಷಗೊಂಡು ನಮಸ್ಕರಿಸಿದರು.

೧೧–೧೨. ಆಗ ಶಿವ ಪಾರ್ವತಿಯರಿಬ್ಬರಿಂದ ಉತ್ಪನ್ನನಾದವನೂ, ಸಮಸ್ತ ಕಲ್ಯಾಣಗಳಿಗೆ ಆಶ್ರಯನೂ, ಆದ ಆ ಬಾಲಗಣೇಶನು, ಸಾಕ್ಷಾತ್ ಪರಮಶಿವನೇ ಅವತಾರವನ್ನು ಧರಿಸಿರುವನೋ ಎಂಬಂತೆ ತೋರುವವನಾಗಿ, ಈಶ್ವರನನ್ನೂ ಮತ್ತು ಪಾರ್ವತಿಯನ್ನೂ ನಮಸ್ಕರಿಸಿ ಆನಂದದಿಂದ ನರ್ತನವನ್ನು ನೆರವೇರಿಸಿದನು.

ಜಾತಪುತ್ರಂ ಸುತಂ ದೃಷ್ಟ್ವಾ ಚಕಾರ ಭಗವಾನ್ ಭವಃ ।
ಗಜಾನನಾಯ ಕೃತ್ಯಾಂಸ್ತು ಸರ್ವಾನ್ ಸರ್ವೇಶ್ವರಃ ಸ್ವಯಂ ॥೧೩॥
ಆದಾಯ ಚ ಕರಾಭ್ಯಾಂ ಚ ಸುಸುಖಾಭ್ಯಾಂ ಭವಃ ಸ್ವಯಂ ।
ಅಲಿಂಗ್ಯಾಘ್ರಾಯ ಮೂರ್ಧಾನಂ ಮಹಾದೇವೋ ಜಗದ್ಗುರುಃ ॥
ತವಾವತಾರೋ ದೈತ್ಯಾನಾಂ ವಿನಾಶಾಯ ಮಮಾತ್ಮಜ ।
ದೇವಾನಾಮುಪಕಾರಾರ್ಥಂ ದ್ವಿಜಾನಾಂ ಬ್ರಹ್ಮವಾದಿನಾಂ ॥೧೫॥
ಯಜ್ಞಶ್ಚ ದಕ್ಷಿಣಾಹೀನಃ ಕೃತೋ ಯೇನ ಮಹೀತಲೇ ।
ತಸ್ಯ ಧರ್ಮಸ್ಯ ವಿಘ್ನಂ ಚ ಕುರು ಸ್ವರ್ಗಪಥೇ ಸ್ಥಿತಃ ॥೧೬॥

---

೧೩. ಈ ರೀತಿಯಲ್ಲಿ ಜನ್ಮವನ್ನೆತ್ತಿದ ಆ ಪುತ್ರನನ್ನುನೋಡಿ ಭಗವಂತನಾದ ಶಿವನು ಗಜಾನನನಿಗೆ ಮಕ್ಕಳಿಗೆ ಮಾಡತಕ್ಕ ಜಾತಕರ್ಮಾದಿ ಎಲ್ಲ ಸಂಸ್ಕಾರಗಳನ್ನೂ ತಾನೇ ನೆರವೇರಿಸಿದನು.

೧೪. ಶಿವನು ತಾನೇ ಗಣೇಶನಾದ ಪುತ್ರನನ್ನು ಸುಖಕರವಾದ ತನ್ನ ಕೈಗಳಿಂದ ಎತ್ತಿಕೊಂಡು ಆಲಿಂಗಿಸಿ, ನೆತ್ತಿಯನ್ನು ಆಘ್ರಾಣಮಾಡಿ ಪುತ್ರನನ್ನು ಕುರಿತು ಮುಂದೆ ಹೇಳುವರೀತಿಯಲ್ಲಿ ಹೇಳಿದನು.

೧೫. ಎಲೈ ಪುತ್ರನೇ, ಬ್ರಹ್ಮವಿತ್ತುಗಳಾದ ಬ್ರಾಹ್ಮಣರ ಮತ್ತು ದೇವತೆಗಳ ಉಪಕಾರಾರ್ಥವಾಗಿಯೂ, ಮತ್ತು ರಾಕ್ಷಸರ ನಾಶಕ್ಕೋಸ್ಕರವೂ, ನಿನ್ನ ಅವತಾರವು ಉಂಟಾಗಿರುತ್ತದೆ.

೧೬. ನೀನು ಸ್ವರ್ಗದ ಮಾರ್ಗದಲ್ಲಿ ಇರುವವನಾಗಿ ಭೂಲೋಕದಲ್ಲಿ ದಕ್ಷಿಣೆಯಿಂದ ರಹಿತವಾದ ಯಜ್ಞವನ್ನು ಯಾರು ಅನುಷ್ಠಾನ ಮಾಡುತ್ತಾರೋ, ಅವರ ಅಧರ್ಮಕರ್ಮಕ್ಕೆ ವಿಘ್ನವನ್ನುಂಟುಮಾಡುವವನಾಗು.

ಅಧ್ಯಾಪನಂ ಚಾಧ್ಯಯನಂ ವ್ಯಾಖ್ಯಾನಂ ಕರ್ಮ ಏವ ಚ ।
ಯೋಽನ್ಯಾಯತಃ ಕರೋತ್ಯಸ್ಮಿಂಸ್ತಸ್ಯ ಪ್ರಾಣಾನ್ ಸದಾ ಹರ ॥೧೭॥

ವರ್ಣಾಚ್ಚ್ಯುತಾನಾಂ ನಾರೀಣಾಂ ನರಾಣಾಂ ನರಪುಂಗವ ।
ಸ್ವಧರ್ಮರಹಿತಾನಾಂ ಚ ಪ್ರಾಣಾನಪಹರ ಪ್ರಭೋ ॥೧೮॥

ಯಾಃ ಸ್ತ್ರಿಯಸ್ತ್ವಾಂ ಸದಾ ಕಾಲಂ ಪುರುಷಾಶ್ಚ ವಿನಾಯಕ ।
ಯಜಂತಿ ತಾಸಾಂ ತೇಷಾಂ ಚ ತ್ವತ್ಸಾಮ್ಯಂ ದಾತುಮರ್ಹಸಿ ॥೧೯॥

ತ್ವಂ ಭಕ್ತಾನ್ಸರ್ವಯತ್ನೇನ ರಕ್ಷ ಬಾಲಗಣೇಶ್ವರ ।
ಯೌವನಸ್ಥಾಂಶ್ಚ ವೃದ್ಧಾಂಶ್ಚ ಇಹಾಮುತ್ರ ಚ ಪೂಜಿತಃ ॥೨೦॥

ಜಗತ್ತ್ರಯೇಽತ್ರ ಸರ್ವತ್ರ ತ್ವಂ ಹಿ ವಿಘ್ನಗಣೇಶ್ವರಃ ।
ಸಂಪೂಜ್ಯೋ ವಂದನೀಯಶ್ಚ ಭವಿಷ್ಯಸಿ ನ ಸಂಶಯಃ ॥೨೧॥

---

೧೭. ಈ ಭೂಲೋಕದಲ್ಲಿ ಯಾವ ಮನುಷ್ಯನು ವೇದಮಂತ್ರಗಳ ಹೇಳಿಕೊಡುವುದನ್ನೂ, ಅಧ್ಯಯನವನ್ನು ಮಾಡುವುದನ್ನೂ, ವ್ಯಾಖ್ಯಾನ ಮಾಡುವುದನ್ನೂ, ಕರ್ಮಾನುಷ್ಠಾನ ಮಾಡುವುದನ್ನೂ, ಅನ್ಯಾಯ ಮಾರ್ಗದಲ್ಲಿ ಮಾಡುವನೋ ಅವನಪ್ರಾಣಗಳನ್ನು ಯಾವಾಗಲೂ ಹರಣ ಮಾಡುವವನಾಗು.

೧೮. ಎಲೈ ಪ್ರಭುವೇ, ಜಾತಿಭ್ರಷ್ಟರಾದ ಸ್ತ್ರೀಯರನ್ನೂ, ವರ್ಣಾಶ್ರಮ ಧರ್ಮಗಳಿಂದ ರಹಿತರಾದ ಪುರುಷರನ್ನೂ, ನಾಶಮಾಡುವವನಾಗು.

೧೯. ಓ ವಿನಾಯಕನೇ, ಯಾವಸ್ತ್ರೀಯರು ಮತ್ತು ಪುರುಷರು ನಿನ್ನನ್ನು ಯಾವಾಗಲೂ ಪೂಜಿಸುತ್ತಾರೋ, ಅವರಿಗೆ ನಿನ್ನ ಸಾರೂಪ್ಯವನ್ನು ದಯಪಾಲಿಸುವವನಾಗು.

೨೦. ಎಲೈ ಬಾಲಗಣೇಶನೇ, ಈ ಲೋಕದಲ್ಲಿ ಯಾವ ತರುಣರು ಮತ್ತು ವೃದ್ಧರು ನಿನ್ನನ್ನು ಪೂಜಿಸುವರೋ ಅವರನ್ನು ಈ ಲೋಕದಲ್ಲೂ ಪರಲೋಕಗಳಲ್ಲೂ ಸರ್ವಪ್ರಯತ್ನದಿಂದಲೂ ರಕ್ಷಿಸುವವನಾಗು.

೨೧. ಓ ವಿಘ್ನೇಶ್ವರನೇ, ನೀನು ಈ ಮೂರು ಲೋಕದಲ್ಲಿಯೂ, ಇಲ್ಲಿಯೂ, ಮತ್ತು ಎಲ್ಲಾ ಕಡೆಯಲ್ಲಿಯೂ, ಪೂಜಾರ್ಹನೂ, ಮತ್ತು ನಮಸ್ಕಾರಾರ್ಹನೂ, ಆಗುವೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ.

ಮಾಂ ಚ ನಾರಾಯಣಂ ವಾಽಪಿ ಬ್ರಹ್ಮಾಣಮಪಿ ಪುತ್ರಕ ।
ಯಜಂತಿ ಯಜ್ಞೈರ್ವಾ ವಿಪ್ರೈಃ ಅಗ್ರೇ ಪೂಜ್ಯೋ ಭವಿಷ್ಯಸಿ ॥೨೨॥

ತ್ವಾಮನಭ್ಯರ್ಚ್ಯ ಕಲ್ಯಾಣಂ ಶ್ರೌತಂ ಸ್ಮಾರ್ತಂ ಚ ಲೌಕಿಕಂ ।
ಕುರುತೇ ತಸ್ಯ ಕಲ್ಯಾಣಮಕಲ್ಯಾಣಂ ಭವಿಷ್ಯತಿ । ॥೨೩॥

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈಶ್ಚೈವ ಗಜಾನನ ।
ಸಂಪೂಜ್ಯ ಸರ್ವಸಿದ್ಧ್ಯರ್ಥಂ ಭಕ್ಷ್ಯಭೋಜ್ಯಾದಿಭಿಃ ಶುಭೈಃ ॥೨೪॥

ತ್ವಾಂ ಗಂಧಪುಷ್ಪಧೂಪಾದ್ಯೈಃ ಅನಭ್ಯರ್ಚ್ಯ ಜಗತ್ತ್ರಯೇ ।
ದೇವೈರಪಿ ತಥಾಽನ್ಯೈಶ್ಚ ಲಬ್ಧವ್ಯಂ ನಾಸ್ತಿ ಕುತ್ರಚಿತ್ ॥೨೫॥

ಅಭ್ಯರ್ಚಯಂತಿ ಯೇ ಲೋಕಾ ಮಾನವಾಸ್ತ್ವಾಂ ವಿನಾಯಕಂ ।
ತೇ ಚಾರ್ಚನೀಯಾಃ ಶಕ್ರಾದ್ಯೈಃ ಭವಿಷ್ಯಂತಿ ನ ಸಂಶಯಃ ॥೨೬॥

---

೨೨. ಎಲೈ ಪುತ್ರನೇ, ನನ್ನನ್ನಾಗಲಿ ವಿಷ್ಣುವನ್ನಾಗಲಿ, ಅಥವಾ ಈಶ್ವರನನ್ನಾಗಲೀ, ಯಾರು ಪೂಜಿಸುವರೋ ಅಥವಾ ನಮ್ಮ ಅನುಗ್ರಹಕ್ಕಾಗಿ ಯಜ್ಞಗಳನ್ನು ಅನುಷ್ಠಾನಮಾಡುವರೋ, ಅಂತಹ ಬ್ರಾಹ್ಮಣರಿಂದ ನೀನು ಮೊದಲು ಪೂಜಿಸಲ್ಪಡುವೆ.

೨೩. ನಿನ್ನನ್ನು ಪೂಜಿಸದೇ ಶ್ರೌತ ಸ್ಮಾರ್ತ ಕರ್ಮಗಳನ್ನೂ ಮತ್ತು ವಿವಾಹಾದಿ ಮಂಗಳಕರವಾದ ಕರ್ಮಗಳನ್ನೂ ಯಾರು ಅನುಷ್ಠಾನ ಮಾಡುವರೋ ಅವರ ಕಾರ್ಯವು ಮಂಗಳಕರವಾದರೂ, ಅಮಂಗಳವಾಗಿಯೇ ಪರಿಣಮಿಸುವುದು.

೨೪–೨೫. ಎಲೈ ಗಜಾನನೇ, ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಮತ್ತು ಶೂದ್ರರೂ, ಮೊದಲು ನಿನ್ನನ್ನು ಗಂಧ ಪುಷ್ಪ ಧೂಪ ದೀಪಗಳಿಂದ ವಿಧಿವತ್ತಾಗಿ ಅರ್ಚಿಸದೇ ಬೇರೆಯ ದೇವತೆಗಳನ್ನು ಅರ್ಚಿಸಿದರೆ ಅವರಿಗೆ ಇಷ್ಟಾರ್ಥಗಳು ದೊರಕಲಾರವು.

೨೬. ಯಾರು ವಿನಾಯಕನನ್ನು ಪೂಜಿಸುವರೋ ಅವರೂ ಇಂದ್ರಾದಿ ದೇವತೆಗಳಿಂದಲೂ ಪೂಜಿಸಲ್ಪಡುವರು! ಈ ವಿಷಯದಲ್ಲಿ ಯಾವ ಸಂಶಯವೂ ಇರುವುದಿಲ್ಲವು.

ಅಜಂ ಹರಿಂ ಚ ಮಾಂ ವಾಽಪಿ ಶಕ್ರಮನ್ಯಾನ್ ಸುರಾನಪಿ ।
ವಿಘ್ನೈರ್ಬಾಧಯಸಿ ತ್ವಾಂ ಚೇನ್ನಾರ್ಚಯಂತಿ ಫಲಾರ್ಥಿನಃ ॥೨೭॥
ಸಸರ್ಜ ಚ ತದಾ ವಿಘ್ನಗಣಂ ಗಣಪತಿಃ ಪ್ರಭುಃ ।
ಗಣೈಃ ಸಾರ್ಧಂ ನಮಸ್ಕೃತ್ವಾಽಪ್ಯತಿಷ್ಠತ್ತಸ್ಯ ಚಾಗ್ರತಃ ॥೨೮॥
ತದಾ ಪ್ರಭೃತಿ ಲೋಕೇಽಸ್ಮಿನ್ ಪೂಜಯಂತಿ ಗಣೇಶ್ವರಂ ।
ದೈತ್ಯಾನಾಂ ಧರ್ಮವಿಘ್ನಂ ಚ ಚಕಾರಾಸೌ ಗಣೇಶ್ವರಃ ॥೨೯॥
ಏತದ್ವಃ ಕಥಿತಂ ಸರ್ವಂ ಸ್ಕಂದಾಗ್ರಜಸಮುದ್ಭವಂ ।
ಯಃ ಪಠೇಚ್ಛೃಣುಯಾದ್ವಾಽಪಿ ಶ್ರಾವಯೇದ್ವಾ ಸುಖೀ ಭವೇತ್ ॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ವಿನಾಯಕೋತ್ಪತ್ತಿರ್ನಾಮ ಪಂಚಾಧಿಕ ಶತತಮೋಽಧ್ಯಾಯಃ

---

೨೭. ಯಾರು ಫಲಾಪೇಕ್ಷೆಯುಳ್ಳವರಾಗಿ ಮೊದಲು ನಿನ್ನನ್ನು ಪೂಜಿಸದೇ ಬ್ರಹ್ಮನನ್ನೇ ಆಗಲಿ, ವಿಷ್ಣುವನ್ನಾಗಲಿ, ಅಥವಾ ನನ್ನನ್ನಾಗಲಿ ಪೂಜಿಸುವರೋ ಅವರಿಗೆ ನೀನು ವಿಘ್ನವನ್ನುಂಟುಮಾಡಲು ಅರ್ಹನಾಗಿರುತ್ತೀಯೆ. (ಹಾಗಿಲ್ಲದಿದ್ದರೆ ಅವರು ನಿನ್ನನ್ನು ಪೂಜೆಮಾಡುವುದನ್ನೇ ಮರೆತು ಬಿಡಬಹುದು.)

೨೮. ಈಶ್ವರನು ಹೀಗೆಂದು ಹೇಳಲು ಗಣೇಶ್ವರನಾದ ಗಜಾನನು ವಿಘ್ನಗಳಸಮೂಹಗಳನ್ನು ಸೃಷ್ಟಿಸಿ ಆ ಗಣಗಳೊಂದಿಗೆ ಯುಕ್ತನಾಗಿ ತಂದೆಯನ್ನು ನಮಸ್ಕರಿಸಿ ಮುಂಭಾಗದಲ್ಲಿಯೇ ನಿಂತನು.

೨೯. ಆ ಕಾಲದಿಂದ ಮೊದಲುಗೊಂಡು ಈ ಲೋಕದಲ್ಲಿ ಗಣೇಶ್ವರನನ್ನು ಸರ್ವರೂ ಪೂಜಿಸುತ್ತಿರುವರು. ಗಣೇಶ್ವರನೂ ರಾಕ್ಷಸರಿಗೆ ಧರ್ಮವಿಘ್ನವನ್ನುಂಟುಮಾಡಲು ಪ್ರಾರಂಭಿಸಿದನು.

೩೦. ಎಲೈ ಋಷಿಗಳೇ, ನಿಮಗೆ ನಾನು ಹೇಳಿರುವ ಈ ಷಣ್ಮುಖನ ಅಗ್ರಜನಾದ ವಿನಾಯಕನ ಉತ್ಪತ್ತಿಯ ಪ್ರಕಾರವನ್ನು ಯಾರುಪಠಿಸುವರೋ, ಯಾರು ಕೇಳುವರೋ ಮತ್ತು ಯಾರು ಕೇಳಿಸುವಂತೆ ಓದಿ ಹೇಳುವರೋ ಅವರು ಎಲ್ಲರೂ ಸುಖಿಗಳಾಗುವರು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ವಿನಾಯಕನ ಉತ್ಪತ್ತಿಯ ವಿವರಣೆ ಯೆಂಬ ನೂರೈದನೆಯ ಅಧ್ಯಾಯವು ಮುಗಿದುದು

अथ श्री लिंगमहापुराणे पूर्वभागे
षडधिक शततमोऽध्यायः

ನೃತ್ಯಾರಂಭಃ ಕಥಂ ಶಂಭೋಃ ಕಿಮರ್ಥಂ ವಾ ಯಥಾತಥಂ ।
ವಕ್ತುಮರ್ಹಸಿ ಚಾಸ್ಮಾಕಂ ಶ್ರುತಃ ಸ್ಕಂದಾಗ್ರಜೋದ್ಭವಃ ॥ ೧ ॥

॥ ಸೂತ ಉವಾಚ ॥

ದಾರುಕೋಽಸುರಸಂಭೂತ ಸ್ತಪಸಾ ಲಬ್ಧವಿಕ್ರಮಃ ।
ಸೂದಯಾಮಾಸ ಕಾಲಾಗ್ನಿರಿವ ದೇವಾನ್ ದ್ವಿಜೋತ್ತಮಾನ್ ॥
ದಾರುಕೇನ ತದಾ ದೇವಾ ಸ್ತಾಡಿತಾಃ ಪೀಡಿತಾ ಭೃಶಂ ।
ಬ್ರಹ್ಮಾಣಂ ಚ ತಥೇಶಾನಂ ಕುಮಾರಂ ವಿಷ್ಣುಮೇವ ಚ ॥ ೩ ॥

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರಾರನೆಯ ಅಧ್ಯಾಯವು

೧. ಋಷಿಗಳು ಹೇಳಿದರು:—ಓ ಸೂತ ಮಹರ್ಷಿಯೇ, ಈ ಹಿಂದೆ ಹೇಳಿದ ಗಣೇಶನ ಉತ್ಪತ್ತಿಯಕ್ರಮವನ್ನು ಕೇಳಿದೆವು. ಈಗ ಪರಮೇಶ್ವರನ ನೃತ್ಯಾರಂಭವು ಏತಕ್ಕೋಸ್ಕರವಾಗಿ ಮತ್ತು ಯಾವ ಪ್ರಕಾರದಿಂದ ಆಯಿತು? ಎಂಬ ವಿಷಯವನ್ನು ನಮ್ಮಗಳಿಗೆ ಯಥಾ ವೃತ್ತವಾಗಿ ಹೇಳುವವನಾಗು. ಹೀಗೆಂದು ಪ್ರಾರ್ಥಿಸಿಕೊಂಡ ಋಷಿಗಳ ಕೋರಿಕೆಯನ್ನು ಅಂಗೀಕರಿಸಿ,

೨. ಸೂತ ಮಹರ್ಷಿಯು ಹೇಳಿದನು:—ರಾಕ್ಷಸ ವಂಶೋತ್ಪನ್ನ ನಾದ ದಾರುಕನೆಂಬುವನು ತಪಸ್ಸಿನಿಂದ ಉಂಟಾದ ಮಹಿಮೆಯಿಂದ ಪರಾಕ್ರಮವನು ಪಡೆದು ಪ್ರಲಯಕಾಲದ ಅಗ್ನಿಯೋಪಾದಿಯಲ್ಲಿ ಬ್ರಾಹ್ಮಣೋತ್ತಮರನ್ನೂ ಮತ್ತು ದೇವತೆಗಳನ್ನೂ ಪರಾಭವಗೊಳಿಸಿದನು.

೩–೫. ಈ ಪ್ರಕಾರವಾಗಿ ದಾರುಕನಿಂದ ತೊಂದರೆಗೊಳಗಾದ ಆ ದೇವತೆಗಳು ಬ್ರಹ್ಮನನ್ನೂ, ಈಶ್ವರನನ್ನೂ, ಷಣ್ಮುಖನನ್ನೂ, ವಿಷ್ಣು ವನ್ನೂ, ಮತ್ತು ಇಂದ್ರನನ್ನೂ ಪಡೆದವರಾಗಿ, ಆ ರಾಕ್ಷಸನು ಸ್ತ್ರೀಯು

ಯಮ ಮಿಂದ್ರ ಮನುಪ್ರಾಪ್ಯ ಸ್ತ್ರೀವಧ್ಯ ಇತಿ ಚಾಸುರಃ ।
ಸ್ತ್ರೀರೂಪಧಾರಿಭಿಃ ಸ್ತುತ್ಯೈಃ ಬ್ರಹ್ಮಾದ್ಯೈಃ ಯುಧಿ ಸಂಸ್ಥಿತೈಃ ॥ ೪ ॥
ಬಾಧಿತಾ ಸ್ತೇನ ತೇ ಸರ್ವೇ ಬ್ರಹ್ಮಾಣಂ ಪ್ರಾಪ್ಯ ವೈ ದ್ವಿಜಾಃ ।
ವಿಜ್ಞಾಪ್ಯ ತಸ್ಮೈ ತತ್ಸರ್ವಂ ತೇನ ಸಾರ್ಧಮುಮಾಪತಿಂ ॥ ೫ ॥
ಸಂಪ್ರಾಪ್ಯ ತುಷ್ಟುವುಃ ಸರ್ವೇ ಪಿತಾಮಹ ಪುರೋಗಮಾಃ ।
ಬ್ರಹ್ಮಾ ಪ್ರಾಪ್ಯ ಚ ದೇವೇಶಂ ಪ್ರಣಮ್ಯ ಬಹುಧಾ ನತಃ ॥ ೬ ॥
ದಾರುಣೋ ಭಗವನ್ ದಾರುಃ ಪೂರ್ವಂ ತೇನ ವಿನಿರ್ಜಿತಾಃ ।
ನಿಹತ್ಯ ದಾರುಕಂ ದೈತ್ಯಂ ಸ್ತ್ರೀವಧ್ಯಂ ತ್ರಾತುಮರ್ಹಸಿ ॥ ೭ ॥

---

ಮೂಲಕ ವಧ್ಯನು ಎಂದು ನಿಶ್ಚಯಿಸಿ ಸ್ತ್ರೀರೂಪವನ್ನೂ ಧಾರಣೆಮಾಡಿ ರಾಕ್ಷಸರೊಂದಿಗೆ ಯುದ್ಧ ಮಾಡಿದರು. ಹೀಗೆ ಸ್ತ್ರೀರೂಪಧರಿಸಿ ಯುದ್ಧಮಾಡಿದರೂ ಅವನಿಂದ ಪುನಃ ಪರಾಭವಗೊಂಡು ಬ್ರಹ್ಮನ ಸಾನ್ನಿಧ್ಯವನ್ನು ಪಡೆದವರಾಗಿ, ಸರ್ವ ವಿಷಯವನ್ನೂ ಬ್ರಹ್ಮನ ಸಂಮುಖ ದಲ್ಲಿ ಅರಿಕೆ ಮಾಡಿಕೊಂಡರು. ಅನಂತರದಲ್ಲಿ ಬ್ರಹ್ಮನನ್ನೇ ಮುಂಭಾಗ ದಲ್ಲಿಟ್ಟುಕೊಂಡು ಅವರೆಲ್ಲರೂ ಅಂಬಿಕಾಪತಿಯಾದ ಪರಮೇಶ್ವರನ ಸನ್ನಿಧಿಗೆ ಹೋದವರಾಗಿ ಪರಮೇಶ್ವರನನ್ನು ಸ್ತುತಿಸಿದರು.

೬. ಚತುರ್ಮುಖನಾದ ಬ್ರಹ್ಮನು ದೇವತೆಗಳ ಪ್ರಭುವಾದ ಪರಮೇಶ್ವರನ ಸಮೀಪವನ್ನು ಪಡೆದು ಅನೇಕಾವೃತ್ತಿ ನಮಸ್ಕರಿಸಿ ಮುಂದೆ ಹೇಳುವ ರೀತಿಯಲ್ಲಿ ಪ್ರಭುವನ್ನು ಕುರಿತು ಅರಿಕೆ ಮಾಡಿದನು;

೭. ಓ ಪ್ರಭುವೇ, ಭಯಂಕರನಾದ ದಾರುಕನೆಂಬ ರಾಕ್ಷಸನು ಹಿಂದೆ ನಮ್ಮನ್ನು ಯುದ್ಧದಲ್ಲಿ ಪರಾಭವಗೊಳಿಸಿದನು. ಆದುದರಿಂದ ಸ್ತ್ರೀಗೆ ಮಾತ್ರ ವಧ್ಯನಾದ ಆರಾಕ್ಷಸನನ್ನು ಸಂಹರಿಸಿ ನಮ್ಮನ್ನು ಕಾಪಾಡಲು ನೀನೇ ಶಕ್ತನಾಗಿರುವೆ.

ವಿಜ್ಞಪ್ತಿಂ ಬ್ರಹ್ಮಣಃ ಶ್ರುತ್ವಾ ಭಗವಾನ್ ಭಗನೇತ್ರಹಾ ।
ದೇವೀಮುವಾಚ ದೇವೇಶೋ ಗಿರಿಜಾಂ ಪ್ರಹಸನ್ನಿವ ॥ ೮ ॥

ಭವತೀಂ ಪ್ರಾರ್ಥಯಾಮ್ಯದ್ಯ ಹಿತಾಯ ಜಗತಾಂ ಶುಭೇ ।
ವಧಾರ್ಥಂ ದಾರುಕಸ್ಯಾಸ್ಯ ಸ್ತ್ರೀವಧ್ಯಸ್ಯ ವರಾನನೇ ॥ ೯ ॥

ಅಥ ಸಾ ತಸ್ಯ ವಚನಂ ನಿಶಮ್ಯ ಜಗತೋಽರಣಿಃ ।
ವಿವೇಶ ದೇಹೇ ದೇವಸ್ಯ ದೇವೇಶೀ ಜನ್ಮತತ್ಪರಾ ॥೧೦॥

ಏಕೇನಾಂಶೇನ ದೇವೇಶಂ ಪ್ರವಿಷ್ಟಾ ದೇವಸತ್ತಮಾ ।
ನ ವಿವೇದ ತದಾ ಬ್ರಹ್ಮಾ ದೇವಾಶ್ಚೇಂದ್ರ ಪುರೋಗಮಾಃ ॥೧೧॥

---

೮. ಮೇಲೆ ಹೇಳಿದ ರೀತಿಯಲ್ಲಿ ಬ್ರಹ್ಮನು ವಿಜ್ಞಾಪಿಸಿ ಕೊಳ್ಳಲು ಬ್ರಹ್ಮನ ಅರಿಕೆಯನ್ನು ಕೇಳಿ, ಭಗನ ನೇತ್ರಾಪಹಾರಕನೂ ಷಡ್ಗುಣೈಶ್ವರ್ಯ ಸಂಪನ್ನನೂ ದೇವತೆಗಳಿಗೆ ಸ್ವಾಮಿಯೂ ಆದ ಶಿವನು ನಕ್ಕು ಪಾರ್ವತಿಯನ್ನು ಕುರಿತು ಹೀಗೆಂದು ಹೇಳಿದನು.

೯. ಎಲೌ ಜಗತ್ಕಲ್ಯಾಣವನ್ನುಂಟುಮಾಡುವ ಪಾರ್ವತಿಯೇ, ಸ್ತ್ರೀವಧ್ಯನಾದ ದಾರುಕನೆಂಬ ರಾಕ್ಷಸನ ಸಂಹಾರಕ್ಕೋಸ್ಕರ ನಿನ್ನನ್ನು ಪ್ರಾರ್ಥಿಸುತ್ತೇನೆ. (ಸ್ತ್ರೀಯಾದ ನೀನೇ ಆ ದಾರುಕನನ್ನು ಸಂಹರಿಸಲು ಶಕ್ತಳಾದ್ದರಿಂದ ನೀನು ಆ ಕಾರ್ಯವನ್ನು ನೇರವೇರಿಸ ಬೇಕೆಂದು ಪ್ರಾರ್ಥಿಸುತ್ತೇನೆಂದರ್ಥವು.)

೧೦-೧೧. ಅನಂತರದಲ್ಲಿ ಈಶ್ವರನ ಮಾತನ್ನು ಕೇಳಿ ಜಗತ್ತಿನ ಉತ್ಪತ್ತಿಗೆ ಆಧಾರವಾದ ಕಾರಣಸ್ವರೂಪಳೂ, ಆ ಜನ್ಮವನ್ನು ತಾಳುವುದರಲ್ಲಿ ಆಸಕ್ತಳೂ, ಆದ ಪಾರ್ವತಿಯು ತನ್ನ ಒಂದು ಅಂಶದಿಂದ ಪರಮೇಶ್ವರನ ದೇಹವನ್ನು ಪ್ರವೇಶಿಸಿದಳು. ಪರಮೇಶ್ವರನನ್ನು ಪ್ರವೇಶಿಸಿದ ವಿಷಯವನ್ನು ಇಂದ್ರನೇ ಮುಂತಾದ ಶ್ರೇಷ್ಠರಾದ ದೇವತೆಗಳೂ ತಿಳಿಯದವರಾದರು!

ಗಿರಿಜಾಂ ಪೂರ್ವವಚ್ಛಂಭೋಃ ದೃಷ್ಟ್ವಾ ಪಾರ್ಶ್ವಸ್ಥಿತಾಂ ಶುಭಾಂ ।
ಮಾಯಯಾ ಮೋಹಿತ ಸ್ತಸ್ಯಾಃ ಸರ್ವಜ್ಞೋಽಪಿ ಚತುರ್ಮುಖಃ ॥

ಸಾ ಪ್ರವಿಷ್ಟಾ ತನುಂ ತಸ್ಯ ದೇವದೇವಸ್ಯ ಪಾರ್ವತೀ ।
ಕಂಠಸ್ಥೇನ ವಿಷೇಣಾಸ್ಯ ತನುಂ ಚಕ್ರೇ ತದಾತ್ಮನಃ ॥೧೩॥

ತಾಂ ಚ ಜ್ಞಾತ್ವಾ ತಥಾಭೂತಾಂ ತೃತೀಯೇನೇಕ್ಷಣೇನ ವೈ ।
ಸಸರ್ಜ ಕಾಲೀಂ ಕಾಮಾರಿಃ ಕಾಲಕಂಠೀಂ ಕಪರ್ದಿನೀಂ ॥೧೪॥

ಜಾತಾ ಯದಾ ಕಾಲಿಮಕಾಲ ಕಂಠೀ ।
ಜಾತಾ ತದಾನೀಂ ವಿಪುಲಾ ಜಯಶ್ರೀಃ ॥

ದೇವೇತರಾಣಾಮಜಯಸ್ತ್ವಸಿದ್ಧ್ಯೈ ।
ತುಷ್ಟಿರ್ಭವಾನ್ಯಾಃ ಪರಮೇಶ್ವರಸ್ಯ ॥೧೫॥

---

೧೨. ಈಶ್ವರನ ದೇಹವನ್ನು ಪ್ರವೇಶಿಸಿದರೂ ಅವನ ಪಕ್ಕದಲ್ಲಿಯೇ ನಿಂತಿರುವ ಆ ದೇವಿಯಿಂದ ಸರ್ವಜ್ಞನಾದ ಬ್ರಹ್ಮನೂ, ಮೋಹಗೊಂಡವನಾದನು. (ಪಾರ್ವತಿಯು ನೆರವೇರಿಸಿದ ಈ ಮಾಯಿಕವಾದ ಕೃತಿಯನ್ನು ತಿಳಿಯಲಾರದವನಾದನೆಂದರ್ಥವು.)

೧೩. ಈಶ್ವರನ ದೇಹವನ್ನು ಪ್ರವೇಶಿಸಿದ ಪಾರ್ವತಿಯು ಆವನ ಕಂಠದಲ್ಲಿರುವ ವಿಷವನ್ನೇ ತನ್ನ ದೇಹವನ್ನಾಗಿ ಮಾಡಿಕೊಂಡಳು. (ಅಂದರೆ ಈಶ್ವರನ ಕಂಠದಲ್ಲಿರುವ ವಿಷದ ಒಳಭಾಗದಲ್ಲಿ ಸೇರಿಕೊಂಡಳೆಂದರ್ಥವು.)

೧೪. ಮನ್ಮಥನ ಶತ್ರುವಾದ ಪರಮೇಶ್ವರನು ತನ್ನ ದೇಹವನ್ನು ಪ್ರವೇಶಿಸಿ, ವಿಷಭೂತಳೂ, ವಿಷದಿಂದ ಕಪ್ಪಾದ ದೇಹ ಕಂಠಕೇಶ ಉಳ್ಳವಳೂ ಆದ ಆ ಪಾರ್ವತಿಯನ್ನು ಸೃಷ್ಟಿಮಾಡಿದನು.

೧೫. ಯಾವಾಗ ವಿಷದಂತೆ ಕಪ್ಪಾದ ಕಂಠಉಳ್ಳ ಶಕ್ತಿಸ್ವರೂಪಳು ಜನ್ಮವನ್ನು ತಾಳಿದಳೋ ಆಗ ದೇವತೆಗಳಿಗೆ ವಿಜಯಲಕ್ಷ್ಮಿಯು ಉಂಟಾದಳು. ರಾಕ್ಷಸರು ಆಚರಿಸುತ್ತಿದ್ದ ಕರ್ಮಗಳು ಸಿದ್ಧವಾಗದೇ ಅವರಿಗೆ ಅಪಜಯ ಉಂಟಾಯಿತು ಮತ್ತು ಈಶ್ವರನೂ ಸಂತೋಷಗೊಂಡನು.

ಜಾತಾಂ ತದಾನೀಂ ಸುರಸಿದ್ಧಸಂಘಾಃ ।
ದೃಷ್ಟ್ವಾ ಭಯಾದ್ದುದ್ರುವು ರಗ್ನಿಕಲ್ಪಾಂ ॥
ಕಾಲೀಂ ಗಲಾಲಂ ಕೃತ ಕಾಲ ಕಂಠೀಂ ।
ಉಪೇಂದ್ರ ಪದ್ಮೋದ್ಭವ ಶಕ್ರ ಮುಖ್ಯಾಃ ॥೧೬॥

ತಥೈವ ಜಾತಂ ನಯನಂ ಲಲಾಟೇ ।
ಸಿತಾಂಶುಲೇಖಾ ಚ ಶಿರಸ್ಯುದಗ್ರಾ ॥
ಕಂಠೇ ಕರಾಲಂ ನಿಶಿತಂ ತ್ರಿಶೂಲಂ ।
ಕರೇ ಕರಾಲಂ ಚ ವಿಭೂಷಣಾನಿ ॥೧೭॥

ಸಾರ್ಧಂ ದಿವ್ಯಾಂಬರಾ ದೇವ್ಯಾಃ ಸರ್ವಾಭರಣಭೂಷಿತಾಃ ।
ಸಿದ್ಧೇಂದ್ರಸಿದ್ಧಾಶ್ಚ ತಥಾ ಪಿಶಾಚಾ ಜಜ್ಞಿರೇ ಪುನಃ ॥೧೮॥

---

೧೬. ಆ ಸಮಯದಲ್ಲಿ ವಿಷಮಯವಾದ ಕಪ್ಪಾದ ಕಂಠವುಳ್ಳ ಅಗ್ನಿ ಸದೃಶತೇಜಸ್ಸನ್ನು ಹೊಂದಿರುವ, ಆ ಮಹಾಕಾಲಿಯನ್ನು ನೋಡಿ, ವಿಷ್ಣುವೂ, ಬ್ರಹ್ಮನೂ ಮತ್ತು ಇಂದ್ರನೂ, ಇವರೇ ಪ್ರಧಾನವಾಗುಳ್ಳ ದೇವತೆಗಳು ಎಲ್ಲರೂ ಭಯಗೊಂಡು ಓಡಿದರು!

೧೭. ಯಾವರೀತಿಯಲ್ಲಿ ಶಿವನಿಗೆ ಹಣೆಯಲ್ಲಿ ಕಣ್ಣು ಇರುವುದೋ ಅದರಂತೆಯೇ ಮಹಾಕಾಲಿಯ ಹಣೆಯಲ್ಲಿಯೂ ನೇತ್ರವು ಉತ್ಪನ್ನವಾಯಿತು. ಹಾಗೆಯೇ ಶಿರಸ್ಸಿನಲ್ಲಿ ಚಂದ್ರಲೇಖೆಯೂ, ಕಂಠದಲ್ಲಿ ತೀಕ್ಷ್ಣವಾದ ವಿಷವೂ, ಕೈಯಲ್ಲಿ ತ್ರಿಶೂಲವೂ, ಖಡ್ಗವೂ ಮತ್ತು ಇತರ ಸರ್ಪಹಾರ ಕುಂಡಲಾದಿಗಳೂ, ಉಂಟಾದವು. (ಇವನ್ನೆಲ್ಲವನ್ನೂ ಪಾರ್ವತಿಯು ತಾನೂ ಶಿವನಂತೆಯೇ ಧರಿಸಿದಳೆಂದು ಅರ್ಥವು.)

೧೮. ಆ ಮಹಾಕಾಲಿಯೊಂದಿಗೆ ದಿವ್ಯವಾದ ಬಟ್ಟೆಗಳನ್ನು ಧರಿಸಿದವರೂ, ಸಮಸ್ತವಾದ ಆಭರಣಗಳಿಂದ ಅಲಂಕೃತರೂ, ಆದ ಸಿದ್ಧಪ್ರಮುಖರೂ ಮತ್ತು ಪಿಶಾಚಿಗಳೂ ಜನ್ಮವೆತ್ತಿದರು.

ಆಜ್ಞಯಾ ದಾರುಕಂ ತಸ್ಯಾಃ ಪಾರ್ವತ್ಯಾಃ ಪರಮೇಶ್ವರೀ ।
ದಾನವಂ ಸೂದಯಾಮಾಸ ಸೂದಯಂತಂ ಸುರಾಧಿಪಾನ್ ॥೧೯॥
ಸಂರಂಭಾತಿಪ್ರಸಂಗಾದ್ವೈ ತಸ್ಯಾಃ ಸರ್ವಮಿದಂ ಜಗತ್ ।
ಕ್ರೋಧಾಗ್ನಿನಾ ಚ ವಿಪ್ರೇಂದ್ರಾಃ ಸಂಬಭೂವ ತದಾತುರಂ ॥೨೦॥
ಭವೋಽಪಿ ಬಾಲರೂಪೇಣ ಸ್ಮಶಾನೇ ಪ್ರೇತಸಂಕುಲೇ ।
ರುರೋದ ಮಾಯಯಾ ತಸ್ಯಾಃ ಕ್ರೋಧಾಗ್ನಿಂ ಪಾತುಮೀಶ್ವರಃ ॥
ತಂ ದೃಷ್ಟ್ವಾ ಬಾಲಮೀಶಾನಂ ಮಾಯಯಾ ತಸ್ಯ ಮೋಹಿತಾ ।
ಉತ್ಥಾಪ್ಯಾಘ್ರಾಯ ವಕ್ತ್ರೇಜಂ ಸ್ತನಂ ಸಾ ಪ್ರದದೌ ದ್ವಿಜಾಃ ॥

---

೧೯. ಹೀಗೆ ಭಯಂಕರ ರೂಪವನ್ನು ತಾಳಿ ಅವತರಿಸಿದ ಆ ಮಹಾಕಾಲಿಯು ಪಾರ್ವತಿಯ ಅಪ್ಪಣೆಯಿಂದ ದೇವತೆಗಳನ್ನು ಪೀಡಿಸುತ್ತಿದ್ದ ದಾರುಕನೆಂಬ ರಾಕ್ಷಸನನ್ನು ಸಂಹರಿಸಿದಳು.

೨೦. ಎಲೈ ಬ್ರಾಹ್ಮಣೋತ್ತಮರೇ, ಅವಳ ಶಕ್ತಿವೇಗದ ರಭಸದ ದೆಸೆಯಿಂದಲೂ, ಮತ್ತು ಕ್ರೋಧಾಗ್ನಿಯಿಂದಲೂ ಲೋಕವೆಲ್ಲವೂ ಉಲ್ಲೋಲ ಕಲ್ಲೋಲವಾಯಿತು.

೨೧. ಶಿವನೂಸಹ ಮಾಯೆಯಿಂದ ಬಾಲಕನರೂಪವನ್ನು ಧರಿಸಿ ಮಹಾಕಾಲಿಯ ಕ್ರೋಧಾಗ್ನಿಯನ್ನು ಉಪಶಮಿಸಲು ಪ್ರೇತಗಳಿಂದ ನಿಬಿಡವಾದ ಶ್ಮಶಾನದಲ್ಲಿ ಮಾಯಿಕವಾಗಿ ಅತ್ತನು ( ಅವಳ ಕ್ರೋಧಾಗ್ನಿಯನ್ನು ತನ್ನ ಕಣ್ಣೀರಿನಿಂದ ಶಾಂತವನ್ನಾಗಿ ಮಾಡಿದನೆಂದರ್ಥವು. )ಅಲ್ಲದೆ

೨೨. ಎಲೈ ಬ್ರಾಹ್ಮಣರೇ, ಹೀಗೆ ಬಾಲರೂಪವನ್ನು ಧರಿಸಿ, ಶ್ಮಶಾನದಲ್ಲಿ ಅಳುತ್ತಿರುವ ಆ ಪರಮೇಶ್ವರನನ್ನುನೋಡಿ, ಅವನ ಮಾಯೆಯಿಂದ ಮುಗ್ಧಳಾದ ಕಾಲಿಯು ಅವನನ್ನು ಎತ್ತಿ ಮುತ್ತಿಟ್ಟು ಸ್ತನ್ಯವನ್ನು ಕೊಟ್ಟಳು.

ಸ್ತನಜೇನ ತದಾ ಸಾರ್ಧಂ ಕೋಪಮಸ್ಯಾಃ ಪಪೌ ಪುನಃ ।
ಕ್ರೋಧೇನಾನೇನ ವೈ ಬಾಲಃ ಕ್ಷೇತ್ರಾಣಾಂ ರಕ್ಷಕೋಽಭವತ್ ॥
ಮೂರ್ತಯೋಽಷ್ಟೌ ಚ ತಸ್ಯಾಪಿ ಕ್ಷೇತ್ರಪಾಲಸ್ಯ ಧೀಮತಃ ।
ಏವಂ ವೈ ತೇನ ಬಾಲೇನ ಕೃತಾ ಸಾ ಕ್ರೋಧ ಮೂರ್ಛಿತಾ ॥೨೪॥
ಕೃತಮಸ್ಯಾಃ ಪ್ರಸಾದಾರ್ಥಂ ದೇವದೇವೇನ ತಾಂಡವಂ ।
ಸಂಧ್ಯಾಯಾಂ ಸರ್ವಭೂತೇಂದ್ರೈಃ ಪ್ರೇತೈಃ ಪ್ರೀತೇನ ಶೂಲಿನಾ ॥
ಪೀತ್ವಾ ನೃತ್ತಾಮೃತಂ ಶಂಭೋರಾಕಂಠಂ ಪರಮೇಶ್ವರೀ ।
ನನರ್ತ ಸಾ ಚ ಯೋಗಿನ್ಯಃ ಪ್ರೇತಸ್ಥಾನೇ ಯಥಾಸುಖಂ ॥೨೬॥

---

೨೩. ಆಗ ಬಾಲಕನು ಸ್ತನ್ಯದೊಂದಿಗೆ ಅವಳಕೋಪವನ್ನೂ ಪಾನ ಮಾಡಿದನು. ಎಂದರೆ ಅವಳಕೋಪವನ್ನು ಶಾಂತವಾಗುವಂತೆ ಮಾಡಿದನು. ಹೀಗೆ ಕೋಪವನ್ನು ಶಾಂತವನ್ನಾಗಿ ಮಾಡಿದ್ದರಿಂದ ಇವನು ಕ್ಷೇತ್ರಪಾಲಕನೆಂದು ಹೆಸರನ್ನು ಹೊಂದಿದನು.

೨೪. ಭೈರವಸ್ವರೂಪನಾದ ಆ ಕ್ಷೇತ್ರಪಾಲದೇವನ ಎಂಟು ಮೂರ್ತಿಗಳೂ ಉತ್ಪನ್ನವಾದವು. ಈ ರೀತಿಯಲ್ಲಿ ಕಾಳಿಯು ಆ ಬಾಲನಿಂದ ಶಾಂತವಾದ ಕ್ರೋಧ ಉಳ್ಳವಳಾದಳು.

೨೫. ಈ ಪ್ರಕಾರವಾಗಿ ಶಾಂತಳಾದ ಆ ಮಹಾಕಾಳಿಯನ್ನು ಸಂತೋಷಪಡಿಸುವುದಕ್ಕೋಸ್ಕರ ಈಶ್ವರನು ಸಂಧ್ಯಾಕಾಲದಲ್ಲಿ ಸಮಸ್ತ ಕ್ಷೇತ್ರಪಾಲಕರಿಂದಲೂ, ಪ್ರಮಥಗಣಗಳಿಂದಲೂ ಕೂಡಿದವನಾಗಿ ನರ್ತನಕಾರ್ಯವನ್ನು ನೆರವೇರಿಸಿದನು.

೨೬. ಶಿವನ ತಾಂಡವನೃತ್ಯವೆಂಬ ಅಮೃತವನ್ನು ಆ ಕಂಠವಾಗಿ ಪಾನಮಾಡಿ ಎಂದರೆ ಕಣ್ಣುಗಳಿಂದ ತೃಪ್ತಿಯಾಗುವವರೆಗೂ ನೋಡಿ, ಆ ಪರಮೇಶ್ವರಿಯು ತಾನೂ, ಯೋಗಿನಿಯರಿಂದ ಕೂಡಿದವಳಾಗಿ ಆ ಶ್ಮಶಾನದಲ್ಲಿ ಲಾಸ್ಯ ನರ್ತನವನ್ನು ಮಾಡಿದಳು.

**ತತ್ರ ಸಬ್ರಹ್ಮಕಾ ದೇವಾಃ ಸೇಂದ್ರೋಪೇಂದ್ರಾಃ ಸಮಂತತಃ ।**
**ಪ್ರಣೇಮುಃ ತುಷ್ಟುವುಃ ಕಾಲೀಂ ಪುನರ್ದೇವೀಂ ಚ ಪಾರ್ವತೀಂ ॥**
**ಏವಂ ಸಂಕ್ಷೇಪತಃ ಪ್ರೋಕ್ತಂ ತಾಂಡವಂ ಶೂಲಿನಃ ಪ್ರಭೋಃ ।**
**ಯೋಗಾನಂದೇನ ಚ ವಿಭೋಃ ತಾಂಡವಂ ಚೇತಿ ಚಾಪರೇ ॥೨೮॥**

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಶಿವತಾಂಡವ ಕಥನಂ ನಾಮ ಷಡಧಿಕ ಶತತಮೋಽಧ್ಯಾಯಃ

---

೨೭. ಅಲ್ಲಿ ವಿಷ್ಣು ಮತ್ತು ಇಂದ್ರಾದಿ ದೇವತೆಗಳೂ ಬ್ರಹ್ಮನಿಂದೊಡಗೂಡಿದವರಾಗಿ ಪ್ರದಕ್ಷಿಣೆಯನ್ನು ಮಾಡಿ, ಮಹಾಕಾಲಿಯನ್ನು ನಮಸ್ಕರಿಸಿದರು ಮತ್ತು ಸ್ತೋತ್ರಮಾಡಿದರು. ಪುನಃ ಪಾರ್ವತಿಯನ್ನು ಕೂಡ ನಮಸ್ಕರಿಸಿ ಸ್ತೋತ್ರಮಾಡಿದರು.

೨೮. ಎಲೈ ಬ್ರಾಹ್ಮಣರೇ, ಹಿಂದೆ ಹೇಳಿದ ರೀತಿಯಲ್ಲಿ ಸಂಕ್ಷೇಪವಾಗಿ ಶೂಲಪಾಣಿಯಾದ ಪ್ರಭುವಿನ ತಾಂಡವದ ಕಾರಣ ಮತ್ತು ಪ್ರಕಾರವನ್ನು ಹೇಳಿರುತ್ತೇನೆ. ಸನಕಾದಿ ಋಷಿಗಳು ಈಶ್ವರನ ಯೋಗಾಭ್ಯಾಸದಿಂದುಂಟಾದ ಆನಂದದಿಂದ ಶಿವನು ತಾಂಡವವನ್ನು ಅಭಿನಯಿಸಿದನೆಂದೂ ಹೇಳಿರುತ್ತಾರೆ.

ಇಲ್ಲಿಗೆ ಶ್ರೀಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಶಿವತಾಂಡವ ಕಥನವೆಂಬ ನೂರಾರನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಸಪ್ತಾಧಿಕ ಶತತಮೋಽಧ್ಯಾಯಃ

॥ ಋಷಯ ಊಚುಃ ॥

**ಪುರೋಪಮನ್ಯುನಾ ಸೂತ ಗಾಣಪತ್ಯಂ ಮಹೇಶ್ವರಾತ್ ।**
**ಕ್ಷೀರಾರ್ಣವಃ ಕಥಂ ಲಬ್ಧೋ ವಕ್ತುಮರ್ಹಸಿ ಸಾಂಪ್ರತಂ ॥ ೧ ॥**

**॥ ಸೂತ ಉವಾಚ ॥**

**ಏವಂ ಕಾಲೀ ಮುಪಾಲಭ್ಯ ಗತೇ ದೇವೇ ತ್ರಿಯಂಬಕೇ ।**
**ಉಪಮನ್ಯುಃ ಸಮಭ್ಯರ್ಚ್ಯ ತಪಸಾ ಲಬ್ಧವಾನ್ ಫಲಂ ॥ ೨ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರೇಳನೆಯ ಅಧ್ಯಾಯವು.

೧. ಋಷಿಗಳು ಹೇಳಿದರು:— ಓ ಸೂತಮಹರ್ಷಿಯೇ, ಹಿಂದೆ ಉಪಮನ್ಯುವು ಮಹೇಶ್ವರನ ದೆಸೆಯಿಂದ ಪ್ರಮಥಗಣಗಳ ಪ್ರಭುತ್ವವನ್ನು ಹೇಗೆ ಪಡೆದನು? ಮತ್ತು ಕ್ಷೀರಾಬ್ಧಿಯನ್ನು ಯಾವರೀತಿಯಲ್ಲಿ ಹೊಂದಿದನು? ಎಂಬ ವಿಷಯವನ್ನು ಈಗ ನಮಗೆ ತಿಳಿಯ ಹೇಳುವವನಾಗು. (ಉಪಮನ್ಯುವು ಬಾಲಕನಾಗಿದ್ದಾಗ ಗೋಕ್ಷೀರವನ್ನು ಪಾನಮಾಡಲಪೇಕ್ಷೆಯುಳ್ಳವನಾಗಿ ಅತ್ತನೆಂದೂ, ಅವನಿಗೆ ಕ್ಷೀರಸಮುದ್ರವೇ ಪಾನಮಾಡಲು ಪ್ರಾಪ್ತವಾಯಿತೆಂದೂ ಹೇಳಲ್ಪಟ್ಟಿದೆ.)

೨. ಸೂತ ಮಹರ್ಷಿಯು ಹೇಳಿದನು:—ಹಿಂದಿನ ಅಧ್ಯಾಯದಲ್ಲಿ ಹೇಳಿದ ರೀತಿಯಲ್ಲಿ ಮಹೇಶ್ವರನು ಮಹಾಕಾಲಿಯನ್ನು ಸೃಷ್ಟಿಸಿ, ಹೊರಟು ಹೋಗಲು, ಉಪಮನ್ಯುವು ತಪಸ್ಸಿನಿಂದ ಇಷ್ಟಾರ್ಥಗಳನ್ನು ಪಡೆದನು. ಹೇಗೆಂದರೆ,

**ಉಪಮನ್ಯುರಿತಿ ಖ್ಯಾತೋ ಮುನಿಶ್ಚ ದ್ವಿಜಸತ್ತಮಾಃ ।**
**ಕುಮಾರ ಇವ ತೇಜಸ್ವೀಕ್ರೀಡ ಮಾನೋ ಯದೃಚ್ಛಯಾ ॥ ೩ ॥**

**ಕದಾಚಿತ್ ಕ್ಷೀರಮಲ್ಪಂ ಚ ಪೀತವಾನ್ಮಾತುಲಾಶ್ರಮೇ ।**
**ಈರ್ಷ್ಯಯಾ ಮಾತುಲಸುತೋ ಹ್ಯಪಿಬತ್ ಕ್ಷೀರಮುತ್ತಮಂ ॥**

**ಪೀತ್ವಾ ಸ್ಥಿತಂ ಯಥಾಕಾಮಂ ದೃಷ್ಟ್ವಾ ಪ್ರೋವಾಚ ಮಾತರಂ ।**
**ಮಾತರ್ಮಾತರ್ಮಹಾಭಾಗೇ ಮಮ ದೇಹಿ ತಪಸ್ವಿನಿ ॥ ೫ ॥**

**ಗವ್ಯಂ ಕ್ಷೀರ ಮತಿಸ್ವಾದು ನಾಲ್ಪ ಮುಷ್ಣಂ ನಮಾಮ್ಯಹಂ ।**
**ಉಪಲಾಲಿತೈವಂ ಪುತ್ರೇಣ ಪುತ್ರಮಾಲಿಂಗ್ಯ ಸಾದರಂ ॥ ೬ ॥**

---

೩. ಉಪಮನ್ಯುವೆಂದು ಪ್ರಸಿದ್ಧನಾದ ಆ ಋಷಿಯು, ಷಣ್ಮುಖನಂತೆ ತೇಜಸ್ವಿಯಾಗಿರುತ್ತಾ, ಬಾಲಕರಿಗೆ ಅನುಗುಣವಾದ ಆಟಗಳನ್ನು ಆಡುವವನಾಗಿ, ಒಂದಾನೊಂದು ಕಾಲದಲ್ಲಿ ತನ್ನ ಮಾವನ ಆಶ್ರಮದಲ್ಲಿ ರುಚಿಕರವಾದ ಹಾಲನ್ನು ಕುಡಿದನು.

೪. ಉಪಮನ್ಯುವು ಹಾಲನ್ನು ಕುಡಿದದ್ದನ್ನು ಸಹಿಸದೇ ಇರುವ ಅವನ ಮಾವನ ಮಗನು ತಾನೂ ಹೆಚ್ಚು ರುಚಿಕರವಾದ ಹಾಲನ್ನು ಹೆಚ್ಚಾಗಿ ಕುಡಿದನು.

೫. ಈ ರೀತಿಯಾಗಿ ಸ್ವೇಚ್ಛೆಯಾಗಿ ಹಾಲನ್ನು ಕುಡಿದಿರುವ ಮಗನನ್ನು ನೋಡುತ್ತಿರುವ ತನ್ನ ತಾಯಿಯನ್ನು ಕುರಿತು ಉಪಮನ್ಯುವು ಹೀಗೆಂದು ಹೇಳಿದನು.

೬. ಪೂಜ್ಯಳಾದ ಮಾತೆಯೇ, ನಿನಗೆ ನಮಸ್ಕರಿಸುವೆನು. ನನಗೆ ಅತ್ಯಂತ ರುಚಿಕರವಾಗಿಯೂ, ತುಂಬ ಉಷ್ಣವಾಗಿಯೂ ಇಲ್ಲದೇ ಇರುವ ಗೋವಿನ ಕ್ಷೀರವನ್ನು ಹೆಚ್ಚಾಗಿ ಕೊಡು.

**ದುಃಖಿತಾ ವಿಲಲಾಪಾರ್ತಾ ಸ್ಮೃತ್ವಾ ನೈರ್ಧನ್ಯ ಮಾತ್ಮನಃ ।**
**ಸ್ಮೃತ್ವಾ ಸ್ಮೃತ್ವಾ ಪುನಃ ಕ್ಷೀರಂ ಉಪಮನ್ಯುರಪಿ ದ್ವಿಜಾಃ ॥**
**ದೇಹಿ ದೇಹೀತಿ ತಾಮಾಹ ರೋದ ಮಾನೋ ಮಹಾದ್ಯುತಿಃ॥ ೭ ॥**

**ಉಂಛವೃತ್ತ್ಯಾರ್ಜಿತಾನ್ ಬೀಜಾನ್ ಸ್ವಯಂ ಪಿಷ್ಟ್ವಾ ಚ ಸಾ ತದಾ ।**
**ಬೀಜ ಪಿಷ್ಟಂ ತದಾ ಲೋಡ್ಯ ತೋಯೇನ ಕಲಭಾಷಿಣೀ ॥ ೮ ॥**

**ಏಹ್ಯೇಹಿ ಮಮ ಪುತ್ರೇತಿ ಸಾಮಪೂರ್ವಂ ತತಃ ಸುತಂ ।**
**ಆಲಿಂಗ್ಯಾದಾಯ ದುಃಖಾರ್ತಾ ಪ್ರದದೌ ಕೃತ್ರಿಮಂ ಪಯಃ॥ ೯ ॥**

**ಪೀತ್ವಾ ಚ ಕೃತ್ರಿಮಂ ಕ್ಷೀರಂ ಮಾತ್ರಾ ದತ್ತಂ ದ್ವಿಜೋತ್ತಮಃ ।**
**ನೈತತ್ ಕ್ಷೀರಮಿತಿ ಪ್ರಾಹ ಮಾತರಂ ಚಾತಿ ವಿಹ್ವಲಃ ॥೧೦॥**

---

೭. ಸೂತಮಹರ್ಷಿಯು ಹೇಳಿದನು:— ಹೀಗೆ ಪುತ್ರನು ಅಕ್ಕರೆಯಿಂದ ಕೇಳಿಕೊಳ್ಳಲಾಗಿ ತಾಯಿಯು ಆದರದಿಂದ ಅವನನ್ನು ಆಲಂಗಿಸಿ, ತನ್ನ ದರಿದ್ರಾವಸ್ಥೆಯನ್ನು ಸ್ಮರಿಸಿಕೊಂಡು ದುಃಖದಿಂದ ಪರಿತಪಿಸುವವಳಾದಳು.

೮. ಎಲೈ ಬ್ರಾಹ್ಮಣರೇ, ಉಪಮನ್ಯುವು ಬಾರಿಬಾರಿಗೂ ಕ್ಷೀರವನ್ನು ಸ್ಮರಿಸಿ ಅಳುವವನಾಗಿ ತಾಯಿಯನ್ನು ಕುರಿತು ಹಾಲನ್ನು ಕೊಡು, ಕೊಡು, ಎಂದು ಮತ್ತೆ ಮತ್ತೆ ಒತ್ತಾಯಪಡಿಸುತ್ತಾ ಹೇಳಿದನು.

೯. ಈ ರೀತಿಯಲ್ಲಿ ಮಗನು ತಾಯನ್ನು ಹಾಲನ್ನು ಕೊಡೆಂದು ಪೀಡಿಸಲಾಗಿ, ತಾಯಿಯು ಉಂಛವೃತ್ತಿಯಿಂದ ಸಂಪಾದಿಸಿದ್ದ ಕಾಳುಗಳನ್ನುತಿರುವಿ ಹಿಟ್ಟನ್ನು ಮಾಡಿ, (ಉಂಛವೃತ್ತಿಯೆಂದರೆ ಪೈರನ್ನು ಮನೆಗೆ ಸಾಗಿಸಿದನಂತರ ಗದ್ದೆಗಳಲ್ಲಿ ಅಲ್ಲಲ್ಲಿ ಬಿದ್ದಿರುವ ಬತ್ತ ಮುಂತಾದ ಧಾನ್ಯಗಳ ಕಾಳುಗಳನ್ನು ಸಂಗ್ರಹಿಸಿ ತಂದು, ಅವುಗಳಿಂದ ಜೀವನವನ್ನು ಸಾಗಿಸುವುದು. ಇದನ್ನು ಉಂಛವೃತ್ತಿಯೆಂದು ಹೇಳುತ್ತಾರೆ.) ಆ ಹಿಟ್ಟನ್ನು ನೀರಿನೊಡನೆ ಮಿಶ್ರಮಾಡಿ, ಸಮಾಧಾನೋಕ್ತಿಗಳಿಂದ ಮಗನನ್ನು ತನ್ನ ಸಮೀಪಕ್ಕೆ ಕರೆದು ಆಲಿಂಗಿಸಿ ಆ ಕೃತ್ರಿಮವಾದ ಹಾಲನ್ನು ಅವನಿಗೆ ಕುಡಿಯಲು ಕೊಟ್ಟಳು.

ದುಃಖಿತಾ ಸಾ ತದಾ ಪ್ರಾಹ ಸಂಪ್ರೇಕ್ಷ್ಯಾ ಘ್ರಾಯ ಮೂರ್ಧನಿ ।
ಸಂಮಾರ್ಜ್ಯ ನೇತ್ರೇ ಪುತ್ರಸ್ಯ ಕರಾಭ್ಯಾಂ ಕಮಲಾಯತೇ ॥೧೧॥
ತಟಿನೀಃ ರತ್ನಪೂರ್ಣಾಸ್ತೇ ಸ್ವರ್ಗಪಾತಾಲಗೋಚರಾಃ ।
ಭಾಗ್ಯಹೀನಾ ನ ಪಶ್ಯಂತಿ ಭಕ್ತಿಹೀನಾಶ್ಚ ಯೇ ಶಿವೇ ॥೧೨॥
ರಾಜ್ಯಂ ಸ್ವರ್ಗಂ ಚ ಮೋಕ್ಷಂ ಚ ಭೋಜನಂ ಕ್ಷೀರ ಸಂಭವಂ ।
ನ ಲಭಂತೇ ಪ್ರಿಯಾಣ್ಯೇಷಾಂ ನೋ ತುಷ್ಯತಿ ಸದಾ ಭವಃ ॥೧೩॥
ಭವ ಪ್ರಸಾದಜಂ ಸರ್ವಂ ನಾನ್ಯದೇವ ಪ್ರಸಾದಜಂ ।
ಅನ್ಯ ದೇವೇಷು ನಿರತಾ ದುಃಖಾರ್ತಾ ವಿಭ್ರಮಂತಿ ಚ ॥೧೪॥

---

೧೦. ದ್ವಿಜಶ್ರೇಷ್ಠನಾದ ಆ ಉಪಮನ್ಯುವು ಆ ಕೃತ್ರಿಮವಾದ ಹಾಲನ್ನು ಕುಡಿದು ಅತ್ಯಂತ ದುಃಖಗೊಂಡವನಾಗಿ ಇದು ನಿಜವಾದ ಕ್ಷೀರವಲ್ಲವೆಂಬುದಾಗಿ ತಾಯಿಯನ್ನು ಕುರಿತು ಹೇಳಿದನು.

೧೧. ಪುತ್ರರೋದನವನ್ನು ಕೇಳಿ ದುಃಖಗೊಂಡು ತಾಯಿಯು ಮಗನನ್ನು ನೋಡಿ, ಆಘ್ರಾಣಿಸಿ, ಕಮಲಗಳಂತೆ ವಿಸ್ತಾರವಾದ ಕಣ್ಣುಗಳನ್ನು ಒರೆಸಿ, ಹೀಗೆಂದು ಹೇಳಿದಳು.

೧೨. ಯಾರು ಶಿವನಲ್ಲಿ ಭಕ್ತಿಯುಳ್ಳವರಾಗಿರುವುದಿಲ್ಲವೋ, ದುರದೃಷ್ಟಶಾಲಿಗಳಾದ ಅವರು ರತ್ನಗಳಿಂದ ಪರಿಪೂರ್ಣವಾದ, ಸ್ವರ್ಗ ಮತ್ತು ಪಾತಾಳಗಳಲ್ಲಿ ಕಾಣಿಸಿಕೊಳ್ಳುವ, ನದಿಗಳನ್ನೂ ನೋಡುವುದಿಲ್ಲ.

೧೩. ಮತ್ತು ಯಾರ ವಿಷಯದಲ್ಲಿ ಶಿವನು ಪ್ರಸನ್ನನಾಗಿರುವುದಿಲ್ಲವೋ ಅವರು ಸುಖದಾಯಕವಾದ ರಾಜ್ಯವನ್ನೂ, ಸ್ವರ್ಗವನ್ನೂ, ಮೋಕ್ಷವೆಂಬ ಪುರುಷಾರ್ಥವನ್ನೂ, ಕ್ಷೀರಮಿಶ್ರಿತವಾದ ಭೋಜನವನ್ನೂ, ಪಡೆಯಲು ಪಾತ್ರರಾಗಿರುವುದಿಲ್ಲ.

೧೪. ಮೇಲೆ ಹೇಳಿದ ರಾಜ್ಯವೇ ಮೊದಲಾದ ಸಕಲ ಸೌಭಾಗ್ಯಗಳೂ, ಈಶ್ವರನ ಅನುಗ್ರಹದಿಂದಲೇ ಆಗುವುವು. ಅದಲ್ಲದೇ ಬೇರೆ ಯಾವದೇವರ ಅನುಗ್ರಹದಿಂದಲೂ ಉಂಟಾಗಲಾರವು. ಆದರೂ ಮೂಢರಾದ ಜನರು ಅನ್ಯದೇವತೆಗಳಲ್ಲಿ ಭಕ್ತಿಯನ್ನಿಟ್ಟು ಆ ದೇವತೆಗಳ ಪೂಜಾದಿಗಳಲ್ಲಿ ಆಸಕ್ತರಾಗಿ ಫಲಗಳನ್ನು ಪಡೆಯದವರಾಗಿ ದುಃಖಿಗಳಾಗಿರುತ್ತಾರೆ.

ಕ್ಷೀರಂ ತತ್ರ ಕುತೋಽಸ್ಮಾಕಂ ಮಹಾದೇವೋ ನ ಪೂಜಿತಃ ।
ಪೂರ್ವಜನ್ಮನಿ ಯದ್ದತ್ತಂ ಶಿವಮುದ್ದಿಶ್ಯ ವೈ ಸುತ । ॥೧೫॥
ತದೇವ ಲಭ್ಯಂ ನಾನ್ಯತ್ತು ವಿಷ್ಣುಮುದ್ದಿಶ್ಯ ವಾ ಪ್ರಭುಂ ।
ನಿಶಮ್ಯ ವಚನಂ ಮಾತು ರುಪಮನ್ಯುಃ ಮಹಾದ್ಯುತಿಃ ॥೧೬॥
ಬಾಲೋಽಪಿ ಮಾತರಂ ಪ್ರಾಹ ಪ್ರಣಿಪತ್ಯ ತಪಸ್ವಿನೀಂ ।
ತ್ಯಜ ಶೋಕಂ ಮಹಾಭಾಗೇ ಮಹಾದೇವೋಽಸ್ತಿ ಚೇತ್ ಕ್ವಚಿತ್ ॥
ಚಿರಾದ್ವಾ ಹ್ಯಚಿರಾದ್ವಾಽಪಿ ಕ್ಷೀರೋದಂ ಸಾಧಯಾಮ್ಯಹಂ ।

॥ ಸೂತ ಉವಾಚ ॥

ತಾಂ ಪ್ರಣಮ್ಯೈವ ಮುಕ್ತ್ವಾತು ಸ ತಪಃ ಕರ್ತುಂ ಪ್ರಚಕ್ರಮೇ ॥೧೮॥

---

೧೫. ಎಲೈ ಪುತ್ರನೇ, ಹೀಗಿರುವಲ್ಲಿ ದರಿದ್ರರಾದ ನಮಗೆ ಕ್ಷೀರವು ಹೇಗೆ ತಾನೇ ಲಬ್ಧವಾದೀತು? ನಾವು ಹಿಂದಿನ ಜನ್ಮದಲ್ಲಿ ಶಿವನನ್ನು ಆರಾಧಿಸಲಿಲ್ಲ. ಹಿಂದಿನ ಜನ್ಮದಲ್ಲಿ ಶಿವನನ್ನಾಗಲೀ, ವಿಷ್ಣುವನ್ನಾಗಲೀ ಪೂಜಿಸಿ, ಅವನಿಗೆ ಯಾವುದನ್ನು ಸಮರ್ಪಿಸಿದ್ದೆವೋ ಅದನ್ನು ಈ ಜನ್ಮದಲ್ಲಿಯೂ ಪಡೆಯುತ್ತೇವೆ. ಅಲ್ಲದೆ ಬೇರೆಯಾವುದೂ ಲಬ್ಧವಾಗಲಾರದು.

೧೬. ಹೀಗೆಂದು ಹೇಳಿದ ತಾಯಿಯಮಾತನ್ನು ಮಹಾತೇಜಸ್ವಿಯಾದ ಉಪಮನ್ಯುವೂ ಕೇಳಿ ಚಿಕ್ಕಬಾಲಕನಾದರೂ ತಾಯಿಯನ್ನು ನಮಸ್ಕರಿಸಿ ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.

೧೭. ಪೂಜ್ಯಳಾದ ತಾಯಿಯೇ, ಶೋಕವನ್ನು ದೂರಮಾಡುವವಳಾಗು. ಎಲ್ಲಿಯಾದರೂ ಈಶ್ವರನು ಇರುವುದೇ ಆದರೆ, ಆ ಈಶ್ವರನ ಅನುಗ್ರಹವನ್ನು ಪಡೆದು ನಾನು ಕೆಲವು ಕಾಲದಲ್ಲಿಯೇ ಬೇಗನೆ ಅಥವಾ ಸಾವಕಾಶವಾಗಿ, ಕ್ಷೀರಸಮುದ್ರವನ್ನೇ ಹೊಂದುವವನಾಗುವೆನು.

೧೮. ಸೂತನು ಹೇಳಿದನು:—ಹೀಗೆಂದು ಹೇಳಿ ಉಪಮನ್ಯುವು ತಾಯಿಯನ್ನು ನಮಸ್ಕರಿಸಿ, ತಪಸ್ಸನ್ನು ಮಾಡಲು ಹೊರಡಲು ಉದ್ಯುಕ್ತನಾದನು. ತಪಸ್ಸನ್ನು ಮಾಡಲು ಉದ್ಯುಕ್ತನಾದ ಮಗನನ್ನು ಕುರಿತು ತಾಯಿಯು ಅವನ ಕೋರಿಕೆಯನ್ನು ಅನುಮೋದಿಸಿ, ತಪಸ್ಸನ್ನು ಚನ್ನಾಗಿ ಅನುಷ್ಠಾನ ಮಾಡಲು ಅಪ್ಪಣೆಯನ್ನಿತ್ತಳು.

ತಮಾಹ ಮಾತಾ ಸುಶುಭಂ ಕುರ್ವಿತೀತಿ ಸುತರಾಂ ಸುತಂ ।
ಅನುಜ್ಞಾತ ಸ್ತಥಾ ತತ್ರ ತಪಸ್ತೇಪೇ ಸುದುಸ್ತರಂ ॥೧೯॥
ಹಿಮವತ್ಪರ್ವತಂ ಪ್ರಾಪ್ಯ ವಾಯು ಭಕ್ಷಃ ಸಮಾಹಿತಃ ।
ತಪಸಾ ತಸ್ಯ ವಿಪ್ರಸ್ಯ ವಿಧೂಪಿತ ಮಭೂಜ್ಜಗತ್ ॥೨೦॥
ಪ್ರಣಮ್ಯಾ ಹುಸ್ತತ ಸ್ಸರ್ವೇ ಹರಯೇ ದೇವಸತ್ತಮಾಃ ।
ಶ್ರುತ್ವಾ ತೇಷಾಂ ತದಾ ವಾಕ್ಯಂ ಭಗವಾನ್ ಪುರುಷೋತ್ತಮಃ ॥
ಕಿಮಿದಂ ತ್ವಿತಿ ಸಂಚಿಂತ್ಯ ಜ್ಞಾತ್ವಾ ತತ್ಕಾರಣಂ ಚ ಸಃ ।
ಜಗಾಮ ಮಂದರಂ ತೂರ್ಣಂ ಮಹೇಶ್ವರದಿದೃಕ್ಷಯಾ ॥೨೨॥
ದೃಷ್ಟ್ವಾ ದೇವಂ ಪ್ರಣಮ್ಯೈವಂ ಪ್ರೋವಾಚೇದಂ ಕೃತಾಂಜಲಿಃ ।
ಭಗವನ್ ಬ್ರಾಹ್ಮಣಃ ಕಶ್ಚಿದುಪಮನ್ಯುರಿತಿ ಶ್ರುತಃ ॥೨೩॥

---

೧೯. ಆ ಬಳಿಕ ಮಾತೃವಿನ ಆಜ್ಞೆಯನ್ನು ಶಿರಸಾವಹಿಸಿ ಹಿಮವತ್ಪರ್ವತವನ್ನು ಪಡೆದು, ಅಲ್ಲಿ ವಾಯುವನ್ನೇ ಆಹಾರವನ್ನಾಗಿ ಸೇವಿಸುವವನಾಗಿಯೂ, ಚಿತ್ತವೃತ್ತಿಯನ್ನು ನಿರೋಧಮಾಡಿದವನಾಗಿಯೂ, ಘೋರವಾದ ತಪಸ್ಸನ್ನೇ ಆಚರಿಸಿದನು.

೨೦. ಆ ಬ್ರಾಹ್ಮಣೋತ್ತಮನ ತಪಸ್ಸಿನಿಂದ ಸಕಲಜಗತ್ತೂ ದಹಿಸಲ್ಪಟ್ಟಂತಾಯಿತು. (ಜಗತ್ತಿಗೆ ತಾಪವು ಹೆಚ್ಚಾಯಿತೆಂದರ್ಥವು.)

೨೧. ತಪಸ್ಸಿನಿಂದುಂಟಾದ ಸಂತಾಪವನ್ನು ಸಹಿಸುವುದು ಅಸಾಧ್ಯವಾಗಲು ದೇವತೆಗಳು ವಿಷ್ಣುವನ್ನು ಕುರಿತು ತಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸಿ ಕೊಂಡರು.

೨೨. ಈ ರೀತಿಯಲ್ಲಿ ಪ್ರಾರ್ಥಿಸುವ ಆ ದೇವತೆಗಳ ಮಾತನ್ನು ಕೇಳಿ ಷಡ್ಗುಣೈಶ್ವರ್ಯ ಸಂಪನ್ನನೂ, ಪುರುಷಶ್ರೇಷ್ಠನೂ ಆದ ಮಹಾವಿಷ್ಣುವು ಇದೇನೆಂದು ಚಿಂತಿಸಿ, ಆಮೇಲೆ ತಾಪದಕಾರಣವನ್ನು ತಿಳಿದು, ಮಹೇಶ್ವರನನ್ನು ನೋಡುವ ಇಚ್ಛೆಯಿಂದ ಜಾಗ್ರತೆಯಾಗಿ ಕೈಲಾಸವನ್ನು ಕುರಿತು ತೆರಳಿದನು.

೨೩–೨೫. ಕೈಲಾಸವನ್ನು ಪಡೆದು ಶಿವನನ್ನು ನೋಡಿ ಅಂಜಲಿಬದ್ಧನಾಗಿ ಮುಂದೆ ಹೇಳುವ ರೀತಿಯಲ್ಲಿ ಹೇಳುವವನಾದನು. ಓ ಷಡ್ಗುಣೈಶ್ವರ್ಯ ಯುಕ್ತನಾದ ಶಿವನೇ, ಉಪಮನ್ಯುವೆಂಬ ಹೆಸರಿನಿಂದ ಪ್ರಖ್ಯಾತ

ಕ್ಷೀರಾರ್ಥಮುದಹತ್ಸರ್ವಂ ತಪಸಾ ತಂ ನಿವಾರಯ ।
ಏತಸ್ಮಿನ್ನಂತರೇ ದೇವಃ ಪಿನಾಕೀ ಪರಮೇಶ್ವರಃ ॥೨೪॥
ಶಕ್ರರೂಪಂ ಸಮಾಸ್ಥಾಯ ಗಂತುಂ ಚಕ್ರೇ ಮತಿಂ ತದಾ ।
ಅಥ ಜಗಾಮ ಮುನೇಸ್ತಸ್ತು ತಪೋವನಂ ।
ಗಜವರೇಣ ಸಿತೇನ ಸದಾಶಿವಃ ॥
ಸಹ ಸುರಾಸುರಸಿದ್ಧಮಹೋರಗೈಃ ।
ಅಮರರಾಜತನುಂ ಸ್ವಯಮಾಶ್ರಿತಃ ॥೨೫॥
ಸಹೈವ ಚಾರುಹ್ಯ ತದಾ ದ್ವಿಪಂ ತಂ ।
ಪ್ರಗೃಹ್ಯ ವಾಲವ್ಯಜನಂ ವಿವಸ್ವಾನ್ ॥
ವಾಮೇನ ಶಚ್ಯಾ ಸಹಿತಂ ಸುರೇಂದ್ರಂ ।
ಕರೇಣ ಚಾನ್ಯೇನ ಸಿತಾತಪತ್ರಂ ॥೨೬॥

---

ನಾದ ಓರ್ವ ಬ್ರಾಹ್ಮಣನು ಗೋಕ್ಷೀರ ಕ್ಕೋಸ್ಕರ ತಪಸ್ಸನ್ನು ಮಾಡುತ್ತಾ ತನ್ನ ತಪಸ್ಸಿನಿಂದ ಜಗತ್ತೆಲ್ಲವನ್ನೂ ದಹಿಸುತ್ತಿರುವನು. ಆದುದರಿಂದ ನೀನು ಅವನನ್ನು ತಪಸ್ಸಿನಿಂದ ವಿಮುಖನಾಗುವಂತೆ ಮಾಡುವವನಾಗು. ಇಷ್ಟರಲ್ಲಿಯೇ ಪಿನಾಕಪಾಣಿಯಾದ ಮಹೇಶ್ವರನು ಇಂದ್ರನ ರೂಪವನ್ನು ತಾಳಿ ಆ ತಪೋ ಭೂಮಿಯನ್ನು ಕುರಿತು ಹೋಗಲು ಉದ್ಯುಕ್ತನಾದನು. ತರುವಾಯ ನಿತ್ಯಕಲ್ಯಾಣ ಸ್ವರೂಪಿ ಯಾದ ಶಿವನು ಇಂದ್ರನರೂಪವನ್ನು ಧರಿಸಿದವನಾಗಿ ಬಿಳಿಯ ಆನೆಯನ್ನು (ಐರಾವತವನ್ನು) ಆ ರೋಹಿಸಿ ದೇವತೆಗಳೇನು ರಾಕ್ಷಸರೇನು ಸಿದ್ಧರೇನು, ಉರಗರೇನು ಇವರುಗಳಿಂದ ಕೂಡಿದವನಾಗಿ, ಉಪಮನ್ಯುವಿನ ತಪೋ ಭೂಮಿಯನ್ನು ಪಡೆದವ ನಾದನು.

೨೬. ಆ ಸಮಯದಲ್ಲಿ ಶಚಿಯೊಡಗೂಡಿದ ಇಂದ್ರರೂಪಧಾರಿ ಯಾದ ಶಿವನ ಸಂಗಡ ಸೂರ್ಯನೂ ರಥವನ್ನು ಆರೋಹಿಸಿ ಎಡಗಡೆಯ ಹಸ್ತದಿಂದ ಚಾಮರವನ್ನೂ, ಇನ್ನೊಂದು ಹಸ್ತದಿಂದ ಶ್ವೇತ ಛತ್ರಿ ಯನ್ನೂ ಹಿಡಿದು, ಶಿವನನ್ನು ಸೇವಿಸಿದನು.

ರರಾಜ ಭಗವಾನ್ ಸೋಮಃ ಶಕ್ರರೂಪೀ ಸದಾಶಿವಃ ।
ಸಿತಾತಪತ್ರೇಣ ಯಥಾ ಚಂದ್ರಬಿಂಬೇನ ಮಂದರಃ ॥೨೭॥

ಆಸ್ಥಾಯೈವಂ ಹಿ ಶಕ್ರಸ್ಯ ಸ್ವರೂಪಂ ಪರಮೇಶ್ವರಃ ।
ಜಗಾಮಾನುಗ್ರಹಂ ಕರ್ತುಂ ಉಪಮನ್ಯೋಸ್ತದಾಶ್ರಮಂ ॥೨೮॥

ತಂ ದೃಷ್ಟ್ವಾ ಪರಮೇಶಾನಂ ಶಕ್ರರೂಪಧರಂ ಶಿವಂ ।
ಪ್ರಣಮ್ಯ ಶಿರಸಾ ಪ್ರಾಹ ಮುನಿ ರ್ಮುನಿವರಾಃ ಸ್ವಯಂ ॥೨೯॥

ಪಾವಿತ ಶ್ಚಾಶ್ರಮಶ್ಚಾಯಂ ಮಮ ದೇವೇಶ್ವರಃ ಸ್ವಯಂ ।
ಪ್ರಾಪ್ತಃ ಶಕ್ರೋ ಜಗನ್ನಾಥೋ ಭಗವಾನ್ ಭಾನುನಾ ಪ್ರಭುಃ ॥ ॥

ಏಮುಕ್ತ್ವಾ ಸ್ಥಿತಂ ವೀಕ್ಷ್ಯ ಕೃತಾಂಜಲಿಪುಟಂ ದ್ವಿಜಂ ।
ಪ್ರಾಹ ಗಂಭೀರಯಾ ವಾಚಾ ಶಕ್ರರೂಪಧರೋ ಹರಃ ॥೩೧॥

---

೨೭. ಆ ಸಮಯದಲ್ಲಿ ಇಂದ್ರವೇಷವನ್ನು ಧರಿಸಿದ ಮತ್ತು ಶ್ವೇತ ಛತ್ರಿಯನ್ನು ಧರಿಸಿದ ಪರಮೇಶ್ವರನು, ಚಂದ್ರನ ಬಿಂಬದಿಂದ ಯುಕ್ತವಾದ ಮಂದರ ಪರ್ವತದೊಪಾದಿಯಲ್ಲಿ, ವಿರಾಜ ಮಾನನಾದನು.

೨೮. ಈ ಬಗೆಯಲ್ಲಿ ಪರಮೇಶ್ವರನು ಇಂದ್ರನ ರೂಪವನ್ನು ತಾಳಿ ಉಪಮನ್ಯುವನ್ನು ಅನುಗಹ್ರ ಮಾಡುವುದುಕ್ಕೋಸ್ಕರ ಅವನ ಆಶ್ರಮವನ್ನು ಕುರಿತು ತೆರಳಿದನು.

೨೯. ಎಲೈ ಮುನಿಶ್ರೇಷ್ಠರೇ, ಇಂದ್ರರೂಪಧಾರಿಯಾದ ಆ ಶಿವನನ್ನು ನೋಡಿ ಮುನಿಯಾದ ಉಪಮನ್ಯುವು ತಲೆಬಾಗಿ ನಮಸ್ಕರಿಸಿ, ಹೀಗೆಂದು ಹೇಳಿದನು.

೩೦. ನನ್ನ ಈ ಆಶ್ರಮವು ಪಾವನವಾಯಿತು. ಏಕೆಂದರೆ ಜಗದ್ರಕ್ಷಕನಾದ ಇಂದ್ರನೇ ಸೂರ್ಯನೊಡನೆ ಈ ಆಶ್ರಮವನ್ನು ಕುರಿತು ಬಂದಿರುವನು.

೩೧. ಹೀಗೆಂದು ಹೇಳಿ ಅಂಜಲಿಬದ್ಧನಾಗಿ ಮುಂದೆ ನಿಂತಿರುವ ಆ ಬ್ರಾಹ್ಮಣನನ್ನು ಕುರಿತು ಇಂದ್ರರೂಪಧಾರಿಯಾದ ಶಿವನು ಗಂಭೀರವಾದ ಮಾತಿನಿಂದ ಮುಂದೆ ಹೇಳುವ ರೀತಿಯಲ್ಲಿ ಹೇಳಿದನು.

ತುಷ್ಟೋಽಸ್ಮಿ ತೇ ವರಂ ಬ್ರೂಹಿ ತಪಸಾಽನೇನ ಸುವ್ರತ ।
ದದಾಮಿ ಚೇಪ್ಸಿತಾನ್ ಸರ್ವಾನ್ ಧೌಮ್ಯಾಗ್ರಜ ಮಹಾಮತೇ ॥

ಏವ ಮುಕ್ತ ಸ್ತದಾ ತೇನ ಶಕ್ರೇಣ ಮುನಿಸತ್ತಮಃ ।
ವರಯಾಮಿ ಶಿವೇ ಭಕ್ತಿಂ ಇತ್ಯುವಾಚ ಕೃತಾಂಜಲಿಃ ॥೩೩॥

ತತೋ ನಿಶಮ್ಯ ವಚನಂ ಮುನೇಃ ಕುಪಿತವತ್ಪ್ರಭುಃ ।
ಪ್ರಾಹ ಸಮ್ಯಗ್ರಮೀಶಾನಃ ಶಕ್ರರೂಪಧರಃ ಸ್ವಯಂ ॥೩೪॥

ಮಾಂ ನ ಜಾನಾಸಿ ದೇವರ್ಷೇ ದೇವರಾಜಾನ ಮೀಶ್ವರಂ ।
ತ್ರೈಲೋಕ್ಯಾಧಿಪತಿಂ ಶಕ್ರಂ ಸರ್ವದೇವನಮಸ್ಕೃತಂ ॥೩೫॥

---

೩೨. ಧೌಮ್ಯನ ಅಗ್ರಜನೂ, ಬುದ್ಧಿವಂತನೂ ಆದ ಮುನಿಯೇ, ನಿನ್ನ ತಪಸ್ಸಿನಿಂದ ಸಂತೋಷ ಗೊಂಡವನಾಗಿರುತ್ತೇನೆ. ವರಗಳನ್ನು ಕೇಳುವವನಾಗು. ನಿನಗೆ ಇಷ್ಟವಾದ ಸರ್ವ ವರಗಳನ್ನೂ ನಾನು ದಯಪಾಲಿಸುತ್ತೇನೆ.

೩೩. ಇಂದ್ರನು ಹೀಗೆಂದು ಹೇಳಲು ಮುನಿಶ್ರೇಷ್ಠನಾದ ಉಪಮನ್ಯುವು ಅಂಜಲಿಬದ್ಧನಾಗಿ ಶಿವನೇ ಇಂದ್ರರೂಪದಲ್ಲಿ ಬಂದಿರುವುದನ್ನು ತಿಳಿಯದೆ, ಆ ಇಂದ್ರನನ್ನು ಕುರಿತು ನಾನು ಶಿವನಲ್ಲಿ ಯಾವಾಗಲೂ ಭಕ್ತಿಯುಳ್ಳವನಾಗಿರುವಂತೆ ವರವನ್ನು ಪ್ರಾರ್ಥಿಸುತ್ತೇನೆ. ಎಂದು ಹೇಳಿದನು.

೩೪. ತರುವಾಯ ಇಂದ್ರರೂಪಧಾರಿಯಾದ ಶಿವನು ಆ ಮುನಿಯ ಮಾತನ್ನು ಕೇಳಿ ಗಾಬರಿಯಿಂದ ಕೋಪಗೊಂಡವನಂತೆ ತೋರುತ್ತಾ ಈ ರೀತಿಯಲ್ಲಿ ಮಾತನಾಡಿದನು.

೩೫. ಎಲೈ ದೇವರ್ಷಿಯೇ, ತ್ರೈಲೋಕ್ಯಾಧೀಶ್ವರನೂ ಸಮಸ್ತ ದೇವತೆಗಳಿಗೆ ನಮಸ್ಕಾರಾರ್ಹನೂ, ದೇವತೆಗಳ ಪ್ರಭುವೂ ಆದ ನನ್ನನ್ನು ನೀನು ತಿಳಿದಿರುವುದಿಲ್ಲವೇ ?

ಮದ್ಭಕ್ತೋ ಭವ ವಿಪ್ರರ್ಷೇ ಮಾಮೇವಾರ್ಚಯ ಸರ್ವದಾ ।
ದದಾಮಿ ಭದ್ರಂ ಸರ್ವಂ ತೇ ತ್ಯಜ ರುದ್ರಂ ತು ನಿರ್ಗುಣಂ ॥೩೬॥

ತತಃ ಶಕ್ರಸ್ಯ ವಚನಂ ಶ್ರುತ್ವಾ ಶ್ರೋತ್ರವಿದಾರಣಂ ।
ಉಪಮನ್ಯು ರಿದಂ ಪ್ರಾಹ ಜಪನ್ ಪಂಚಾಕ್ಷರಂ ಶುಭಂ ॥೩೭॥

ಮನ್ಯೇ ಶಕ್ರಸ್ಯ ರೂಪೇಣ ನೂನ ಮತ್ರಾಗತಃ ಸ್ವಯಂ ।
ಕರ್ತುಂ ದೈತ್ಯಾಧಮಃ ಕಶ್ಚಿತ್ ಧರ್ಮವಿಘ್ನಂ ಚ ನಾನ್ಯಥಾ ॥೩೮॥

ತ್ವಯೈವ ಕಥಿತಂ ಸರ್ವಂ ಭವನಿಂದಾರತೇನ ವೈ ।
ಪ್ರಸಂಗಾತ್ ದೇವದೇವಸ್ಯ ನಿರ್ಗುಣತ್ವಂ ಮಹಾತ್ಮನಃ ॥೩೯॥

---

೩೬. ಎಲೈ ಮಹರ್ಷಿಯೇ, ನನ್ನಲ್ಲಿಯೇ ಭಕ್ತಿಯುಳ್ಳವನಾಗಿ ಸರ್ವದಾ ನನ್ನನ್ನೇ ಪೂಜಿಸುವವನಾಗು. ನಿನಗೆ ಸಕಲ ಕಲ್ಯಾಣಗಳನ್ನೂ ನಾನು ಅನುಗ್ರಹಿಸುತ್ತೇನೆ. ಗುಣಹೀನನಾದ ಆ ಈಶ್ವರನನ್ನು ಪೂಜಿಸದೇ ದೂರೀ ಕರಿಸುವವನಾಗು.

೩೭. ಈ ಬಗೆಯಲ್ಲಿ ಹೇಳಿದ ಆ ಇಂದ್ರನ ಕರ್ಣ ಕಠೋರವಾದ ಮಾತನ್ನು ಕೇಳಿ ಉಪಮನ್ಯುವು ಈಶ್ವರನ ಮೂಲಮಂತ್ರವಾದ ಪಂಚಾಕ್ಷರಮಂತ್ರವನ್ನು ಜಪಿಸುವವನಾಗಿ ಇಂದ್ರನನ್ನು ಕುರಿತು ಹೀಗೆಂದು ಹೇಳಿದನು.

೩೮. ನಿಜವಾಗಿಯೂ ನೀನು ಇಂದ್ರನ ರೂಪವನ್ನು ತಾಳಿ ಈ ತಪೋವನಕ್ಕೆ ಬಂದು ನನ್ನ ತಪಸ್ಸಿಗೆ ವಿಘ್ನವನ್ನುಂಟುಮಾಡಲು ಉದ್ಯುಕ್ತನಾದ ಒಬ್ಬ ರಾಕ್ಷಸಾಧಮನಾಗಿರುವೆಯೇ ಹೊರತು ಬೇರೆ ಅಲ್ಲವು. ಎಂಬುದನ್ನು ನಾನು ತಿಳಿದಿರುತ್ತೇನೆ.

೩೯. ಈಶ್ವರನ ನಿಂದೆಯಲ್ಲಿ ಆಸಕ್ತನಾದ ನೀನೇ ಆ ಮಹಾಮಹಿಮನಾದ ಈಶ್ವರನನ್ನು ಗುಣಹೀನನೆಂಬುದಾಗಿ ಹೇಳಿರುವೆ! (ನಿನಗಿಂತಲೂ ಬೇರೆಯವರಾರೂ ಈ ಪ್ರಕಾರವಾಗಿ ಹೇಳುವುದಿಲ್ಲವಾದುದರಿಂದ ನೀನೇ ಮೂರ್ಖನೆಂದು ಅಭಿಪ್ರಾಯವು.) ನಿನ್ನ ದೋಷವು ಹಾಗಿರಲಿ.

ಬಹುನಾಽತ್ರ ಕಿಮುಕ್ತೇನ ಮಯಾಽದ್ಯಾನುಮಿತಂ ಮಹತ್ ।
ಭವಾಂತರಕೃತಂ ಪಾಪಂ ಶ್ರುತಾ ನಿಂದಾ ಭವಸ್ಯ ತು ॥೪೦॥

ಶ್ರುತ್ವಾ ನಿಂದಾಂ ಭವಸ್ಯಾಥ ತತ್ಕ್ಷಣಾದೇವ ಸಂತ್ಯಜೇತ್ ।
ಸ್ವದೇಹಂ ತಂ ನಿಹತ್ಯಾಶು ಶಿವಲೋಕಂ ಸ ಗಚ್ಛತಿ ॥೪೧॥

ಯೋ ವಾಚೋತ್ಪಾಟಯೇಜ್ಜಿಹ್ವಾಂ ಶಿವನಿಂದಾರತಸ್ಯ ತು ।
ತ್ರಿಃಸಪ್ತಕುಲಮುದ್ಧೃತ್ಯ ಶಿವಲೋಕಂ ಸ ಗಚ್ಛತಿ ॥೪೨॥

ಆಸ್ತಾಂ ತಾವನ್ಮಮೇಚ್ಛಾಯಾಃ ಕ್ಷೀರಂ ಪ್ರತಿ ಸುರಾಧಮಂ ।
ನಿಹತ್ಯ ತ್ವಾಂ ಶಿವಾಸ್ತ್ರೇಣ ತ್ಯಜಾಮ್ಯೇತತ್ಕಲೇಬರಂ ॥೪೩॥

---

೪೦. ನನ್ನ ಪೂರ್ವಜನ್ಮದಲ್ಲಿ ಸಂಚಿತವಾಗಿರುವ ದೊಡ್ಡ ಪಾಪವಿರುವುದರಿಂದಲೇ ಈ ಶಿವನಿಂದೆಯನ್ನು ನಾನು ಕೇಳುವ ಸಂದರ್ಭವು ಒದಗಿತು. ಎಂದು ಈಗ ನಾನು ಊಹಿಸುತ್ತೇನೆ. ಇದಕ್ಕಿಂತಲೂ ಹೆಚ್ಚಾದ ಮಾತುಗಳನ್ನಾಡುವುದು ವ್ಯರ್ಥವಾದುದು.

೪೧. ಯಾವನು ಶಿವನಿಂದೆಯನ್ನು ಕೇಳಿ ಆ ಮರುಕ್ಷಣದಲ್ಲಿಯೇ ತನ್ನ ದೇಹವನ್ನು ತ್ಯಾಗಮಾಡುವನೋ ಅವನು ಜಾಗ್ರತೆಯಾಗಿ ಶಿವಲೋಕವನ್ನೈದುವನು. ಹಾಗೆಯೇ ಅಂತಹ ಶಿವನಿಂದಕನನ್ನು ಸಂಹರಿಸಿದವನೂ ಕೈಲಾಸಲೋಕವಾಸವನ್ನು ಪಡೆಯುವನು.

೪೨. ಯಾವನು ಶಿವನಿಂದಕನ ನಾಲಿಗೆಯನ್ನು ಕಿತ್ತು ಬಿಸಾಡುವನೋ ಅವನು ಪುತ್ರಾದಿ ಮೂರು ಕುಲಗಳನ್ನೂ, ಪಿತಾಮಹಾದಿಗಳ ಏಳು ಕುಲಗಳನ್ನೂ ಉದ್ಧರಿಸುವವನಾಗಿ ಕಡೆಗೆ ಶಿವಲೋಕವನ್ನೈದುವನು.

೪೩. ನನ್ನ ಕ್ಷೀರೇಚ್ಛೆಯು ಇರಲಿ. ಅದು ಪರಿಪೂರ್ಣವಾಗದಿದ್ದರೂ ಚಿಂತೆಯಿಲ್ಲ. ಆದರೆ ಎಲೈ ದೇವಾಧಮನೇ, ಶಿವನಿಂದಕನಾದ ನಿನ್ನನ್ನು ಶಿವಾಸ್ತ್ರದಿಂದ ವಧಿಸಿ ಈ ದೇಹವನ್ನು ತ್ಯಜಿಸುವೆನು.

ಪುರಾ ಮಾತ್ರಾ ತು ಕಥಿತಂ ತಥ್ಯಮೇವ ನ ಸಂಶಯಃ।
ಪೂರ್ವಜನ್ಮನಿ ಚಾಸ್ಮಾಭಿ ರಪೂಜಿತ ಇತಿ ಪ್ರಭುಃ ॥೪೪॥

ಏವಮುಕ್ತ್ವಾ ತು ತಂ ದೇವಂ ಉಪಮನ್ಯುರಭೀತವತ್ ।
ಶಕ್ರಂ ಚಕ್ರೇ ಮತಿಂ ಹಂತು ಮಥರ್ವಾಸ್ತ್ರೇಣ ಮಂತ್ರವಿತ್ ॥೪೫॥

ಭಸ್ಮಾಧಾರಾನ್ಮಹಾತೇಜಾಃ ಭಸ್ಮಮುಷ್ಟಿಂ ಪ್ರಗೃಹ್ಯ ಚ ।
ಅಥರ್ವಾಸ್ತ್ರಂ ತತಸ್ತಸ್ಮೈ ಸಸರ್ಜ ಚ ನನಾದ ಚ ॥೪೬॥

ದಗ್ಧುಂ ಸ್ವದೇಹಮಾಗ್ನೇಯೀಂ ಧ್ಯಾತ್ವಾ ವೈ ಧಾರಣಾಂ ತದಾ ।
ಅತಿಷ್ಠಚ್ಚ ಮಹಾತೇಜಾಃ ಶುಷ್ಕೇಂಧನ ಮಿವಾವ್ಯಯಃ ॥೪೭॥

ಏವಂ ವ್ಯವಸಿತೇ ವಿಪ್ರೇ ಭಗವಾನ್ ಭಗನೇತ್ರಹಾ ।
ವಾರಯಾಮಾಸ ಸೌಮ್ಯೇನ ಧಾರಣಾಂ ತಸ್ಯ ಯೋಗಿನಃ ॥೪೮॥

---

೪೪. ಹಿಂದಿನ ಜನ್ಮದಲ್ಲಿ ನಾವು ಶಿವಾರ್ಚನೆಯನ್ನು ಮಾಡಲಿಲ್ಲವೆಂದು ಹೇಳಿದ ನನ್ನ ತಾಯಿಯ ಮಾತು ನಿಜವಾದದ್ದಾಗಿರುತ್ತದೆ. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ( ಆದಕಾರಣದಿಂದಲೇ ಈ ಜನ್ಮದಲ್ಲಿ ನನಗೆ ಕ್ಷೀರವು ಪ್ರಾಪ್ತವಾಗಲಿಲ್ಲವೆಂದರ್ಥವು. )

೪೫. ಹೀಗೆಂದು ಹೇಳಿ ಅಸ್ತ್ರಮಂತ್ರಗಳನ್ನು ತಿಳಿದು ಇರುವ ಆ ಉಪಮನ್ಯುವು ಅಥರ್ವವೆಂಬ ವೇದದಲ್ಲಿ ಪ್ರಸಿದ್ಧವಾಗಿರುವ ಅಥರ್ವಾಸ್ತ್ರದಿಂದ ಇಂದ್ರನನ್ನು ವಧಿಸಲು ಉದ್ಯುಕ್ತನಾದನು.

೪೬. ಮಹಾತೇಜಸ್ವಿಯಾದ ಉಪಮನ್ಯುವು ಭಸ್ಮದ ಚೀಲದಿಂದ ಭಸ್ಮವನ್ನು ತೆಗೆದು ಅದನ್ನು ಹಿಡಿದುಕೊಂಡು ಅನಂತರದಲ್ಲಿ ಅದನ್ನು ಅಭಿಮಂತ್ರಿಸಿ ಅಥರ್ವಾಸ್ತ್ರವನ್ನು ಪ್ರಯೋಗಿಸಿದನು. ಮತ್ತು ಹುಂಕಾರ ಶಬ್ದವನ್ನು ಮಾಡಿದನು.

೪೭–೪೮. ಅನಂತರದಲ್ಲಿ ತನ್ನ ದೇಹವನ್ನು ಶುಷ್ಕವಾದ ಕಾಷ್ಠದೋಪಾದಿಯಲ್ಲಿ ಹೋಮ ಮಾಡುವುದಕ್ಕೋಸ್ಕರ ಅಗ್ನಿದೇವತಾಕವಾದ ಯೋಗಧಾರಣೆಯನ್ನು ಆಚರಿಸಿದವನಾದನು. ಹೀಗೆ ದೇಹತ್ಯಾಗ ಮಾಡಲು ಉದ್ಯುಕ್ತನಾದ ಆ ಬ್ರಾಹ್ಮಣ ಶ್ರೇಷ್ಠನನ್ನು ( ಆಗ್ನೇಯ

ಅಥರ್ವಾಸ್ತ್ರಂ ತದಾ ತಸ್ಯ ಸಂಹೃತಂ ಚಂದ್ರಕೇಣ ತು ।
ಕಾಲಾಗ್ನಿ ಸದೃಶಂ ಚೇದಂ ನಿಯೋಗಾನ್ನಂದಿನಸ್ತ್ವಥಾ ॥೪೯॥

ಸ್ವರೂಪಮೇವ ಭಗವಾನಾಸ್ಥಾಯ ಪರಮೇಶ್ವರಃ ।
ದರ್ಶಯಾಮಾಸ ವಿಪ್ರಾಯ ಬಾಲೇಂದುಕೃತಶೇಖರಂ ॥೫೦॥

ಕ್ಷೀರಧಾರಾಸಹಸ್ರಂ ಚ ಕ್ಷೀರೋದಾರ್ಣವಮೇವ ಚ ।
ದಧ್ಯಾದೇರರ್ಣವಂ ಚೈವ ಘೃತೋದಾರ್ಣವಮೇವ ಚ ॥೫೧॥

ಫಲಾರ್ಣವಂ ಚ ಬಾಲಸ್ಯ ಭಕ್ಷ್ಯಭೋಜ್ಯಾರ್ಣವಂ ತಥಾ ।
ಅಪೂಪಗಿರಯಶ್ಚೈವ ತಥಾಽತಿಷ್ಠನ್ ಸಮಂತತಃ ॥೫೨॥

---

ಯೋಗಧಾರಣೆಯನ್ನು) ಭಗನ ನೇತ್ರಗಳನ್ನು ಅಪಹರಿಸಿದ ಮತ್ತು ನಾಶ ರಹಿತನಾದ ಪರಮೇಶ್ವರನು ಚಂದ್ರಕನೆಂಬ ಯೋಗದಿಂದ (ಸೋಮ ಧಾರಣ ಯೋಗದಿಂದ) ತಡೆದನು. (ನಿಗ್ರಹಿಸಿದನು.) ಆಗ ಉಪಮನ್ಯು ವಿನಿಂದ ಅಭಿಮಂತ್ರಿಸಲ್ಪಟ್ಟ ಪ್ರಲಯಕಾಲದ ಅಗ್ನಿಗೆ ಸದೃಶವಾದ ಅಥರ್ವಾಸ್ತ್ರವು ನಂದಿಯಿಂದ ಆಜ್ಞಾಪಿಸಲ್ಪಟ್ಟ ಚಂದ್ರಕನೆಂಬ ಗಣ ಶ್ರೇಷ್ಠನಿಂದ ಉಪಸಂಹರಿಸಲ್ಪಟ್ಟಿತು. (ಪುನಃ ಆ ಅಥರ್ವಾಸ್ತ್ರವನ್ನು ಹಿಂದಕ್ಕೆ ಹೋಗುವಂತೆ ಮಾಡಿದನು.)

೫೦. ಆಗ ಇನ್ನು ಸಾವಕಾಶಮಾಡಬಾರದೆಂದು ತಿಳಿದು ಪರ ಮೇಶ್ವರನು ತನ್ನ ನಿಜವಾದ ಸ್ವರೂಪವನ್ನು ಧರಿಸಿ ಚಂದ್ರನನ್ನು ಶಿಖೆ ಯಲ್ಲಿ ಧರಿಸಿರುವವನಾಗಿ ಆ ಸ್ವರೂಪದಲ್ಲಿ ಉಪಮನ್ಯುವಿಗೆ ದರ್ಶನವನ್ನು ದಯಪಾಲಿಸಿದನು.

೫೧–೫೨. ಅನಂತರದಲ್ಲಿ ಸಹಸ್ರಕ್ಷೀರದ ಪ್ರವಾಹಗಳೂ, ಕ್ಷೀರ ಸಮುದ್ರವೂ, ಧಧಿ (ಮೊಸರು) ಸಮುದ್ರವೂ, ತುಪ್ಪದ ಸಮುದ್ರವೂ, ಹಣ್ಣುಗಳ ಸಮುದ್ರವೂ, ಭಕ್ಷ್ಯಭೋಜ್ಯಗಳ ಸಮುದ್ರವೂ, ಕಡುಬಿನ ಪರ್ವತಗಳೂ, ಬಾಲಕನಾದ ಉಪಮನ್ಯುವಿನ ಸುತ್ತಲೂ, ಸಿದ್ಧವಾಗಿ ದ್ದವು. (ಕ್ಷೀರವೇ ಮೊದಲಾದುವುಗಳೂ ಮತ್ತು ಅನೇಕ ವಿಧವಾದ ಭಕ್ಷ್ಯ ಭೋಜ್ಯಾದಿಗಳೂ ಸಹ ಅವನ ಎದುರಿನಲ್ಲಿ ಅವನಿಗೆ ದೊರೆಯುವ ಹಾಗೆ ಇದ್ದುವೆಂದು ಅರ್ಥವು.)

ಉಪಮನ್ಯು ಮುವಾಚ ಸಸ್ಮಿತಃ ।
ಭಗವಾನ್ ಬಂಧುಜನೈಃ ಸಮಾವೃತಂ ॥
ಗಿರಿಜಾ ಮವಲೋಕ್ಯ ಸಸ್ಮಿತಾಂ ।
ಸಘೃಣಂ ಪ್ರೇಕ್ಷ್ಯ ತು ತಂ ತದಾ ಘೃಣೀ ॥೫೩॥
ಭುಂಕ್ಷ್ವ ಭೋಗಾನ್ ಯಥಾಕಾಮಂ ಬಾಂಧವೈಃ ಪಶ್ಯ ವತ್ಸ ಮೇ।
ಉಪಮನ್ಯೋ ಮಹಾಭಾಗ ತವಾಂಬೈಷಾ ಹಿ ಪಾರ್ವತೀ ॥೫೪॥
ಮಯಾ ಪುತ್ರೀಕೃತೋಽಸ್ಯದ್ಯ ತತಃ ಕ್ಷೀರೋದಧಿಸ್ತಥಾ ।
ಮಧುನಶ್ಚಾರ್ಣವಶ್ಚೈವ ದಧ್ನಶ್ಚಾರ್ಣವಮೇವ ಚ ॥೫೫॥
ಆಜ್ಯೋದನಾರ್ಣವಶ್ಚೈವ ಫಲಲೇಹ್ಯಾರ್ಣವಸ್ತಥಾ ।
ಅಪೂಪಗಿರಯಶ್ಚೈವ ಭಕ್ಷ್ಯ ಭೋಜ್ಯಾರ್ಣವಃ ಪುನಃ ॥೫೬॥

---

೫೩. ಆಗ ಷಡ್ಗುಣೈಶ್ವರ್ಯ ಸಂಪನ್ನನೂ, ದಯಾ ಮಯನೂ ಆದ ಪರಮೇಶ್ವರನು ಮುಗುಳುನಗೆಯಿಂದ ಕೂಡಿ ಕರುಣಾಪೂರಿತವಾದ ದೃಷ್ಟಿಯಿಂದ ಮಂದಹಾಸವನ್ನು ತೋರ್ಪಡಿಸುತ್ತಿದ್ದ ಪಾರ್ವತಿಯ ಕಡೆಗೆ ನೋಡಿ, ಬಂಧು ಜನರಿಂದ ಕೂಡಿರುವ ಉಪಮನ್ಯುವನ್ನು ಕುರಿತು ಹೀಗೆಂದುಹೇಳಿದನು.

೫೪. ಪ್ರೀತಿಪಾತ್ರನಾದ ಪುತ್ರನೇ, ಇಷ್ಟಮಿತ್ರರೊಂದಿಗೆ ಯಥೇಚ್ಛವಾಗಿ ಸುಖಗಳನ್ನು ಅನುಭವಿಸುವವನಾಗು. ಮತ್ತು ಎಲೈ ಉಪಮನ್ಯುವೇ, ಈ ಪಾರ್ವತಿಯು ನಿನ್ನ ಮಾತೆಯಾಗಿರುತ್ತಾಳೆ. ನೋಡುವವನಾಗು.

೫೫–೫೬. ಎಲೈ ಉಪಮನ್ಯುವೇ, ಈ ದಿನದಿಂದ ಮೊದಲುಗೊಂಡು ನಿನ್ನನ್ನು ಮಗನನ್ನಾಗಿ ಸ್ವೀಕರಿಸಿರುತ್ತೇನೆ. ನಿನ್ನ ಇಷ್ಟಾರ್ಥಕ್ಕನುಗುಣವಾಗಿ ದಧಿ ಸಮುದ್ರವನ್ನೂ, ಮಧು ಸಮುದ್ರವನ್ನೂ ಕ್ಷೀರಸಮುದ್ರವನ್ನೂ, ಘೃತ ಸಮುದ್ರವನ್ನೂ, ಅನ್ನ ಸಮುದ್ರವನ್ನೂ, ಫಲಸಮುದ್ರವನ್ನೂ, ಲೇಹ್ಯಸಮುದ್ರವನ್ನೂ, ಕಡುಬುಗಳ ಪರ್ವತವನ್ನೂ, ಭಕ್ಷ್ಯಭೋಜ್ಯಗಳ ಸಮುದ್ರವನ್ನೂ ನಿನಗೋಸ್ಕರ ಅನುಗ್ರಹಿಸಿರುತ್ತೇನೆ!

ಪಿತಾ ತವ ಮಹಾದೇವಃ ಪಿತಾ ವೈ ಜಗತಾಂ ಮುನೇ ।
ಮಾತಾ ತವ ಮಹಾಭಾಗಾ ಜಗನ್ಮಾತಾ ನ ಸಂಶಯಃ ॥೫೭॥

ಅಮರತ್ವಂ ಮಯಾ ದತ್ತಂ ಗಾಣಪತ್ಯಂ ಚ ಶಾಶ್ವತಂ ।
ವರಾನ್ ವರಯ ದಾಸ್ಯಾಮಿ ನಾತ್ರ ಕಾರ್ಯಾ ವಿಚಾರಣಾ ॥೫೮॥

ಏವಮುಕ್ತ್ವಾ ಮಹಾದೇವಃ ಕರಾಭ್ಯಾಮುಪಗೃಹ್ಯ ತಂ ।
ಆಘ್ರಾಯ ಮೂರ್ಧನಿ ವಿಭುರ್ದದೌ ದೇವ್ಯಾಸ್ತದಾ ಭವಃ ॥೫೯॥

---

೫೭. ಎಲೈ ಮುನಿಶ್ರೇಷ್ಠನೇ, ಸಕಲ ಜಗತ್ತುಗಳಿಗೂ ಜನಕನಾದ ಸಾಕ್ಷಾತ್ ಮಹಾದೇವನೇ ನಿನ್ನ ತಂದೆಯಾಗಿರುವನು. ಮತ್ತು ಜಗನ್ಮಾತೆಯಾದ ಪಾರ್ವತಿಯೇ ನಿನ್ನ ತಾಯಿಯಾಗಿರುವಳು. ಇದರಲ್ಲಿ ಯಾವಸಂದೇಹವೂ ಇರುವುದಿಲ್ಲವು.

೫೮. ಮತ್ತು ನಿನಗೆ ಅಮರತ್ವವನ್ನೂ (ಅಮರತ್ವವೆಂದರೆ ದೇವತಾಭಾವ ಅಥವಾ ಮರಣವಿಲ್ಲದಿರುವಿಕೆಯೆಂದರ್ಥವು.) ಚಿರಕಾಲ ಉಳಿಯುವ ಪ್ರಮಥಗಣಗಳ ಪ್ರಭುತ್ವವನ್ನೂ ಅನುಗ್ರಹಿಸಿರುವೆನು. ಇವಲ್ಲದೇ ಬೇಕಾದ ಇಷ್ಟಾರ್ಥಗಳನ್ನೂ ಕೋರುವವನಾಗು. ಅವುಗಳನ್ನೂ ಅನುಗ್ರಹಿಸುತ್ತೇನೆ. ಈ ವಿಷಯದಲ್ಲಿ ಆಲೋಚಿಸಬೇಕಾದುದು ಇರುವುದಿಲ್ಲವು.

೫೯. ಈರೀತಿಯಲ್ಲಿ ಹೇಳಿ ಸರ್ವವ್ಯಾಪಿಯಾದ ಪರಮೇಶ್ವರನು ಆ ಬಾಲನನ್ನು ಎರಡು ಕೈಗಳಿಂದಲೂ ಹಿಡಿದೆತ್ತಿ ಶಿರಸ್ಸಿನಲ್ಲಿ ಆಘ್ರಾಣಿಸಿ ದೇವಿಯಾದ ಪಾರ್ವತಿಗೆ ಸಮರ್ಪಿಸಿದನು.

ದೇವೀ ತನಯಮಾಲೋಕ್ಯ ದದೌ ತಸ್ಮೈ ಗಿರೀಂದ್ರಜಾ ।
ಯೋಗೈಶ್ವರ್ಯಂ ತದಾ ತುಷ್ಟಾ ಬ್ರಹ್ಮವಿದ್ಯಾಂ ದ್ವಿಜೋತ್ತಮಾಃ ॥
ಸೋಽಪಿ ಲಬ್ಧ್ವಾ ವರಂ ತಸ್ಯಾಃ ಕುಮಾರತ್ವಂ ಚ ಸರ್ವದಾ।
ತುಷ್ಟಾವ ಚ ಮಹಾದೇವಂ ಹರ್ಷಗದ್ಗದಯಾ ಗಿರಾ ॥೬೧॥
ವರಯಾಮಾಸ ಚ ತದಾ ವರೇಣ್ಯಂ ವಿರಜೇಕ್ಷಣಂ ।
ಕೃತಾಂಜಲಿಪುಟೋ ಭೂತ್ವಾ ಪ್ರಣಿಪತ್ಯ ಪುನಃಪುನಃ ॥೬೨॥
ಪ್ರಸೀದ ದೇವದೇವೇಶ ತ್ವಯಿ ಚಾವ್ಯಭಿಚಾರಿಣೀ ।
ಶ್ರದ್ಧಾಂ ಚೈವ ಮಹಾದೇವ ಸಾನ್ನಿಧ್ಯಂ ಚೈವ ಸರ್ವದಾ ॥೬೩॥

---

೬೦ ಎಲ್ಲೈ ಬ್ರಾಹ್ಮಣ ಶ್ರೇಷ್ಠರೇ, ಪಾರ್ವತಿಯು ಪುತ್ರನಾದ ಆ ಬಾಲಕನನ್ನು ನೋಡಿ, ಅವನಿಗೆ ಯೋಗಾಭ್ಯಾಸದಿಂದುಂಟಾಗುವ ಅಣಿಮಾದ್ಯಿ ಅಷ್ಟೈಶ್ವರ್ಯಗಳನ್ನೂ ಮತ್ತು ಬ್ರಹ್ಮವಿದ್ಯೆಯನ್ನೂ ಅನುಗ್ರಹಿಸಿದಳು.

೬೧. ಆ ಬಾಲಕನು ಪಾರ್ವತಿಯಿಂದ ವರವನ್ನೂ ಮತ್ತು ಸದಾ ಕಾಲವೂ ಅವಳ ಪುತ್ರಭಾವವನ್ನೂ ಪಡೆದು ಸಂತೋಷದಿಂದ ಗದ್ಗದವಾದ ಮಾತಿನಿಂದ ಈಶ್ವರನನ್ನು ಸ್ತುತಿಸಿದನು.

೬೨. ಆ ಕಾಲದಲ್ಲಿ ಅಂಜಲಿಬದ್ಧನಾಗಿ ಮತ್ತೆ ಮತ್ತೆ ನಮಸ್ಕರಿಸಿ, ನಿರ್ಮಲಾಕ್ಷನೂ ಶ್ರೇಷ್ಠನೂ ಆದ ಪರಮೇಶ್ವರನನ್ನು ಕುರಿತು ಮುಂದೆ ಹೇಳುವರೀತಿಯಲ್ಲಿ ಪ್ರಾರ್ಥಿಸಿದನು.

೬೩. ಓ ದೇವೇಶನಾದ ಇಂದ್ರನಿಗೂ ಒಡೆಯನಾದ ಪರಮೇಶ್ವರನೇ, ನನಗೆ ನಿನ್ನಲ್ಲಿ ಶಾಶ್ವತವಾದ ಭಕ್ತಿಯನ್ನೂ, ಮನಸ್ಥೈರ್ಯವನ್ನೂ ಮತ್ತು ನಿನ್ನ ಸಾನ್ನಿಧ್ಯವನ್ನೂ ಎಂದರೆ ನಾನು ಸರ್ವದಾ ನಿನ್ನ ಸಮೀಪದಲ್ಲಿರುವುದನ್ನೂ, ಈ ವರಗಳನ್ನು ಅನುಗ್ರಹಿಸು.

ಏವಮುಕ್ತಸ್ತದಾ ತೇನ ಪ್ರಹಸನ್ನಿವ ಶಂಕರಃ ।
ದತ್ವೇಪ್ಸಿತಂ ಹಿ ವಿಪ್ರಾಯ ತತ್ರೈವಾಂತರಧೀಯತ ॥೬೪॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಉಪಮನ್ಯುಚರಿತ್ರಂ ನಾಮ ಸಪ್ತಾಧಿಕಶತತಮೋಽಧ್ಯಾಯಃ

---

೬೪. ಬಾಲಕನಾದ ಆ ಮುನಿಯು ಈ ಪ್ರಕಾರವಾಗಿ ಪ್ರಾರ್ಥಿಸಲು ಲೋಕ ಕಲ್ಯಾಣಕರನಾದ ಪರಮೇಶ್ವರನು ಅವನಿಗೆ ಇಷ್ಟಾರ್ಥಗಳನ್ನು ಹಾಗೆಯೇ ದಯಪಾಲಿಸಿ ಅಲ್ಲಿಯೇ ಅಂತರ್ಧಾನ ನಾದನು.

ಇಲ್ಲಿಗೆ ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಉಪಮನ್ಯುಚರಿತ್ರೆಯೆಂಬ ನೂರೇಳನೆಯ ಅಧ್ಯಾಯವು ಮುಗಿದುದು.

ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಅಷ್ಟಾಧಿಕ ಶತತಮೋಽಧ್ಯಾಯಃ

॥ ಋಷಯ ಊಚುಃ ॥

**ದೃಷ್ಟೋಽಸೌ ವಾಸುದೇವೇನ ಕೃಷ್ಣೇನಾಕ್ಲಿಷ್ಟಕರ್ಮಣಾ ।**
**ಧೌಮ್ಯಾಗ್ರಜಸ್ತತೋ ಲಬ್ಧಂ ದಿವ್ಯಂ ಪಾಶುಪತಂ ವ್ರತಂ ॥ ೧ ॥**

**ಕಥಂ ಲಬ್ಧಂ ತದಾಜ್ಞಾನಂ ತಸ್ಮಾತ್ ಕೃಷ್ಣೇನ ಧೀಮತಾ ।**
**ವಕ್ತುಮರ್ಹಸಿ ತಾಂ ಸೂತ ಕಥಾಂ ಪಾತಕನಾಶಿನೀಂ ॥ ೨ ॥**

॥ ಸೂತ ಉವಾಚ ॥

**ಸ್ವೇಚ್ಛಯಾ ಹ್ಯವತೀರ್ಣೋಽಪಿ ವಾಸುದೇವಃ ಸನಾತನಃ ।**
**ನಿಂದಯನ್ನೇವ ಮಾನುಷ್ಯಂ ದೇಹಶುದ್ಧಿಂ ಚಕಾರ ಸಃ ॥ ೩ ॥**

---

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರೆಂಟನೆಯ ಅಧ್ಯಾಯವು.

೧–೨. ಋಷಿಗಳು ಹೇಳಿದರು:—ಓ ಸೂತ ಮಹರ್ಷಿಯೇ, ಕಾರ್ಯವನ್ನು ಸುಲಭವಾಗಿ ಸಾಧಿಸುವವನಾದ ಶ್ರೀಕೃಷ್ಣನು ಧೌಮ್ಯ ಮಹರ್ಷಿಯ ಅಣ್ಣನಾದ ಉಪಮನ್ಯುವಿನ ದರ್ಶನವನ್ನು ಹೇಗೆ ಮಾಡಿದನು? ಅವನಿಂದ ಪಾಶುಪತವ್ರತವನ್ನು ಯಾವ ಪ್ರಕಾರದಿಂದ ಪಡೆದನು? ಮತ್ತು ಅವನಿಂದ ದಿವ್ಯವಾದ ಜ್ಞಾನವನ್ನು ಯಾವರೀತಿಯಿಂದ ಹೊಂದಿದನು? ಎಂಬ ಪಾಪ ಪರಿಹಾರಕವಾದ ಈ ಕಥೆಯನ್ನು ನನಗೆ ಹೇಳುವವನಾಗು.

೩. ಸೂತ ಮಹರ್ಷಿಯು ಹೇಳಿದನು:—ವಸುದೇವನ ಪುತ್ರನೂ, ಪುರಾತನನೂ ಆದ ಶ್ರೀಕೃಷ್ಣನು ತನ್ನ ಇಚ್ಛೆಯಿಂದಲೇ, ಇತರ ಜೀವರಂತೆ ಕರ್ಮಾಧೀನವಾಗಿ ಅಲ್ಲದೆ, ಧರ್ಮಸಂಸ್ಥಾಪನೆ ಗೋಸ್ಕರ ಭೂಲೋಕದಲ್ಲಿ ಮಾನವರೂಪದಲ್ಲಿ ಅವತರಿಸಿದನು. ಸಂಸಾರದಿಂದ ದುಃಖಿಗಳಾದ ಜೀವರಿಗೆ ನಿಷ್ಕಾಮ ಧರ್ಮಾಚರಣೆಯಿಂದ ಮನಸ್ಸು ಅರ್ಥಕಾಮಗಳಿಂದ ಹಿಂತಿ

ಪುತ್ರಾರ್ಥಂ ಭಗವಾಂಸ್ತತ್ರ ತಪಸ್ತಪ್ತುಂ ಜಗಾಮ ಚ ।
ಆಶ್ರಮಂ ಚೋಪಮನ್ಯೋರ್ವೈ ದೃಷ್ಟವಾಂಸ್ತತ್ರ ತಂ ಮುನಿಂ ॥

ನಮಶ್ಚಕಾರ ತಂ ದೃಷ್ಟ್ವಾ ಧೌಮ್ಯಾಗ್ರಜ ಮಹೋ ದ್ವಿಜಾಃ ।
ಬಹುಮಾನೇನ ವೈ ಕೃಷ್ಣ ಸ್ತ್ರಿಃಕೃತ್ವಾ ವೈ ಪ್ರದಕ್ಷಿಣಂ ॥ ೫ ॥

ತಸ್ಯಾವಲೋಕನಾದೇವ ಮುನೇಃ ಕೃಷ್ಣಸ್ಯ ಧೀಮತಃ ।
ನಷ್ಟಮೇವ ಮಲಂ ಸರ್ವಂ ಕಾಯಜಂ ಕರ್ಮಜಂ ತಥಾ ॥ ೬ ॥

---

ರುಗುವಂತೆಯೂ, ಮೋಕ್ಷಸಂಪಾದನೆಯಲ್ಲಿ ಆಸಕ್ತವಾಗುವಂತೆ ಉಪದೇಶವನ್ನು ಮಾಡಲು ಮನುಷ್ಯತ್ವವನ್ನು ನಿಂದಿಸುವವನಾಗಿ, ತನ್ನ ದೇಹವನ್ನು, ಲೋಕಸಂಗ್ರಹಕ್ಕಾಗಿ ನಿಷ್ಕಾಮ ಧರ್ಮಾಚರಣೆಯಿಂದ ಜನರಿಗೆ ಉತ್ತಮವಾದ ಉದಾಹರಣೆಯನ್ನೂ ತೋರಿಸುವವನಾಗಿ, ಶುದ್ಧಿಗೊಳಿಸಿದನು. ಏಕೆಂದರೆ ದೇಹವು ದುಷ್ಟವಾದರೂ ಧರ್ಮಾಸಕ್ತವಾಗಿದ್ದರೆ ಶುದ್ಧವೆನಿಸುತ್ತದೆ,

೪. ಷಡ್ಗುಣೈಶ್ವರ್ಯ ಯುಕ್ತನಾದ ಶ್ರೀಕೃಷ್ಣನು ಪುತ್ರಾರ್ಥಿಯಾಗಿ ತಪಸ್ಸನ್ನು ಅನುಷ್ಠಾನಮಾಡುವುದಕ್ಕೋಸ್ಕರ ಉಪಮನ್ಯುವಿನ ಆಶ್ರಮವನ್ನು ಪಡೆದವನಾಗಿ ಅಲ್ಲಿ ಮುನಿಯಾದ ಉಪಮನ್ಯುವನ್ನು ನೋಡಿದನು.

೫. ಎಲೈ ಬ್ರಾಹ್ಮಣರೇ, ಈ ರೀತಿಯಲ್ಲಿ ಉಪಮನ್ಯುವಿನ ಆಶ್ರಮವನ್ನು ಪಡೆದು ಅವನನ್ನು ಸಂದರ್ಶಿಸಿ, ಶ್ರೀಕೃಷ್ಣನು ಗೌರವ ಬುದ್ಧಿಯಿಂದ ಮೂರು ಬಾರಿ ಪ್ರದಕ್ಷಿಣೆಯನ್ನು ಮಾಡಿ, ನಮಸ್ಕರಿಸಿದನು.

೬. ಆ ಉಪಮನ್ಯುವಿನ ಸಂದರ್ಶನ ಮಾತ್ರದಿಂದಲೇ ಶ್ರೀಕೃಷ್ಣನ ಕಾಯಿಕವಾದ ಮತ್ತು ಸಕಲ ಕರ್ಮಜನ್ಯವಾದ ಪಾಪವೂ ನಷ್ಟವಾಯಿತು.

ಭಸ್ಮನೋದ್ಧೂಲನಂ ಕೃತ್ವಾ ಉಪಮನ್ಯುರ್ಮಹಾದ್ಯುತಿಃ ।
ತಮಗ್ನಿರಿತಿ ವಿಪ್ರೇಂದ್ರ ವಾಯುರಿತ್ಯಾದಿಭಿಃ ಕ್ರಮಾತ್ ॥ ೭ ॥
ದಿವ್ಯಂ ಪಾಶುಪತಂ ಜ್ಞಾನಂ ಪ್ರದದೌ ಪ್ರೀತಮಾನಸಃ ।
ಮುನೇಃ ಪ್ರಸಾದಾನ್ಮಾನ್ಯೋಽಸೌ ಕೃಷ್ಣಃ ಪಾಶುಪತಂ ದ್ವಿಜಾಃ ॥
ತಪಸಾ ತ್ವೇಕವರ್ಷಾಂತೇ ದೃಷ್ಟ್ವಾ ದೇವಂ ಮಹೇಶ್ವರಂ ।
ಸಾಂಬಂ ಸಗಣಮವ್ಯಗ್ರಂ ಲಬ್ಧವಾನ್ ಪುತ್ರಮಾತ್ಮನಃ ॥ ೯ ॥
ತದಾ ಪ್ರಭೃತಿ ತಂ ಕೃಷ್ಣಂ ಮುನಯಃ ಸಂಶಿತವ್ರತಾಃ ।
ದಿವ್ಯಾಃ ಪಾಶುಪತಾಃ ಸರ್ವೇ ತಸ್ಥುಃ ಸಂವೃತ್ಯ ಸರ್ವದಾ ॥೧೦॥

---

೭. ಎಲೈ ಬ್ರಾಹ್ಮಣೋತ್ತಮರೇ, ಮಹಾತೇಜಸ್ವಿಯಾದ ಆ ಉಪಮನ್ಯುವು ಈಶ್ವರನನ್ನು ಅಗ್ನಿಸ್ವರೂಪನೆಂದೂ ವಾಯುಸ್ವರೂಪನೆಂದೂ ಮುಂತಾಗಿ ತಿಳಿಸುವ ಮಂತ್ರಗಳಿಂದ ಅಭಿಮಂತ್ರಿಸಿದ ಭಸ್ಮದಿಂದ ದೇಹಕ್ಕೆ ಲೇಪನಮಾಡಿ, ಪ್ರಭಾವಯುಕ್ತವಾದ ಪಾಶುಪತವ್ರತದ ಜ್ಞಾನವನ್ನು ಶ್ರೀಕೃಷ್ಣನಿಗೆ ಉಪದೇಶಿಸಿದನು. (ಪಾಶುಪತಜ್ಞಾನವೆಂದರೆ ಹಿಂದೆ ಈಶ್ವರನಿಂದ ಉಪಮನ್ಯುವಿಗೆ ಉಪದೇಶಿಸಲ್ಪಟ್ಟ ಅದ್ವೈತವಾದ ಆತ್ಮಸ್ವರೂಪದ ಜ್ಞಾನವೆಂದರ್ಥವು. ಇದೇ ಬ್ರಹ್ಮವಿದ್ಯೆಯಾಗಿದೆ.

೮–೯. ಎಲೈ ಬ್ರಾಹ್ಮಣರೇ, ಉಪಮನ್ಯುವಿನ ಉಪದೇಶ ಉದಾಹರಣೆಗಳ ಅನುಗ್ರಹದಿಂದ ಗೌರವಕ್ಕೆ ಪಾತ್ರನಾದ ಆ ಶ್ರೀಕೃಷ್ಣನು ಆ ಗುರುವಿನ ಮೂಲಕ ಬ್ರಹ್ಮಜ್ಞಾನವನ್ನು ಹೊಂದಿದವನಾಗಿ, ಈಶ್ವರನನ್ನೇ ಕುರಿತು ತಪಸ್ಸನ್ನಾಚರಿಸಿ, ಒಂದು ವರ್ಷದ ಅಂತ್ಯಭಾಗದಲ್ಲಿ ಲೋಕಮಾತೆಯಾದ ಪಾರ್ವತಿಯಿಂದಲೂ, ಪ್ರಮಥ ಗಣಗಳೇ ಮೊದಲಾದ ಪರಿವಾರಗಳಿಂದಲೂ, ಯುಕ್ತನಾದ ಮತ್ತು ನಿಶ್ಚಿಂತನಾದ ಪರಮೇಶ್ವರನನ್ನು ಸಂದರ್ಶಿಸಿ, ಆವನ ಅನುಗ್ರಹದಿಂದ ಪುತ್ರನನ್ನು ಪಡೆದನು.

೧೦. ಉಪಮನ್ಯುವು ಶ್ರೀಕೃಷ್ಣನಿಗೆ ಜ್ಞಾನೋಪದೇಶವನ್ನು ಮಾಡಿದ ಮೊದಲುಗೊಂಡು ಅತ್ಯಂತ ಶುದ್ಧವಾದ ಆಚರಣೆಯುಳ್ಳ, ಪಶು

ಅನ್ಯಂ ಚ ಕಥಯಿಷ್ಯಾಮಿ ಮುಕ್ತ್ಯರ್ಥಂ ಪ್ರಾಣಿನಾಂ ಸದಾ ।
ಸೌವರ್ಣೀಂ ಮೇಖಲಾಂ ಕೃತ್ವಾ ಆಧಾರಂ ದಂಡಧಾರಣಂ ॥೧೧॥
ಸೌವರ್ಣಂ ಪಿಂಡಕಂ ಚಾಪಿ ವ್ಯಜನಂ ದಂಡಮೇವ ಚ ।
ನರೈಃ ಸ್ತ್ರಿಯಾಽಥವಾ ಕಾರ್ಯಂ ಮಷೀಭಾಜನಲೇಖಿನೀಂ ॥೧೨॥
ಕ್ಷುರಾ ಕರ್ತರಿಕಾ ಚಾಪಿ ಅಥ (ಜಲ)ಪಾತ್ರಮಥಾಪಿ ವಾ ।
ಪಾಶುಪತಾಯ ದಾತವ್ಯಂ ಭಸ್ಮೋದ್ಧೂಲಿತವಿಗ್ರಹೈಃ ॥೧೩॥

---

ಪತಿಯಿಂದ ಉಪದೇಶಿಸಿ ಪ್ರಚಾರಕ್ಕೆ ಬಂದಿರುವ, ಪಾಶುಪತವ್ರತದಲ್ಲಿ ನಿಷ್ಠರಾದ ಶಿವನ ಭಕ್ತರಾದ ಸಕಲ ಮುನಿಗಳೂ, ಕೃಷ್ಣನ ಸಮೀಪವನ್ನು ಪಡೆದವರಾದರು.

ಎಲೈ ಋಷಿಗಳೇ, ಪೂರ್ವೋಕ್ತವಾದ ವ್ರತಕ್ರಮವನ್ನಲ್ಲದೇ ಪ್ರಾಣಿಗಳಿಗೆ ಮೋಕ್ಷಕ್ಕೆ ಕಾರಣವಾದ (ಎಂದರೆ ಈ ಪಾಶುಪತವ್ರತದ ದೀಕ್ಷಾಗ್ರಹಣಕ್ಕೆ ಬೇಕಾಗುವ ಉಪಸ್ಕರಗಳ ದಾನರೂಪವಾದ ನಿಯಮ ವಿಶೇಷವನ್ನೂ ತಿಳಿಯಹೇಳುವೆನು. ಎಂದು ಭಾವವು.) ಬೇರೊಂದು ವ್ರತವನ್ನೂ ಹೇಳುವೆನು.

೧೧–೧೩. ಸುವರ್ಣಮಯವಾದ ಪ್ರಾಯಶಃ ಗಿಂಡಿ ಎಂಬ ಜಲಪಾತ್ರೆಯೊಂದನ್ನು ಮಾಡಿಸಿ ಜಲನಿರ್ಗಮಕ್ಕೆ ಅನುಕೂಲವಾಗುವಂತೆ ಒಂದು ನಳಿಕೆಯನ್ನು ಮಾಡಿಸಿ, ಅವೆರಡನ್ನೂ, ಈಶ್ವರ ಲಿಂಗವನ್ನೂ ಚಾಮರವನ್ನೂ ದೀಕ್ಷಾದಂಡ ಒಂದನ್ನೂ ಹಾಗೆಯೇ ಕತ್ತಿಯನ್ನೂ ಕತ್ತರಿಯನ್ನೂ, ಮತ್ತು ಒಂದು ಸುವರ್ಣದ ಪಾತ್ರೆಯನ್ನೂ, ಯಾವ ಸ್ತ್ರೀಯಾಗಲೀ ಅಥವಾ ಪುರುಷನಾಗಲಿ ಭಸ್ಮವನ್ನು ಲೇಪನಮಾಡಿಕೊಂಡವನಾಗಿ ಪಾಶುಪತವ್ರತನಿಷ್ಠನಾಗಿರುವ ಶಿವಭಕ್ತನಿಗೆ ದಾನ ಮಾಡಬೇಕು.

**ಸೌವರ್ಣಂ ರಾಜತಂ ವಾऽಪಿ ತಾಂಬ್ರಂ ವಾऽಥ ನಿವೇದಯೇತ್ ।**
**ಆತ್ಮವಿತ್ತಾನುಸಾರೇಣ ಯೋಗಿನಂ ಪೂಜಯೇದ್ಬುಧಃ ॥೧೪॥**

**ತೇ ಸರ್ವೇ ಪಾಪನಿರ್ಮುಕ್ತಾಃ ಸಮಸ್ತಕುಲಸಂಯುತಾಃ ।**
**ಯಾಂತಿ ರುದ್ರಪದಂ ದಿವ್ಯಂ ನಾತ್ರ ಕಾರ್ಯಾ ವಿಚಾರಣಾ ॥೧೫॥**

**ತಸ್ಮಾದನೇನ ದಾನೇನ ಗೃಹಸ್ಥೋ ಮುಚ್ಯತೇ ಭವಾತ್ ।**
**ಯೋಗಿನಾಂ ಸಂಪ್ರದಾನೇನ ಶಿವಃ ಕ್ಷಿಪ್ರಂ ಪ್ರಸೀದತಿ ॥೧೬॥**

**ರಾಜ್ಯಂ ಪುತ್ರಂ ಧನಂ ಭವ್ಯಮಶ್ವಂ ಯಾನಮಥಾಪಿ ವಾ ।**
**ಸರ್ವಸ್ವಂ ಚಾಪಿ ದಾತವ್ಯಂ ಯದೀಚ್ಛೇನ್ಮೋಕ್ಷಮುತ್ತಮಂ ॥೧೭॥**

---

೧೪. ಸುವರ್ಣಪಾತ್ರೆಯನ್ನು ಸಮರ್ಪಿಸಲು ಅಶಕ್ತನಾದವನು ಬೆಳ್ಳಿಯಪಾತ್ರೆಯನ್ನಾಗಲೀ ಅಥವಾ ತಾಮ್ರದ ಪಾತ್ರೆಯನ್ನಾಗಲಿ, ಸಮರ್ಪಿಸಬೇಕು. ಮತ್ತು ತನ್ನ ಯೋಗ್ಯತೆಗನುಸಾರವಾಗಿ ಶಿವಯೋಗಿಯನ್ನು ಪೂಜಿಸಬೇಕು.

೧೫. ಮೇಲೆ ಹೇಳಿದ ರೀತಿಯಿಂದ ಶಿವಯೋಗಿಯನ್ನು ಸತ್ಕರಿಸಿ ಪೂಜಿಸಿದವರು ಪಾಪರಹಿತರಾಗಿ ತಮ್ಮ ವಂಶದಲ್ಲಿ ಹುಟ್ಟಿದವರಿಂದ ಯುಕ್ತರಾಗಿ ರುದ್ರಸಾಯುಜ್ಯವನ್ನು ಪಡೆಯುವವರಾಗುವರು. ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲವು.

೧೬. ಆದುದರಿಂದ ಈ ಹಿಂದೆ ಹೇಳಿದ ವಸ್ತುಗಳನ್ನು ಯೋಗಿಗೆ ದಾನಮಾಡಿದ ಗೃಹಸ್ಥಾಶ್ರಮಿಯು ಈ ಸಂಸಾರಸಾಗರದಿಂದ ಪಾರಾಗುವನು. ಈ ಪ್ರಕಾರವಾಗಿ ಯೋಗಿಗಳಿಗೆ ದಾನಮಾಡಿದಲ್ಲಿ ಆ ಯೋಗಿಗಳ ಅನುಗ್ರಹದಿಂದ ಶಿವನು ಶೀಘ್ರದಲ್ಲಿಯೇ ಸಂತುಷ್ಟನಾಗುವನು.

೧೭. ಯಾವನು ಉತ್ತಮ ಪುರುಷಾರ್ಥವಾದ ಮೋಕ್ಷವನ್ನು ಬಯಸುವನೋ ಅವನು ರಾಜ್ಯವನ್ನೂ, ಧನವನ್ನೂ, ಅಶ್ವಗಳನ್ನೂ, ರಥಾದಿ ವಾಹನಗಳನ್ನೂ, ಇವೇ ಮೊದಲಾದ ಸಮಸ್ತ ವಸ್ತುಗಳನ್ನೂ ದಾನಮಾಡಬೇಕು.

**ಅಧ್ರುವೇಣ ಶರೀರೇಣ ಧ್ರುವಂ ಸಾಧ್ಯಂ ಪ್ರಯತ್ನತಃ ।**
**ಭವ್ಯಂ ಪಾಶುಪತಂ ನಿತ್ಯಂ ಸಂಸಾರಾರ್ಣವತಾರಕಂ ॥೧೮॥**
**ಏತದ್ವಃ ಕಥಿತಂ ಸರ್ವಂ ಸಂಕ್ಷೇಪಾನ್ನ ಚ ಸಂಶಯಃ ।**
**ಯಃ ಪಠೇಚ್ಛೃಣುಯಾದ್ವಾಽಪಿ ವಿಷ್ಣುಲೋಕಂ ಸ ಗಚ್ಛತಿ ॥೧೯॥**

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಅಷ್ಟೋತ್ತರ ಶತತಮೋಽಧ್ಯಾಯಃ

---

೧೮. ಅಶಾಶ್ವತವಾದರೂ ಈ ಶರೀರದಿಂದಲೇ ಶಾಸ್ತ್ರವನ್ನು ಅನುಸರಿಸಿ ಸರಿಯಾಗಿ ಪ್ರಯತ್ನವನ್ನು ಎಸಗಿದಲ್ಲಿ ನಿತ್ಯವಾದ ಪುರುಷಾರ್ಥವನ್ನು ಪಡೆಯಬಹುದು. ಹಿಂದೆಹೇಳಿದ ಪಾಶುಪತವ್ರತವು ಯಾವಾಗಲೂ, ಪುರುಷನನ್ನು ಸಂಸಾರಸಾಗರದಿಂದ ಪಾರುಮಾಡುವುದು.

೧೯. ಎಲೈ ಬ್ರಾಹ್ಮಣರೇ, ಪಾಶುಪತವ್ರತದ ಕಥೆಯನ್ನು ನಿಮಗೆ ವಿಶೇಷ ವಿವರಗಳೊಡನೆ ಸಂಕ್ಷೇಪನಾಗಿ ಹೇಳುವೆನು. ಇದನ್ನು ಯಾವ ಮನುಜನು ಪಠನಮಾಡುವನೋ ಕೇಳುವನೋ ಮತ್ತು ಆಚರಿಸುವನೋ ಅವನು ನಿಸ್ಸಂಶಯನಾಗಿಯೂ ವಿಷ್ಣುಲೋಕವನ್ನು ಪಡೆಯುವನು.

ಶ್ರೀ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ನೂರೆಂಟನೆಯ ಅಧ್ಯಾಯವು ಮುಗಿದುದು.

ಇಲ್ಲಿಗೆ ಪೂರ್ವಭಾಗವೂ ಸಮಾಪ್ತವಾಯಿತು.

ಶ್ರೀ ಸದಾಶಿವಾರ್ಪಣಮಸ್ತು



---

ಬೆಂಗಳೂರು ಪ್ರೆಸ್, ಮೈಸೂರು ಬ್ರಾಂಚಿನಲ್ಲಿ ಮುದ್ರಿಸಲ್ಪಟ್ಟಿತು.